ಹರಿಹರದೇವಕೃತ



# ಗಿರಿಜಾಕಲ್ಯಾಣಪ್ರಬಂಧ.

ಸಂಪಾದಕ

ಶಿ. ಚ. ನಂದಿಮಠ, ಎಮ್.ಎ., ಪಿಎಚ್.ಡಿ. (ಲಂಡನ್)

ಪ್ರಿನ್ಸಿಪಾಲ, ಲಿಂಗರಾಜ ಕಾಲೇಜ, ಬೆಳಗಾವಿ.



ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

ಸಾಹಿತ್ಯ ಸಮಿತಿ,

ಧಾರವಾಡ.

೧೯೪೩

ಮರುಜೀವನ ಶಿಲ್ಪ :-

## ಅರ್ಪಣ

ಮಾತೆಯ ಅಡಿದಾವರೆಗೆ

ಶಿ. ಚ. ನಂದಿಮಠ.

ಈ ಪುಸ್ತಕವನ್ನು ಶ್ರೀ. ಪಿ. ಆರ್. ಪವಾರ ಇವರು ಬೆಳಗಾವಿ ಮನೆಯ ಸಂ ಕ್ಷಿತ್ತಿ
ತಮ್ಮ ಕರ್ನಾಟಕ ಫೋಟೋ ಝಿಂಕೋ ಪ್ರೆಸ್ಸಿನಲ್ಲಿ ಮುದ್ರಿಸಿ
ಅಲ್ಲಿಯೇ ಪ್ರಕಟಿಸಿದರು.

# ಪ್ರಸ್ತಾವನೆ

ಗಿರಿಜಾಕಲ್ಯಾಣವನ್ನು ತಿದ್ದಿ ಚೆನ್ನಾಗಿ ಮುದ್ರಣಮಾಡಬೇಕೆಂಬ ಉದ್ದೇಶವು ಬಹಳ ದಿವಸಗಳಿಂದ ನನ್ನ ಮನದಲ್ಲಿ ಒಡಮೂಡಿತ್ತು. ಇದಕ್ಕಾಗಿ ಬೇಕಾಗುವ ಸಾಹಿತ್ಯವನ್ನು ಬಹಳ ದಿವಸಗಳಿಂದ ಕೂಡಿಸುತ್ತ ಬಂದಿರುವೆನು. ಆದರೂ ಅನಿವಾರ್ಯತೊಂದರೆಗಳ ಮೂಲಕ ನನ್ನ ಮನೀಷೆಯು ತೀವ್ರವಾಗಿ ನೆರವೇರುವ ಸಮಯವು ಒದಗಿ ಬರಲಿಲ್ಲ.

ಮುಂಬೈವಿಶ್ವವಿದ್ಯಾಲಯದವರು ಮುದ್ರಣ ವೆಚ್ಚಕ್ಕಾಗಿ ಕೆಲವು ಹಣವನ್ನು ಸಹಾಯಮಾಡಲು ಒಪ್ಪಿ ಪ್ರೋತ್ಸಾಹಿಸಿದರು. ಧಾರವಾಡ ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆಗೆ ಅಧೀನಪಟ್ಟ ಸಾಹಿತ್ಯ ಸಮಿತಿಯವರು ಇದನ್ನು ಪ್ರಸಿದ್ಧಮಾಡಲು ಸಂತೋಷದಿಂದ ಒಪ್ಪಿಕೊಂಡರು. ಇದಕ್ಕಾಗಿ ನಾನು ಇವರಿಗೆ ಋಣಿಯಾಗಿರುವೆನು.

ಹಳಗನ್ನಡಗ್ರಂಥಗಳನ್ನು ಶುದ್ಧವಾಗಿ ಮುದ್ರಿಸಲು ಮತ್ತು ಮೂಲಪಾಠಗಳನ್ನು ನಿಶ್ಚಯಿಸಲು ಕೈ ಬರಹದ ಹಳೆಯ ಪ್ರತಿಗಳ ಅಗತ್ಯವು ಬಹಳವಾಗಿದೆಯೆಂದು ಇಲ್ಲಿ ಉಲ್ಲೇಖಿಸುವ ಕಾರಣವಿಲ್ಲ. ಅನೇಕಮಹನಿಯರು ತಮ್ಮಲ್ಲಿರುವ ತಾಡವೋಲೆಯ ಪ್ರತಿಗಳನ್ನೂ ಕಾಗದದ ಪ್ರತಿಗಳನ್ನೂ ನನಗೆ ವಿಶ್ವಾಸದಿಂದ ಕೊಟ್ಟು ನನ್ನನ್ನು ಚಿರ ಋಣಿಯಾಗಿ ಮಾಡಿರುವರು. ಅವರ ಹೆಸರುಗಳನ್ನೂ ಅವರು ಕೊಟ್ಟ ಪ್ರತಿಗಳ ವರ್ಣನೆಯನ್ನೂ ಪೀಠಿಕೆಯಲ್ಲಿ ಉಲ್ಲೇಖಿಸಲಾಗಿದೆ. ಮೈಸೂರ ಓರಿಯಂಟಲ್ ಲೈಬ್ರರಿಯವರು ತಮ್ಮಲ್ಲಿರುವ ಕೈಬರಹದ ಪ್ರತಿಗಳನ್ನು ಕಳುಹಿಸಿಕೊಟ್ಟು ನನ್ನ ಮೇಲೆ ಬಹಳ ಉಪಕಾರ ಮಾಡಿರುವರು. ಈ ವಿಷಯದಲ್ಲಿ ಲೈಬ್ರರಿಯ ಕ್ಯೂರೇಟರರಾದ ಶ್ರೀಮಾನ್ ಎಮ್. ಎಸ್. ಬಸಲಿಂಗಯ್ಯನವರು ಎಮ್. ಎ, ಬಿ. ಎಲ್- ಇವರಿಗೆ ಋಣಿಯಾಗಿರುವೆನು.

ನನಗೆ ಅನೇಕ ರೀತಿಯಿಂದ ಸಲಹೆಗಳನ್ನು ಕೊಟ್ಟು ಪ್ರೋತ್ಸಾಹಿಸಿದ ಶ್ರೀ. ವ್ಹಿ. ಬಿ. ಹಾಲಭಾವಿಯವರಿಗೂ, ಪ್ರೊಫೆಸರ ಶಿ. ಶಿ. ಬಸವನಾಳ ಇವರಿಗೂ ಅತ್ಯಂತ ಋಣಿಯಾಗಿರುವೆನು.

ಪ್ರತಿಯನ್ನು ಮುದ್ರಣಕ್ಕಾಗಿ ಸಿದ್ಧ ಮಾಡಲು ಅನೇಕ ರೀತಿಯಿಂದ ಸಹಾಯ ಮಾಡಿದ ನನ್ನ ಮಿತ್ರರಿಗೂ ಅನೇಕ ತೊಂದರೆಗಳನ್ನು ಲೆಕ್ಕಿಸದೆ ಮುದ್ರಣ ಮಾಡಿಕೊಟ್ಟ ಕರ್ನಾಟಕ ಫೋಟೋ ಝಿಂಕೋ ಪ್ರೆಸ್ಸಿನ ಒಡೆಯರಾದ ಶ್ರೀ ಪಿ. ಆರ್. ಪವಾರ ಇವರಿಗೂ ನನ್ನ ಕೃತಜ್ಞತೆಗಳು.

ಲಿಂಗರಾಜ ಕಾಲೇಜ,
ಬೆಳಗಾವಿ.
೩೦-೬-೧೯೪೩

**ಶಿ. ಚ. ನಂದಿಮಠ**

# ಪ್ರಕಾಶಕರ ಮುನ್ನುಡಿ

ನಮ್ಮ ಸಾಹಿತ್ಯ ಸಮಿತಿಯ ಪರವಾಗಿ ಹಂಪೆಯ ಹರಿಹರದೇವನ ಸಮಗ್ರ ಗ್ರಂಥಗಳನ್ನು ಪ್ರಕಟಿಸಬೇಕೆಂಬ ಉದ್ದೇಶಕ್ಕೆ ಅನುಗುಣವಾಗಿ ಆತನ ಸುಪ್ರಸಿದ್ಧ ಚಂಪುಕಾವ್ಯವಾದ ಗಿರಿಜಾಕಲ್ಯಾಣ ಪ್ರಬಂಧವನ್ನು ಇದೀಗ ಪ್ರಕಟಿಸಲು ನಮಗೆ ಸಂತೋಷವೆನಿಸುತ್ತದೆ. ಈ ಮೊದಲೇ ಸಮಿತಿಯಿಂದ ಪ್ರಕಟವಾದ ಕಾವ್ಯಗ್ರಂಥಗಳಂತೆ ಈ ಗ್ರಂಥವಾದರೂ ಅನೇಕ ಕೈಬರಹದ, ತಾಳ ಓಲೆಯ ಮುದ್ರಿತ ಗ್ರಂಥಗಳ ಆಧಾರದ ಮೇಲೆ ಆದಷ್ಟು ಶುದ್ಧವಾದ ಪಾಠಗಳನ್ನೊಳಕೊಂಡಿದೆ. ಮಹತ್ವದ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ.

ಇದರ ಸಂಪಾದಕರಾದ ಡಾಕ್ಟರ್ ಶಿ. ಚ. ನಂದಿಮಠ ಎಂ. ಎ., ಪಿಎಚ್.ಡಿ ಅವರು ತಮ್ಮ ಕಾರ್ಯವನ್ನು ಒಳ್ಳೆದಕ್ಷತೆಯಿಂದಲೂ ಜಾಗ್ರತೆಯಿಂದಲೂ ನಿರ್ವಹಿಸಿಕೊಟ್ಟುದುಕ್ಕಾಗಿ ಸಮಿತಿಯು ಅವರಿಗೆ ತುಂಬಾ ಅಭಾರಿಯಾಗಿದೆ. ಈ ಪರಿಷ್ಕರಣಕ್ಕೆ ಕವಿಕಾವ್ಯ ಮುಂತಾದವುಗಳ ಬಗೆಗೆ ಪ್ರಸ್ತಾವನೆ ಒಂದನ್ನು ಬರೆಯುಬೇಕೆಂಬ ಸಂಪಾದಕರ ಇಚ್ಛೆಯು ಕಠಿಣ ಶಬ್ದಗಳ ಕೋಶವನ್ನು ಜೋಡಿಸಬೇಕೆಂಬ ಸಮಿತಿಯವರ ಆಶೆಯು ಕಾರಣಾಂತರದಿಂದ ಸಾಧಿಸದೆ ಹೋದುದಕ್ಕಾಗಿ ನಮಗೆ ವಿಷಾದವೆನಿಸುತ್ತದೆ. ಎಷ್ಟು ಜಾಗ್ರತೆ ವಹಿಸಿದರೂ ಕನ್ನಡದಲ್ಲಿ ಪರಿಶ್ರಮವಿಲ್ಲದ ಮುದ್ರಣಾಲಯ ಗೋಸುಗ ಅನಿವಾರ್ಯವಾಗಿ ಕೆಲವು ಮುದ್ರಣದೋಷಗಳು ಅಲ್ಲಲ್ಲಿ ತಲೆದೋರಿದುದಕ್ಕೂ ವಿಷಾದವೆನಿಸುತ್ತಿದೆ. ಮುಂದಿನ ಪರಿಷ್ಕರಣದಲ್ಲಿ ಈ ಎಲ್ಲ ಕೊರತೆಗಳನ್ನು ತುಂಬಿಕೊಳ್ಳುವೆನೆಂಬ ಭರವಸೆ ಇದೆ. ಸಾಮಾನ್ಯ ಓದುಗರ ಸೌಕರ್ಯಕ್ಕಾಗಿ ಚಿಕ್ಕದಾದ ಕವಿಪರಿಚಯವನ್ನು ಜೋಡಿಸಲಾಗಿದೆ.

ಪ್ರಕಾಶಕರು

# ಕವಿ ಪರಿಚಯ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಹರಿಹರದೇವನು ಅಮೋಘವಾದ ಶಕ್ತಿಯುಳ್ಳ ಕವಿಯು. ಭಕ್ತನ ಉತ್ಕಟ ಭಾವ, ಕವಿಯ ಶಕ್ತಿಯುತ ವಾಣಿ ಇವುಗಳ ಸಮರಸ ಆತನ ಕಾವ್ಯಗಳಲ್ಲಿ ಕಂಡು ಬರುತ್ತಿದೆ. ಚಂಪೂ ಸಂಪ್ರದಾಯದ ಲಕ್ಷಣಗಳೆಂಬ ಹೊನ್ನ ಸಂಕಲೆಯಿಂದ ಕನ್ನಡ ಕಾವ್ಯವನಿತೆಯನ್ನು ಬಿಡುಗಡೆ ಮಾಡಿದ ಕೀರ್ತಿ ಹರಿಹರದೇವನದು. ಭಾರವಾದ ತೊಡವುಗಳಿಂದ ಕೊರಗುತ್ತಿದ್ದ ಕನ್ನಡ ಕಾವ್ಯವನಿತೆಯು ಭಾರವನ್ನು ಇಳುಹಿದನು ಹರಿಹರ. ಹಾಗೆ ಭಾರ ಇಳಿಸಿ ಅವಳಿಗೆ ಪುಷ್ಟಿಯನ್ನಿತ್ತು ಅವಳನ್ನು ಬೆಳೆಸಿ ನವೀನವಾದ-ಆದರೆ ಭಾರವಲ್ಲದ-ರೀತಿಯಲ್ಲಿ ಆಲಂಕರಿಸಿ ಹಂಪೆಯ ಪಂಪಾಪತಿಗೆ ತಕ್ಕ ವಧುವನ್ನಾಗಿ ಮಾಡಿದನು ಈ ಭಕ್ತಕವಿ.

ಹರಿಹರದೇವನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯೋದ್ದೇಶ, ಸಾಹಿತ್ಯರೂಪ, ಭಾಷಾಸ್ವರೂಪ ಹೀಗೆ ಮೂರೆರನಾದ ಕ್ರಾಂತಿಗೆ ಕಾರಣನಾಗಿದ್ದಾನೆ.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾ
ಮನವರತಂ ಪೊಗಟ್ದು ಕಿಡಬೇಡಲೆ ಮಾನವ ನೀನಹರ್ನಿಶಂ
ನೆನೆ ಪೊಗೞರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ

ಎಂಬ ಪದ್ಯದಿಂದ ಈತನ ಕಾವ್ಯೋದ್ದೇಶ ವ್ಯಕ್ತವಾಗುತ್ತಿದೆ. ಈತನ ಈ ಸಂಪ್ರದಾಯವನ್ನೇ ಮುಂದಿನ ಎಲ್ಲ ವೀರಶೈವ ಕವಿಗಳು ಅನುಸರಿಸಿದ್ದಾರೆ.

ವಸ್ತುಕ ಕಾವ್ಯದಿಂದಲೇ ಕವಿಯ ಕೀರ್ತಿ ಹೆಚ್ಚುವುದೆಂಬ ನಂಬುಗೆ ಇದು ವರೆಗೆ ಬಳೆದು ಬಂದಿತ್ತು. ಹರಿಹರದೇವನು ಅದನ್ನು ಹೊಡೆದೋಡಿಸಿ ಹೃದಯಂಗಮವಾದ ರಗಳೆಗಳನ್ನು ರಚಿಸಿದನು; ಷಟ್ಪದಿಗಳಿಗೆ ಹಾದಿ ಹಾಕಿಕೊಟ್ಟನು. ಈತನಿಂದಲೇ ಕನ್ನಡ ಕಾವ್ಯನಂದನದಲ್ಲಿ ವರ್ಣಕ ಕಾವ್ಯಗಳು ಸೊಗಸಿನ ಪುಷ್ಪಗಳಾಗಿ ಅರಳತೊಡಗಿದುವು.

ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನುಂ
ಕೂಡೆ ಕವಿತತಿ ವಿಚಾರಿಸ
ಲೀಡದಱಿಂ ಱಟ-ಕುಳ-ಕ್ಷಳಂಗಳನಿವಱೊಳ್

ಎಂಬ ಪದ್ಯದಲ್ಲಿ ಹರಿಹರನ ಧೀರತನದ ಹೊಸ ಹಾದಿ ಕಂಡುಬರುತ್ತಿದೆ. ಱಟ, ಕುಳ, ಕ್ಷಳಗಳ ತೊಡಕನ್ನು ತೊಡೆದು ಹಾಕಲು ಮುಂಬಂದ ಎದೆಗಾರನಿವನು. ರಗಳೆಗಳಲ್ಲಿ ಹೊಸ ರೀತಿಯು ಭಾಷೆಯನ್ನು ಅನುಸರಿಸಿ ಹರಿಹರನು ಕನ್ನಡ ಭಾಷೆಯ ಹೊಸ ಸ್ವರೂಪಕ್ಕೆ ಕಾರಣನಾಗಿದ್ದಾನೆ.

ಹರಿಹರದೇವನು ವೀರಶೈವರಲ್ಲಿ ಅಗ್ರಕವಿ; ಪೂಜ್ಯಕವಿ. ಪಂಪನಿಗೆ ಜೈನ ಕವಿಗಳು ತಮ್ಮ ಕಾವ್ಯಗಳಲ್ಲಿ ಸಲ್ಲಿಸಿದ ಗೌರವವನ್ನು ಈತನಿಗೆ ಮುಂದಿನ ವೀರಶೈವ ಕವಿಗಳು ಸಲ್ಲಿಸಿದ್ದಾರೆ. ಈತನು ವರ್ಣಕ ಕಾವ್ಯಸಂಪ್ರದಾಯದ ಆದಿ ಕವಿಯೂ ಅಹುದು.

ಹರಿಹರನು ಪಂಪಾಕ್ಷೇತ್ರದವನು. ದ್ವಾರಸಮುದ್ರದ ಅರಸರಲ್ಲಿ ಕರಣಿಕನಾಗಿದ್ದನು. ಮನುಜರ ಸೇವೆ ಬೇಡವೆನಿಸಿದ್ದರಿಂದ ಹಂಪೆಯಲ್ಲಿಯೇ ನೆಲಸಿ ಕಾವ್ಯ ರಚಿಸಿದನು. "ಉಭಯಕವಿಶರಭಭೇರುಂಡ"ನಾದ ರಾಘವಾಂಕನು ಈತನಿಗೆ ಸೋದರಳಿಯನೂ ಶಿಷ್ಯನೂ ಆಗಿದ್ದನು. ಇವರಿಬ್ಬರೂ ಕೆರೆಯ ಪದ್ಮರಸನೂ ಸಮಕಾಲೀನರೆಂದೂ ಅವರ ಕಾಲ ೧೧೬೫ ಎಂದೂ ಕವಿಚರಿತೆಕಾರರ ಹೇಳಿಕೆ. ಡಾ. ವೆಂಕಟಸುಬ್ಬಯ್ಯನವರು ಹರಿಹರನ ಕಾಲವನ್ನು ಒಂದು ಶತಮಾನ ಮುಂದೆ ಒಯ್ಯುತ್ತಾರೆ. ಗೋವಿಂದ ಪೈ ಅವರು ಕವಿಚರಿತ್ರೆಕಾರರ ಅಭಿಪ್ರಾಯವೇ ಸರಿಯೆಂದು ವಾದಿಸುತ್ತಿದ್ದಾರೆ. ಪ್ರೊ. ಕುಂದಣಗಾರ ಮತ್ತು ಮೂಳವಾಡರವರು ಹರಿಹರನ ಕಾಲ ೧೨೧೬ ಎಂದು ಸಾಧಿಸಲು ಯತ್ನಿಸಿದ್ದಾರೆ. ಬಸವಣ್ಣನವರು, ಅಲ್ಲಮಪ್ರಭು, ಅಕ್ಕಮಹಾದೇವಿ ಇವರನ್ನು ಕುರಿತು ರಗಳೆಗಳನ್ನು ರಚಿಸಿರುವುದರಿಂದ ಈ ಕವಿ ಅವರಿಂದ ಈಚೆಯವನೆಂದೂ ಈತನ ಗಿರಿಜಾ ಕಲ್ಯಾಣದೊಳಗಿನ ಕೆಲ ಪದ್ಯಭಾಗಗಳು ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಸಿಕ್ಕುವುದರಿಂದ ಆತನಿಗಿಂತ ಮೊದಲಿನವನೆಂದೂ ಸದ್ಯಕ್ಕೆ ಇಟ್ಟುಕೊಳ್ಳಬಹುದು.

ಈ ಕವಿಯು ಗಿರಿಜಾಕಲ್ಯಾಣ, ಪಂಪಾಶತಕ, ಮುಡಿಗೆಯ ಅಷ್ಟಕ, ರಕ್ಷಾಶತಕ ಎಂಬ ಗ್ರಂಥಗಳನ್ನು ಅಲ್ಲದೆ ನೂರಿಪ್ಪತ್ತು ಶಿವಶರಣರ ರಗಳೆಗಳನ್ನು ಬರೆದಿದ್ದಾನೆ.

ಹರಿಹರನು ಹಿರಿಯಕವಿ, ಭಕ್ತ, ಕ್ರಾಂತಿಪುರುಷ. ಈ ಮಹಾಕವಿಯ ಪಾಂಡಿತ್ಯದಿಂದೊಡಗೂಡಿದ ಪ್ರತಿಭೆ, ಈ ಶ್ರೇಷ್ಠಭಕ್ತನ ತಲ್ಲೀನತೆ, ಈ ಎದೆಗಾರ ಕ್ರಾಂತಿಪುರುಷನ ಭಾಷೆಯ ಇಂಪು, ಇವುಗಳ ಮುಪ್ಪುರಿಯು ಕನ್ನಡಿಗರಿಗೆ ಎಂದೂ ಬತ್ತದ ಸೊಗಸಿನ ಬುಗ್ಗೆಯಾಗಿವೆ.

# ಗಿರಿಜಾಕಲ್ಯಾಣಂ.

## ॥ ಕಥಾಗರ್ಭಂ ॥

ಸ್ವಸ್ತಿ ಸಮಸ್ತಸಮುದ್ರಮುದ್ರಿತ[1]ಧರಿತ್ರೀಕಾಂತೆಯ ನಾಭೀಕಮಲಮಧ್ಯಸ್ಥಿತಕರ್ಣಿಕೆಯಂತಿರ್ಪ ಮೇರುವಿನ ದಕ್ಷಿಣದಿಕ್ಕಿನಲ್ಲಿ ಮೂಡಣ[2] ಜಲಧಿಯಿಂ ಪಶ್ಚಿಮವಾರ್ಧಿಪರ್ಯಂತರಂ ಪರ್ವಿದ ಪರ್ವತಾಧೀಶ್ವರಂ ಗಿರಿರಾಜನೆಂಬ ನಾಮದಿಂದೋಷಧಿಪ್ರಸ್ಥಮೆಂಬ ಪುರದೊಳಿರ್ದು ಪಿತೃಗಳ ಮನದೊಳ್ ಪುಟ್ಟಿದ ಮೇನಾದೇವಿಯಂ ವಿವಾಹಮಾಗಿ ಕೆಲವು ದಿವಸಕ್ಕೆ ಮೈನಾಕನೆಂಬ ಪುತ್ರನಂ[3] ಪಡೆದು ಪಲವುದಿನಂ ಸುಖದೊಳಿರುತ್ತುಂ ದಾಕ್ಷಾಯಣಿ ತನ್ನ ಬಸಿಱೊಳ್ ಬರ್ಪ ವರಮಂ ಬಯಸಿ ಮೇನೆ ತಪದೊಳಿರಲಿತ್ತಲ್ [4]ದಾಕ್ಷಾಯಣಿ ದಕ್ಷಯಾಗಕ್ಕೆ ಬಿಜಯಂಗೆಯ್ದು ನಿಜೇಶನ[4] ನಿಂದೆಯಂ ಕೇಳಲಾಱದೆ ನಿಜಯೋಗದೊಳ್ ಸಂದು[5] ಮೇನೆಯ ಘನಪುಣ್ಯೋದರದೊಳ್ ಪೊಕ್ಕು ಕರುಣದಿಂ ಬಂದಪೆನೆಂದು ಬೆಸಸೆ ಮೇನೆಯಱಿದು ಪರಮಹರ್ಷದಿಂ ತಿರುಗಿ ಪುರಮಂ ಪೊಕ್ಕು ಗಿರಿರಾಜನ ಸಂಗಸುಖಮಂ ಸಾರ್ದು ಮಂಗಳಾಕಾರೆಯಾಗಿರೆ ಕೆಲವು ದಿನಕ್ಕೆ ಗರ್ಭಮುದಯಿಸಿ ನವಮಾಸಂ ತೀವಿ ಕನ್ಯಾರತ್ನಮಂ ಪಡೆದು ಜಾತಕರ್ಮಮನನುಕರಿಸಿ[6] ಪಾರ್ವತಿಯೆಂದು ನಾಮಕರಣಮಂ ಮಾಡಿ ಪರಮಕಾರುಣಿಕೆಯೆಂದಱಿಯದೆ ಪುತ್ರಿಯೆಂಬ ಪ್ರೇಮದಿಂ ಮಂದಿವಾಳತನದಿಂ ಸಲಪುತ್ತಿರೆ ಬಾಲಲೀಲೆಯಂ ಕಳೆದು ದಿವ್ಯಕನ್ಯಕೆಯಾಗಿರ್ಪಲ್ಲಿ ಗಿರಿರಾಜಂ

---

೧. ಧರಣೀಕಾಂತಾ ( ಕಾ. ಕೊ. ಕ. ಓ. ); ಧರಿತ್ರೀಕಾಂತಾ ( ಮ . ಡ ). ೨. ಪೂರ್ವ (ಬೆ.ಮ).
೩. ಕುಮಾರನಂ (ಅ). ೪. ಭವಾನಿ ದಕ್ಷನಯಾಗಕ್ಕೆ ನಡೆತಂದು ಶಿವ ( ಮ.ಗೊ.ಯ.ದಾ.ಡ ); ದಾಕ್ಷಾಯಣಿ ದಕ್ಷಯಾಗಕ್ಕೆ ಬಿಜಯಂಗೆಯ್ದು ಶಿವ ( ಕ ); ದಾಕ್ಷಾಯಣಿ ದಕ್ಷಯಾಗಕ್ಕೆ ನಡೆತಂದು ಶಿವ (ಸೆ).
೫. ದಿಂ ಬಂದು ( ಬ.ದಾ.ಗೊ.ಡ.ಯ. ); ದಿಂ ನಡೆತಂದು ( ಅ ).
೬. ಸಲಂಕರಿಸಿ ( ದಾ. ಬ. ಮ.ಡ.ಅ.ಯ.ಗೊ.ಕ. ).

ಹರನರಸಿಯೆಂಬುದಂ ಮಱೆದು ಪುತ್ರೀ[೧]ವಿವಾಹಸದೃಶವರಾಪೇಕ್ಷಚಿತ್ತನಾಗಿರ್ಪ ಸಮಯದೊಳ್ ದೇವಲೋಕದಿಂ ನಾರದಮುನಿಯಿಳಿತಂದು ಗಿರಿಜಾತೆಯುಂ ಕಂಡು ಚರಣಕ್ಕೆಱಗಿ ಈಮಹಾಮಹಿಮನಿಧಿಯಪ್ಪ ಪಾರ್ವತಿಯುಂ ನಿಮ್ಮ ಮಗಳೆಂಬುದಾಸೀನಂ ಬೇಡ ವಿರೂಪಾಕ್ಷನರ್ಧಾಂಗಿ ಸರ್ವಕಾರಣದಿಂ ಮೇನೆಯ ತಪಸ್ಸಿಂಗೆ ಕರುಣಿಸಿ ನಿಮ್ಮುದರದೊಳ್ ಬಂದಳೀ ಹೈಮವತಿಯುಂ ಹೇಮಕೂಟದೊಳ್ ನಿಜಾವಲೋಕನ ಸಮಾಧಿಷ್ಠನಾಗಿರುತಿರ್ಪ ಸರ್ಪಾಭರಣನಲ್ಲಿಗೆ ಕಳಿಪುವುದೆಂದು ನಾರದಮುನಿ ಪೇಳ್ದು ಪೋಗೆ ನಗಾಧೀಶಂ ಮಿಗೆ ವಿಸ್ಮಿತನಾಗಿ ಪಾರ್ವತಿಯುಂ ಪುಷ್ಪಕಮನೇಱಿಸಿ ಜಯೆವಿಜಯೆಯರೆಂಬ ವಿಳಾಸಿನಿಯರ್ ಸಹಿತಂ ಗಗನಮಾರ್ಗದೊಳೆಯ್ತಂದು ಹೇಮಕೂಟದೊಳಿಳಿದು ಹರನಂ ತೋಱಿ ಗಿರಿರಾಜಂ ಮರಳ್ದು ಪೋಗೆ ನಿತ್ಯಪೂಜಾಸಕ್ತೆಯಾಗಿ ಗಿರಿಜೆ ಶಿವಪ್ರಸಾದಮಂ ಬಯಸಿ ಭಕ್ತಿಯಿಂದರ್ಚಿಸುತ್ತುಮಿರಲಿತಲ್ ತಾರಕಾಸುರನ ಬಾಧೆಗಾಱದೆ ಹರಿಬ್ರಹ್ಮೇಂದ್ರಾದಿ ದೇವರ್ಕಳ್ ಕಾದಿ ಸೋಲ್ತು ಮಂತ್ರಾಲೋಚನೆಮೊಳಿರ್ದು ಸುರಗುರುವಂ ಕಳುಪಿ ಕಾಮನಂ ಕರೆಯಿಸಿ ಹರನ ಚಿತ್ತಮಂ ಚಲಿಯಿಸಿ ಕಡುತಪಮಂ ಕಿಡಿಸೆಂದು ಪೇಳೆ ಹಸಾದಮೆಂದು ತನ್ನ ಚತುರಂಗಬಲಂಬೆರಸು ಬಂದು ಹೇಮಕೂಟಮಂ ಸುತ್ತಿಮುತ್ತಿ ನಂದೀಶ್ವರನ ನಸುಗೋಪದಿಂ ಬಲಮೆಲ್ಲಂ ಮಾಯಮಾಗೆ ನಿತ್ಯಪೂಜೆಗೆ ಬರ್ಪ ಪಾರ್ವತಿದೇವಿಯರನುಮತಿಯಿಂದವರ ಪುಷ್ಪಕದ ನೆಳಲೊಳಡಗುತ್ತೊಳಗಂ ಪೊಕ್ಕು ಮತಂಗ ಪರ್ವತಮನೇಱಿ ಪಂಚಮುಖನಂ ಪಂಚಬಾಣದಿಂದಿಸಲೊಡಂ ವಿಷಧರನೆಚ್ಚೆತ್ತು ಕಣ್ದೆಱೆದುನೋಡಿ ಮುಂದಿರ್ಪ ಪಾರ್ವತಿಯುಂ ಕಂಡು ಕೌತುಕಂಗೊಂಡು ತಿರುಗಿ ನೋಡಿ [೧೦]ಕಾಮಂಗೆ ಕೋಪಿಸವಲ್ಲಿಂ

೧. ವಿವಾಹಕ್ಕೆ ಸಾದೃಶ್ಯವರಾಪೇಕ್ಷಿತ ಚಿತ್ತ ( ಬ ); ವಿವಾಹ ಸಾದೃಶ್ಯವರಾಪೇಕ್ಷಿತ ( ಕ. ಮ ). ೨. ಮಹಿಮಾನಿಧಿ (ಬ); ಮಹಾದೇವಿ (ಮ); ಮಹಾಮಹಿಮಾನಿಧಿ (ಕ). ೩. ಮಗಳೆಂಬುದಾಸೀನಂ ಮಾಡಲ್ ಬೇಡ ( ಅ ); ಮಗಳೆಂಬುದಾಸೆಯುಂ ಬೇಡ ( ಗ ); ಮಗಳೆಂಬುದಾಗಿ ನಂಬಬೇಡ ( ಕ ). ೪. ಸಮಾಧಿನಿಷ್ಠ ( ಬ. ಮ. ). ೫. ಗಳೆಂಬ ( ಅ. ಕ. ). ೬. ಮಗುಳ್ದು ( ಬ ). ೭. ಮಿರ್ಪನ್ನೆಗ ಮಿತ್ತಲ್ ( ಬಿ ); ಮಿರಲಿತ್ತ ( ಬ. ದು ); ಮಿತ್ತಲಿರಲತ್ತ ( ಅ ). ೮. ನಂಗೆಯ್ದು ( ಬ. ಅ. ಗ. ). ೯. ಪಾರ್ವತೀ ದೇವಿಯರ್ ಬರುತಿರಲವರನುಮತದಿಂದವರ ನೆಳಲೊಳಡಗುತ್ತೊಳಗಂ ಪೊಕ್ಕುಂ ( ಮ. ಬ ); ಪಾರ್ವತೀದೇವಿಯರ್ ಬರಲನುಮತಿಯಿಂ ಪುಷ್ಪಕದ ನೆಳಲೊಳಡಂಗುತ್ತೊಳಗಂ ಪೊಕ್ಕು ( ಕ ). ೧೦. ಕಾಮನಂ ( ಬ ).

ಮುನ್ನಂ ಭಾಳಲೋಚನಾಗ್ನಿಯಿಂ ಪಂಚಶರನುರಿದು ನಿಲೆ ಪರಿತಂದು ಪದತಳದಿಂ ತುಳಿದು ಸ್ಮರಭಸ್ಮಾವಯವನಾಗಿ ದೇವಿಯರಿರವಂ ನೋಡದೆ ಕಂತುಹರನಂತರ್ಧಾನಕ್ಕೆ ಸಂದುದಂ ಗಿರಿಜೆಯಱಿದು ಶೋಕಿಸುವ ರತಿಗಭಯಮನಿತ್ತು ಭರ್ಗನರಸಿಯುಗ್ರತಪದೊಳ್ ದಿವ್ಯಸಹಸ್ರಾಬ್ದಪರ್ಯಂತರಮಿರೆ ತಪಸ್ತೇಜಂ ಕಪರ್ದಿಯಂ ಮುಟ್ಟೆ ಶಂಕರನಱಿದು ಭೋಂಕನೆ ಬಂದು [1]ಗಿರಿಜೆಯ ಚಿತ್ತಮಂ ಪರೀಕ್ಷಿಸಿ[1] ನಿಜರೂಪಮಂ ತೋಱಿ ರತಿದೇವಿಗೆ ಕಾಮನನಂಗನಂ ಮಾಡಿ ಕೊಟ್ಟು ಪಾರ್ವತಿಯಂ ಗಿರಿರಾಜನಲ್ಲಿಗೆ ಕಳುಪಿ ಕೈಲಾಸಕ್ಕೆ ಬಂದು[2] ಹರಿಬ್ರಹ್ಮೇಂದ್ರಾದಿದೇವಗಣಂಗಳಂ ಸಕಲ ಋಷಿಯರಂ[2] ಕೂಡಿಕೊಂಡು ಶೂಲಧರಂ [3]ಶೈಲರಾಜನಲ್ಲಿಗೆ ಬಂದು[3] [4]ಪಾರ್ವತಿಯಂ[4] ಮಹೋತ್ಸಾಹದಿಂ ವಿವಾಹವಾಗಿ ಕೈಲಾಸಕ್ಕೆ ನಡೆತಂದು ಸುಖದೊಳಿರ್ದು ಪುಟ್ಟಿದ ಷಡಾನನನಿಂ ತಾರಕಾಸುರನಂ ತೀರ್ಚಿಸಿ ಸಕಲಲೋಕಕ್ಕೆ ಸಂತಸಮನೊಡರ್ಚಿಸಿ ಕಂತುಮದಮರ್ದನಂ ಪಂಪಾವಿರೂಪಾಕ್ಷಂ ಸುಖಸಂಕಥಾವಿನೋದದಿಂ ಸಕಲಭಕ್ತರ್ಗೆ ವರಮಂ ಕರುಣಿಸುತಿರ್ದನೆಂಬ ಗಿರಿಜಾಕಲ್ಯಾಣ[5]ಕಥಾಕಾವ್ಯಮಂ ಹಂಪೆಯ [6]ಮಾದರಸದೇವರ[6] ಕಾರುಣ್ಯದ ಶಿಶುವಪ್ಪ ಹಂಪೆಯ ಹರಿಹರಂ[7] ಬಿನ್ನಪಗೆಯ್ದನೀ.ಪ್ರಬಂಧಮಂ ಸಕಲಭಕ್ತರ್ ಸುಚಿತ್ತದಿಂದವಧರಿಪುದದೆಂತೆಂದೊಡೆ:—

೧. ಗಿರಿಜೆಯಂ ಪರೀಕ್ಷಿಸಿ ( ಬ. ಆ. ಗೊ. ಕ. ಮ. ). ೨. ಹರಿಬ್ರಹ್ಮಾದಿ ಸುರ ನಿಕರ ಋಷಿಗಳಂ ದೇವಗಣಂಗಳುಂ ( ಮ ); ಹರಿಬ್ರಹ್ಮೇಂದ್ರ ಸುರಾದಿ ಸಕಲ ಋಷಿಕುಲ ದೇವ ಗಣಂಗಳುಂ ( ದಾ ): ಶಿವಂ ಹರಿಬ್ರಹ್ಮಾದಿ ಸುರಮುನಿನಿಕರಮುಂ (ಆ). ೩. ಗಿರಿರಾಜನಲ್ಲಿಗೆ ಪೋಗಿ (ಆ). ೪. ಪಾರ್ವತಿಯಂ. ಬೇಡಿ ( ಬ. ಮ. ಅ. ). ೫. ಕಲ್ಯಾಣವೆಂಬ (ಅ). ೬. ಮಾದರಸರ ( ಕ. ಕಾ. ) ೭. ಹರಿಹರದೇವಂ ( ಮ. ಅ. ದಾ. ಬ. ); ಹರಿಹರದೇವರು ( ಗ. ಸ. ).

# ಕಥಾಪ್ರಾರಂಭ

## ಪ್ರಥಮಾಶ್ವಾಸಂ

### ( ಹೈಮಾಚಲವರ್ಣನಂ )

ಸ್ರಗ್ಧರೆ.

ಶ್ರೀಮಚ್ಛೈಲೇಂದ್ರಪುತ್ರೀಗುರುತರೆಸುರತಕ್ಷೀರವಾರಾಶಿಚಂದ್ರಂ
ವ್ಯೋಮಾರ್ಕೇಂದುಕ್ಷಮಾತ್ಮಾನೆಲಜಲಪವಮಾನಾಷ್ಟಮೂರ್ತಿಪ್ರಸಿದ್ಧಂ
ಪ್ರೇಮಂಬೆತ್ತೀಗೆ ಸದ್ಭಕ್ತಿಯನೆಮಗಮರಾನೀಕಮಾಣಿಕ್ಯಮೌಳಿ-
ಸ್ತೋಮಾಂಘ್ರಿಜ್ಯೋತಿ ಪಂಪಾಪುರದರಸ ವಿರೂಪಾಕ್ಷನಾನಂದದಿಂದಂ ೧

ಗೌರೀಪಾದಾಂಗುಲೀಕೋರಕಮೆಸೆವಕರಂ ಪಲ್ಲವಂ ಪುಷ್ಪವೃಂದಾ-
ಕಾರಂ ಮಂದಸ್ಮಿತಂ ಶಾಖೆಗಳಮರ್ದ ಭುಜಾನೀಕಮಾಸ್ಯಂ ಫಲಂ ಶ್ರೀ-
ಸಾರಂ ತಾನಾದ ಪಂಪಾಪುರದರಸ ವಿರೂಪಾಕ್ಷಕಲ್ಪಾಂಘ್ರಿಪಂ ವಿ-
ಸ್ತಾರಂಬೆತ್ತೀಗೆ ಸದ್ಭಕ್ತಿಯನೆಮಗಮೃತಪ್ರಾಯೆಯಂ ಪ್ರೀತಿಯಿಂದಂ ೨

ಶ್ರೀಹೇಮಾದ್ರೀಂದ್ರಚೂಡಸ್ಥಿರಕರಣಸಮಾರೂಢಪದ್ಮಾಸನಸ್ಥಂ
ಕೋಹಂಸೋಹಂಗಳೆಂಬಾ ಗಜಿಬಜಿ ಪುಗದಾನಂದಸಂವಿತ್ತುಕಂದ-
ರ್ಪಾಹಂಕಾರಪ್ರವಿಧ್ವಂಸನಕರನಿಟಿಲಾಕ್ಷಂ ಶಿವಂ ಪಾರ್ವತೀಶಂ
ಸ್ನೇಹಂ ಕೆಯ್ಮಿಕ್ಕು ಪಂಪಾಪುರಪತಿ ದಯೆಯಿಂ ನೋಡಿ ರಕ್ಷಿಕ್ಕೆಯೆಮ್ಮಂ ೩

ಮಂಗಳಮೂರ್ತಿ ಮಾನಿನಿ ಮಹೋಜ್ವಳೆ ಮಾನ್ಯೆ ಮಹಾ ಮಹೇಶನ-
ರ್ಧಾಂಗಿ [10]ಮಹೋವಿರಾಜಿತೆ ಮಹಾಶಿವಭಕ್ತೆ[11] ಮಹಾಪತಿವ್ರತೋ-
ತ್ತುಂಗೆ ಮಹಾತ್ರಿಲೋಚನೆ ಮಹಾನಿಧಿ ತನ್ನ ವಿವಾಹವರ್ಣನಾ
ಸಂಗತಿಯೆಂದು ಮತ್ಕೃತಿಗೆ ಪಾರ್ವತಿ ಮಾಳ್ಕೆ ಮಹೋತ್ಸವಂಗಳಂ. ೪

---

೧. ಕನ್ಯಾನಿರುಪಮ ( ಮ. ಸೆ. ಅ. ಓ. ). ೨. ಅನಿಲಜಲತಪ ( ಕಾ ). ೩. ಪುರದಧಿಪ ( ಪಾ ). ೪. ವೃಂತಾ ( ಕಾ. ಕ. ). ೫. ಕಲ್ಪಾಂತಪಂ ( ಗ ). ೬. ಯೆನಿಪ್ಪಾ ( ಅ ). ೭. ನೇಹಂ ( ಅ ). ೮. ನಮ್ಮಂ ( ಬ. ಮ. ); ಯೆಂದುಂ ( ಕೊ. ) ೯. ಉಮಾ ( ಯ ). ೧೦. ಮಹಾ ( ಕೊ. ಗೊ. ಅ. ಕ. ದಾ. ). ೧೧. ಶಕ್ತಿ ( ಬೆ. ಅ. ಬ. ಕೆ. ).

ಸ್ರಗ್ಧರೆ.

ಎನ್ನೀ ಕಾವ್ಯಕ್ಕೆ ನಿರ್ವಿಘ್ನದಿನತುಳನವೀನಾರ್ಥವಾಕ್ಯಪ್ರಸನ್ನೋ-
ತ್ಪನ್ನಾಲಂಕಾರಮಂ ಮಾಡುಗೆ ವಿಪುಳಕಪೋಳಸ್ಥಳಾಂತಸ್ಥಳೀಸಂ-
ಭಿನ್ನೋದ್ಯದ್ದಾನಧಾರಾಪ್ರಬಳಪರಿಮಳಾಸಕ್ತಭೃಂಗಾವಳೀಸಂ-
ಪನ್ನಪ್ರೋದ್ಭೂತಝುಂಕಾರಿತರವಮುದಿತಾನಂದವೇಶಂ ಗಣೇಶಂ ೫

ಚಂಪಕ

ಪುಳಕಮನೆಳ್ಚಿಸುತ್ತೆ ಹರನಂ ಪರಿದಪ್ಪುವೆ ಸಂತಸಂಗಳಂ
ಬಳೆಯಿಸುತುಂ ಭವಾನಿಯ ಪಯೋಧರಮಂ ನಲಿದುಂಡು ವಕ್ತ್ರಮಂ-
ಡಳಮನಲರ್ಚುತುಂ ನಗುವ ಹೊಂಗುವ ಹಿಗ್ಗುವ ಪೊಣ್ಮುವಣ್ಮುವ-
ಗ್ಗಳಿಸುವ ಪಾಡುವಾಡುವ ಷಡಾನನನೀ ಕೃತಿಗೀಗೆ ರಾಗಮಂ ೬

ಶಿವನ ಮನೋಹರಂ ಶಿವನ ಪುಣ್ಯಫಲಂ ಶಿವನಾಪ್ತ ಸಂಕುಳಂ
ಶಿವನ ವಿಲೋಚನಂ ಶಿವನ ಗೋತ್ರಕುಲಂ ಶಿವನೂರ್ಜಿತೋಜ್ವಲಂ
ಶಿವನ ಸುಖಂ ಸದಾಶಿವನ ಸರ್ವಮುಖಂ ಶಿವಭಕ್ತರೆನ್ನ ಕಾ-
ವ್ಯವಸತಿ ಸಮ್ಮುದಂ ಬೆರಸಿ ಪೊರ್ದುಗೆ ತಿರ್ದುಗೆ ತಾಳ್ದಿದಳ್ವಿಜಂ ೭

ಘನಕವಿತಾವಿಳಾಸಮೊಳೆ ಸಂದ ಮಯೂರನ ರೇಖೆ ಕಾಳಿದಾ-
ಸನ ರಸವೃತ್ತಿ ಬಾಣನ ಮೃದೂಕ್ತಿ ಹಲಾಯುಧನಂಬು ಕೇಶಿರಾ-
ಜನ ಬಗೆಯುದ್ಭಟಯ್ಯನ ಗಭೀರತೆ ಮಲ್ಹಣನೇಳ್ಗೆ ಭೋಜರಾ-
ಜನ ಜಸಮೆನ್ನ ಕಾವ್ಯರಸದೊಳ್ ನಲವಿಂ ನೆಲಸಿರ್ಕೆ ಸಂತತಂ ೮

---

೧. ಕೂಡುಗೆ ( ಕಾ. ದಾ. ಅ. ಗೊ. ಗ. ಸೆ. ಜೆ. ಬ. ). ೨. ಸ್ಥಳಾಂಶ ( ಅ ).
೩. ತೆ ( ಕಾ. ಬಿ. ಯ ). ೪. ಹಿಂಗುವ ( ಬ ). ೫. ವೃಣ್ಮುವ ( ಅ ). ೬. ನಾತ್ರ ( ಅ )
೭. ಚಯಂ ( ಗೊ. ಬ. ); ಬಲಂ ( ಕಾ. ಕ. ). ೮. ಸಮ್ಮದಂ ( ಕಾ. ಯ. ಬಿ. ). ೯. ತಿರ್ದುಗೆ
ಪೊರ್ದುಗೆ ತಾಳ್ವುದಕ್ಕರಂ ( ಅ. ಗೊ. ಸ. ); ಪೊರ್ದುಗೆ ತಿರ್ದುಗೆ ತಾಳ್ದುಗಕ್ಕರಂ (ಕ).
೧೦. ಲೇಖೆ ( ದಾ ). ೧೧. ನಾಕು ( ಕಾ. ಅ. ಗೊ. ಕ. ಣ. ಯ ); ನಾಸು ( ಸೆ ).
೧೨. ಕಾವ್ಯದೊಳನೂನತೆಯಿಂ ( ಕೊ.ಬಿ. ).

ಚತುರಚತುರ್ಮುಖನೆಲ್ಲಾ
ಶ್ರುತಿಗಳನೊಲವಿಂದೆ ಕಲ್ತ್ರ ಶಿವನ ವಿವಾಹೋ-
ನ್ನತಿಯೀ ಕೃತಿಯೆಂದೆನೆ ಭಾ-
ರತಿಯೆನಗನುಕೂಲೆಯಾಗದಿರಲಣ್ಮುವಳೇ ೯

ಕೊಂಡಾಡುಗೆ ಕಲ್ತೋದುಗೆ
ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೆಯ್‌-
ಕೊಂಡೀ ಕಾವ್ಯಮನಗಜೆಯ
ಗಂಡನಲಂಪಿಂದೆ ಹಂಪೆಯ ವಿರೂಪಾಕ್ಷಂ ೧೦

ಇಂತು ಬೇಡಿಕೊಳುತಿರ್ಪಲ್ಲಿ

ಚಂಪಕ.

ಅತುಳತರಾರ್ಥಮರ್ಥದನುವೃತ್ತಿ ಪದಂ ಪದದಿಚ್ಛೆ ಬಂಧಮೂ-
ರ್ಜಿತಪದಬಂಧಸಂಧಿ ನವರೀತಿ ಸುರೀತಿ ಗುಣಂ ಸದ್ರೃಕ್ಕಲಂ-
ಕೃತಿ ಸದಲಂಕೃತಿ ಪ್ರತಿಮನೊಪ್ಪುವ ಭಾವಮನೂನಭಾವದು-
ನ್ನತರಸಮೊಂದು ಸತ್ಕವಿಗಳಾಲಿಸೆ ಪೇಳ್ದಪೆನೀ ಪ್ರಬಂಧಮಂ ೧೧

ಕಂದಂಗಳಮೃತಲತಿಕಾ
ಕಂದಂಗಳನೂನವಾಕ್ಯಫಲವಿಲಸನ್ಮಾ-
ಕಂದಂಗಳ್ ತನಿರಸದು-
ಕ್ಕಂದಂಗಳ್ ಸೊಗಯಿಸಿರ್ಪುವೀ ಸತ್ಕೃತಿಯೊಳ್ ೧೨

ಪದ್ಯಂಗಳ್ ನವರಸನಿರ-
ವದ್ಯಂಗಳ್ ಸುಜನಸಂಕುಳಕ್ಕೆ ನಿರಂತಂ
ಹೃದ್ಯಂಗಳ್ ಧಾರಿಣಿಗೆತಿ-
ಚೋದ್ಯಂಗಳ್ ಮೆಱೆಯುತಿರ್ಪುವೀ ಸತ್ಕೃತಿಯೊಳ್ ೧೩

---

೧. ಕಲ್ತು ( ಅ. ಬೆ. ). ೨. ಯಾ ( ಕಾ ). ೩. ಲಮ್ಮು ( ಅ ). ೪. ಎಂದಿಂತು ಬೇಡಿ. ಕೊಳ್ವಲ್ಲಿ ( ಕ. ಕಾ. ). ೫. ದಂದ ( ಬ ). ೬. ಗಣಂ ( ಕ. ಅ. ಬೆ. ). ೭. ಕಾವ್ಯ ( ಯು ). ೮. ನುತಕೃತಿ ( ಕಾ. ಬ. ಬೆ. ಯು. ಅ. ಕ. ಗ. ನೆ. ). ೯. ನಿತಾಂತಂ ( ಕಾ ). ೧೦. ಧಾರುಣಿ ( ಅ ).

ಕಾವ್ಯಂ ತಾನಿದು ನವರಸ-
ಸೇವ್ಯಂ ಗಿರಿಜಾಧಿನಾಥನುರುತರಕರ್ಣ-
ಶ್ರಾವ್ಯಂ ವಸುಧಾತಳದೊಳ್
ನವ್ಯಂ ಭೂತೇಶಭಕ್ತಜನತಾಭಾವ್ಯಂ[೧] ೧೪

ಪೊಸತಿದು ಪಾವನಮಿದು ರಂ-
ಜಿಸುವ ಮಹಾನರ್ಘ್ಯಮಿಂತಿದೆಂಬೀ ಜಸದಿಂ
ರಸವತ್ಕಾವ್ಯಂ[೨] ತಾಂ ರಾ-
ಜಸಭೆ ಬ್ರಹ್ಮಸಭೆ ದೇವಸಭೆಗೆಸೆದಿರ್ಕುಂ ೧೫

ಅದುಕಾರಣದಿಂ,

ಸ್ರಗ್ಧರೆ.

ಸೇವ್ಯಂ ಸೌಖ್ಯಂ ಪ್ರಸನ್ನಂ ನವರಸವಿಭವಂ ಪುಣ್ಯಪುಂಜಂ ಶುಭಂ ವಾ-
ಗ್ದೇವ್ಯಾವಾಸಂ ವಿವೇಕೋನ್ನತಜನ[೩]ನಿಧಿ ಸಂಸಾರವಿಶ್ರಾಮದೇಶಂ
ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೂರ್ತು ಪೇಳ್ವರ್ಥಿಯಿಂ[೪]ದಂ
ಕಾವ್ಯಂ ಕಲ್ಪಾಂತರಸ್ಥಾಯಿಯೆನಿಸಿಪ ನುಡಿ ಸತ್ಯಂ ಕವೀಶಾಧಿಪತ್ಯಂ ೧೬

ಸುರತರುವಿನಂತೆ ಸುಜನರ
ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ
ಕರಕಿರಣದಂತೆ ಹಂಪೆಯ
ಹರಿದೇವನ ಕಾವ್ಯಮಖಿಳಸೇವ್ಯಂ ನವ್ಯಂ ೧೭

---

೧. ಭವ್ಯಂ (ಕ. ಅ.). ೨. ರಸವಂ ನವಕಾವ್ಯಂ (ಮ). ೩. ಜಲನಿಧಿ (ಕಾ. ಮ. ಬಿ.).
೪ ಪೇಳ್ದರ್ಥಿಯಿಂದಂ (ಅ).

ಚಂಪಕ

ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೂರ್ತಮು-
ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ-
ಲೆಯ ಪೊಸಗಂಪಿನಂತೆ ಮಲಯಾನಿಲನಂತೆ ಮರಾಳನಂತೆ ಹಂ-
ಸೆಯ ಹರಿದೇವನುನ್ನತಕೃತಿಪ್ರಸರಂ ಭುವನೈಕಭಾಸುರಂ ೧೮

ನೆರೆದು ಕುತರ್ಕದಿಂದರೆದು ಸಣ್ಣಿಸಿ ನುಣ್ಣಿಸಿಯೆಂತದಿಂದು ಪೋ-
ದರ ಕೃತಿಯೊಳ್ಪಿತನ್ಯಕೃತಿ ಪೊಲ್ಲದಿದೆಣ್ಣಿಗೆ ಬೆಣ್ಣೆಸಣ್ಣವೆಂ-
ಬರ ನುಡಿಬೇಡ ಪೇಳ್ವೆನತಿಭಾವರಸಾರ್ಥದೊಳಾತ್ತ ಛಂದಮಂ
ಪರಸುಖವೃಂದಮಂ ಸೊಗಯಿಪಂದಮನೀ ಸುಕರಪ್ರಬಂಧಮಂ ೧೯

ನವರಸಮತಿಭಾವಾರ್ಥಂ
ನವೀನಪದಭರಿತಮಿಂತಿದೆನೆ ಸತ್ಕೃತಿಯಂ
ತವೆ ಪೇಳ್ವುದು ಪೇಳದೊಡೇಂ
ಕವರ್ವರೆ ಕೋಪಿಪರೆ ನಿಂದಿಪರೆ ದಂಡಿಪರೇ ೨೦

ಕೇಳಲೊಡಂ ಕಿವಿ ಸವಿಯೊಳ-
ಗಾಳದೊಡಂ ತನ್ಮನಂ ಮುಳುಂಗದೊಡಂ ಸ್ವಾ-
ಖ್ಯಾಳಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹಮಿರದೊಡದು ಸತ್ಕೃತಿಯೇ ೨೧

---

೧. ಮೋಹ (ಅ).

೨. ನೊಪ್ಪಿರೆ ನಿರ್ಮಿಸಿದ ಕಾವ್ಯಮಿಳಾಜನೋತ್ಸವಂ (ಕಾ. ಶ. ಹ.); ಸುನ್ನತಕೃತಿಪ್ರಸರಂ ಭುವನೈಕ ಪೂಜಿತಂ (ಮ. ಬಿ. ದಾ. ಅ. ಬ. ಕೊ. ಗೊ. ಗ. ಸ).

೩. ನೆರೆಯೆ (ಕಾ).

೪. ಯಿಂತುಟಿಂತು (ಮ.); ಯಿಂತದಿಂತು (ಬಿ. ಬ. ದಾ. ಅ. ಕೊ.)

೫. ಕಾಂತ (ಅ. ಗೊ.).

೬. ಮಂ. (ಗೊ. ಬ. ಅ).

೭. ಪ. (ಮ. ಅ. ಗೊ. ಕೊ).

೮. ಕೇಳದೊಡಂ (ಅ. ಕ.).

ಅಂತುಮಲ್ಲದೆಯುಂ

ಓದಿದೊಡೆ ಕಲ್ಲ ಮಾಲೆಯ-
ನಾದಂ [೧]ಕರ್ಜೊನ್ನ ಕಡಲೆ ವಾದಿಸೆ ರಸಮಂ
[೨]ಸೋದಿಸೆಯುರ್ಕಿನ ಪುಡಿಯೆನಿ-
ಪಾ ದುಷ್ಕವಿತೆಗಳಲೆನಿಸಲೇಕೀ ಕೃತಿಯೊಳ್ ೨೨

[೩]ಹಱಿಗವಿಗಳ ಕಬ್ಬಂಗಳ
ಕೊಱಗಳಿಯಕ್ಕುರದ ಹೊಲಿಗೆ ಬಿರ್ಚಿದೊಡೆಲ್ಲಂ
[೪]ಬಱಿ ತಾಱಿಗೆ ಬೀಱಗ ವೆ-
ತ್ತ್ರಱ ತತ್ತ್ರಱ ವೆಕ್ಕಸಕ್ಕು[೫]ಮಸ್ತಂ ಬ್ಯಸ್ತಂ ೨೩

ಚಂಪಕ

ಪೆಳವನ ಕಣ್ಗಳಂಧಕನ ಕಾಲ್ಗಳಿವಿಂತೊಡಗೂಡಿ ಗಾವುದಂ
ತಳರ್ದೊಡೆ ಬಲ್ಲಿದಂ ನಡೆದ ಮಾಳ್ಕೆಯೆನಿಪ್ಪುದೆ ಜೇಡ ಮಾಣೆಲೇ
ಅಳಿಗವಿ ನಿನ್ನ ತನ್ನರವಿನೋದಿನ ಕಬ್ಬಮನೋದದಿರ್ ಸುಧಾ-
ನಿಳಯದ ಮುಂದೆ ಸತ್ಕೃತಿಯ ಮುಂದೆ [೬]ಸುಖಾಬ್ಧಿಯ ಮುಂದದೊರ್ಮೆಯುಂ ೨೪

ಅದು ಘೂಕಂ ದಿವದೊಳ್ ಕಾ-
ಣದು ನಿಶ್ಚಯಮಂತೆ ದುರ್ಜನಂ ಕಾಣಂ ಕಾ-
ವ್ಯದೊಳತಿರಸಮನಸೂಯಾ-
ಸದನಂ ಸುಖದೂರನವನ ಮಾತೇಕಿದಱೊಳ್ ೨೫

ಕ್ಷುದ್ರಂಗೆ ಸಕಲಸುಜನೋ-
ಪದ್ರವರೂಪಂಗೆ ಪರರ ಕಾವ್ಯಾರ್ಥಮುಮಂ
ಛಿದ್ರಿಸುವಂಗಿತಿ ಶಬ್ದದ-
ರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ ೨೬

---

೧. ಕಬ್ಬುನದ (ಬ. ದಾ. ಬಿ.). ೨. ಸೋದಿಸೆಯುಕ್ಕಿನ (ದಾ.); ಸೋದಿಸಲುಕ್ಕಿನ (ಅ). ೩. ಅರಿ. (ಅ). ೪. ನೆರೆ (ಅ). ೫. ಮಸ್ತವ್ಯಸ್ತಂ (ಕಾ. ಗೊ.); ಸ್ವಸ್ತಂವ್ಯಸ್ತಂ (ಕ). ೬. ಸುಧಾಬ್ಧಿಯ (ಗೊ. ಸಿ.).

ಒಳಗಱಿಯದೆ ಸತ್ಕಾವ್ಯದ
ಕಳೆಯಱಿಯದೆ ಲಘುತರತ್ವದಿಂ ನಾಲ್ಕೆರಡಾ-
ಯ್ಕುಳಿ ಮಾತನಾಡಿ ನೆ[1]ಱೆ ಹೆ-
ಕ್ಕಳ ಮಿಕ್ಕಿದೊಡೊಲ್ವರೇ ಕವೀಂದ್ರಾಭರಣರ್ ೨೭

ಬರೆದಾಹ ಬರೆದೆ ಭಾವುರೆ
ಬರೆದಕ್ಕಟ ಬರೆವೆ ಲೇಸು ಬರೆದೆಯೆನುತ್ತುಂ
ಬಱದೆ ತಲೆ[2]ತೊಕವದಱಿಂ
[3]ಬಱದಪ್ಪುದು ಕಾವ್ಯಮಱಿಯದರ ಜಾಣಿಂದಂ ೨೮

ಚಂಪಕ

ತನಗೆ ಕವಿತ್ವಮಿಲ್ಲ ಪೆಱರಂ [4]ಪೞಿದಲ್ಲದೆ [5]ನಿಲ್ಲ ನಾತನೊಳ್
ನುಣಿವುದನೀತಿ ಪಂದಿ ಡುರುಕೆಂದೊ[6]ಡೆ ತಾಂ ಡುಱುಕೆಂಬುದೇಮಹಾ-
ವನಕರಿಯಂ ವಿದಾರಿಸುವ ಸಿಂಹಮದಂತಿರೆ ದೋಷಿಯಪ್ಪ[7]ದು-
ರ್ಜನನ ಕಟೂಕ್ತಿಗಂಜದೆ ಲಸತ್ಕೃತಿಯಂ ಸಲೆ ಮಾಳ್ಕೆ ಸಜ್ಜನರ್ ೨೯

ಗೌರೀವರಕರ್ಣಾಲಂ-
ಕಾರಂ ರಸಪೂರಮತಿಗಂಭೀರಂ ಕಾವ್ಯಂ
ನೀರಸರಱಿವಂತೇನಿದು-
ತಾರೆಲೆಯೇ ಬೀಡಿವಾಡೆ ನೆರವಿಯ [8]ತುಮುಕೇ ೩೦

ರಸಮಿದು ಭಾವಮಿದರ್ಥಮಿ-
ದು ಸಮಾಸಮಿದುಚಿತಪದಮಿ ದುತ್ಪ್ರೇಕ್ಷೆಯಿದೆಂ-
ದು ಸವಿದು [9]ಸವಿದು ಕರಂ ನವ-
ರಸದೊಳಗಾಳುತ್ತುಮಿರ್ಪ [10]ರಸಿಕರೆ ಬಲ್ಲರ್ ೩೧

---

೧. ಯುಱಿ ( ಕಾ. ಕ. ಯ. ). ೨. ದೂಗುವೂದಱಿಂ ( ಕಾ. ಯ. ಬಿ. ). ೩. ಪರಿಪೆಟ್ಟದು ( ಕ ). ೪. ಜಱಿ (ಗೊ. ). ೫. ಮಾಣ (ದಾ. ). ೬. ತಿಕಿ ( ಕಾ. ಬಿ. ಯ. ಬ. ನೆ. ಗೊ. ಕ. ). ೭. ದುರ್ಜನರ ( ಕಾ ). ೮. ದು ( ಯ. ಗೊ. ದಾ. ಕೆ. ಸೆ. ). ೯. ಭಾವಕರು ನವ ( ಗೋ. ). ೧೦. ರಸಿಕರ್ತ ( ಕಾ. ಬ. ಯ. ).

ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ
ಕೂಡೆ ಕವಿತತಿ ವಿ[1]ಚಾರಿಸ-
ಬೇಡದಱಿಂ ಜಳಕುಳಕ್ಷಳಂಗಳನಿದಱೊಳ್ ೩೨

ಮಹಾಸ್ರಗ್ಧರೆ

ಗಿರಿಜಾಕಲ್ಯಾಣಮಿಂತೀ ಸುತಕೃತಿಯ ಪೆಸರ್ ಭಾಪ್ಪುರೇ ಕಾವ್ಯನಾಥಂ
ಗಿರಿಜಾನಾಥಂ ಕಥಾಸಂಗತಿ ವರಗಿರಿಜೋದ್ವಾಹವೀ ಕಾವ್ಯಮಂ ವಿ-
ಸ್ತರದಿಂ[2] ತಾನೊಲ್ದು ಪೇಳ್ದಂ ಶಿವಕವಿ ಹರಿದೇವಂ ಮಹೋತ್ಸಾಹದಿಂದಂ
ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷಸಾಕಾತ್ಸುಪುತ್ರಂ ೩೩

ಆತನ [3]ಕುಲಗುರುವತಿವಿ-
ಖ್ಯಾತಂ ಘನಪೂತಮಿಂದುಧರಸಂಭೂತಂ
[4]ನೂತಂ ಪುಣ್ಯವ್ರಾತಂ
ಪ್ರೀತಿಕರಂ ಭೂತಳಾತಿಶಯ ಸುಖಜಾತಂ ೩೪

ಚಂಪಕ

ಸುರುಚಿರಮೂರ್ತಿ ಸತ್ಯತರಮೂರ್ತಿ ಕೃಪಾಕರಮೂರ್ತಿ ಪುಣ್ಯವಿ-
ಸ್ತರಗುರುಮೂರ್ತಿ ಶಾಂತಿಮಯಮೂರ್ತಿ ಸುಧಾಕರಮೂರ್ತಿಯುತ್ತರೋ-
ತ್ತರವರಮೂರ್ತಿ ಮುಕ್ತಿಸುಖಮೂರ್ತಿ ಮನೋಹರಮೂರ್ತಿ[5] ಚಂದ್ರಶೇ-
ಖರ ಗುರುಮೂರ್ತಿ ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್ ೩೫

ಶಾರ್ದೂಲ

ಆಶೈವಾಗಮಸಿದ್ಧರಪ್ಪ ಪರಮಶ್ರೀಶಂಕರಾಚಾರ್ಯರಿಂ
ಪಾಶಚ್ಛೇದಮನಿಂಬುಗೊಂಡು [6]ಮೆಱೆದಂ ಶ್ರೀಶುದ್ಧ ಪಂಚಾಕ್ಷರೀ-
[7]ವೇಶಂಭಕ್ತಿರಸಾರ್ದ್ರಚಿತ್ತಯುತಹೃದ್ರಾಜೀವಸಂಪೂರ್ಣಸಂ-
[8]ಕಾಶಂ ಪ್ರಾಂಜಲಮೂರ್ತಿ ಕೀರ್ತಿಭರಿತಂ ಶ್ರೀಮಾದಿರಾಜಾಹ್ವಯಂ ೩೬

---

೧. ಕುಳಕ್ಷರ ( ದಾ. ಬ. ಗೊ. ಗ. ). ೨. ಚಿತ್ರರದಿಂ ( ಕಾ. ಜ.). ೩. ಗುರುಕುಲ ( ಕಾ. ದಾ. ಗೊ. ಕ. ನೆ. ಯ. ಬ. ). ೪. ನೂತನ (ಕಾ. ಯ. ಬ.). ೫. ಶಂಭುತಂ|ಕರಶಿವಮೂರ್ತಿ ಕೂರ್ತುನೆಲೆಸಿರ್ಪಯನಾರತವೊಪ್ಪೆ ಹಂಪೆಯೊಳ್ ( ದಾ. ಬ. ಗ. ಕ. ). ೬. ಮೆಱೆವಂ ( ಬ. ಬ. ಮ. ಗೊ.. ) ೭. ವೇಶಾನಂದ ( ಕಾ. ಬ. ಬ. ಯ. ಸ. ದಾ. ಗ. ). ೮. ಕಾಶಪ್ರಜ್ವಲ (ಕಾ. ಕ. ಬ. ).

ಇಂತಿಂತೊಪ್ಪುವ ಮಾದಿರಾಜನ ಮನೋದುಗ್ಧಾಬ್ಧಿಚಂದ್ರಂ ಶಿವಂ
ಶಾಂತಂ ಶಾಶ್ವತಮೂರ್ತಿ ಶೈವಸುಭಗಂ ಸಾಕಾರಸರ್ವೇಶ್ವರಂ
ಸಂತೋಷಾಭರಣಂ ಪ್ರಸನ್ನಕರಣಂ ಪ್ರತ್ಯಕ್ಷಪಂಚಾನನಂ
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ ೩೭

ಶ್ರೀಗುರು ಪರಗುರು ಘನಮಹಿ-
ಮಾಗುರು ಮಾಧುರ್ಯಗುರು ಮಹಾಗುರು ವರವಿ-
ದ್ಯಾಗುರು ಸುಖೈಕಗುರು ವಸು-
ಧಾಗುರುಶೈವಗುರು ಶಾಂತಗುರು ಮಾಯ್ದೇವಂ ೩೮

ಚಂಪಕ

ಸದಮಳನೆಂಬುದುತ್ತಮಗುಣಾಶ್ರಯನೆಂಬುದು ಶೈವಸಿದ್ಧನೆಂ-
ಬುದು ರವಿತೇಜನೆಂಬುದು ಕೃಪಾಂಬುಧಿಯೆಂಬುದು ಶಾಂತಮೂರ್ತಿಯೆಂ-
ಬುದು ಪರಮಾಗಮಪ್ರಕರನೆಂಬುದು ಹಂಪೆಯ ಮಾಯಿದೇವನೆಂ-
ಬುದು ಶಿವನೆಂಬುದಪ್ರತಿಮನೆಂಬುದು ಸದ್ಗುರುವೆಂಬುದೀಜಗಂ ೩೯

ಧರೆಯೊಳಗಾಮಾಯ್ದೇವರ-
ಸರಕರುಣಂಬಡೆದು ಮೆಱೆವನುನ್ನತಮಹಿಮಂ
ಗುರುಪದಭಕ್ತಂ ಹಂಪೆಯ
ಹರಿದೇವಂ ದೇವಕವಿ ಕಳಾವಿದರರಸಂ ೪೦

ಜಾಣಂ ರಸಿಕಂ ಸುಜನ-
ಪ್ರಾಣಂ ಕವಿತಾನಿಧಾನನಧಿಕಂ ಪುಣ್ಯಾ-
ಕ್ಷೀಣಂ ವರಗಿರಿಜಾಕ-
ಲ್ಯಾಣಮನೊರೆದಂ ವಿವೇಕಿ ಹರಿಹರದೇವಂ ೪೧

---

೧. ರಾಜ (ಕ). ೨. ವರವುಂ (ಕ, ಕಾ. ಡ. ಸ.). ೩. ತೇಜಂ (ಕಾ). ೪. ಕವಿಕಳಾವಿಶಾರದರರಸಂ (ಪ).

ಸ್ರಗ್ಧರೆ

ಎಂದಿಂತೆಲ್ಲಾ ಕವೀಂದ್ರರ್ ಪೊಗಳೆ ಪರಸೆ ಭಕ್ತವ್ರಜಂ ಸಜ್ಜನರ್ ಸಾ-
ನಂದಂ ಮಜ್ಜುಯ್ಯ ಭಾವುನ್ನತಕೃತಿ ಭಲರೇ ಚಿತ್ರಮಾಹಾ ಎನುತ್ತೊ-
ಳ್ಪಿಂದಂ ಕೊಂಡಾಡೆ ಲೋಕಂ ಸ್ತುತಿಯಿಸೆ ಪದೆಪಿಂ ಪೇಳ್ದಪೆಂ ರೀತಿಭಾವಂ
ಛಂದೋಲಂಕಾರಸಾರಂ ಪುದಿದಿರೆ ಗಿರಿಜೋದ್ವಾಹಮಂ ಪ್ರೀತಿಯಿಂದಂ ೪೨

ಗಿರಿಜಾಕಲ್ಯಾಣಮನೊ-
ಲ್ದೊರೆವೆಂ ಗುರುಕರುಣದಿಂದೆ ರಸಿಕರ್ ಕವಿಗಳ್
ಪಿರಿಯರ್ ಸುಜನರ್ ಭಕ್ತರ್
ಪರಮಾರ್ಥದೆ ಕೇಳ್ವುದೀ ಪ್ರಬಂಧೋನ್ನತಿಯಂ ೪೩

ಎಂತೆನೆ ವಿಶಾಲಧಾತ್ರೀ-
ಕಾಂತಾನಾಭೀಸರೋಜಸುರುಚಿರವರನು-
ಧ್ಯಾಂತಸ್ಥಿತನುತಕರ್ಣಿಕೆ-
ಯಂತಿರ್ಪುದು ಮೇರುವದಱ ಮೂಡಣ ದೆಸೆಯೊಳ್ ೪೪

ಶಿವಶಿವ ಸಂಹಾರಕ್ಷ್ಮೋ-
ಣೀ[೧]ವಿಸ್ತೃತಾವನಿಗೆ ನೀಲಮೇಖಲೆಯಂತೊ-
ಪ್ಪುವುದಾತ್ತಲೋಲಕಲ್ಲೋ-
ಲವಿವಿಧಸಲಿಲಚರಪೂರಪಾರಾವಾರಂ ೪೫

ಅದೆಂತೆದೆದೊಡೆ,

ಮಹಾಸ್ರಗ್ಧರೆ.

ವಿಳಸತ್ಕಲ್ಲೋಲಮಾಲಾಪ್ರತಿಹತವಿತತಪ್ರೋಚ್ಛಲಚ್ಛೀಕರೋಚ್ಚಾ-
ಪಳಿತೋದ್ಯತ್ಫೇನನಾನಾಕರಿಮಕರಪುಚ್ಛಪ್ರಹಾರಪ್ರತಾಪೋ-
ದ್ಗಳಿತಾನಂತಸ್ಪ್ರರತ್ನಪ್ರಬಲಜಲಚರಾನೀಕಗಂಭೀರಭೀಮೋ-
ಚ್ಚಳರಾವಪ್ರೋದ್ಭೂತಪ್ರೋನ್ಮಿಳಿತಘುಳುಘುಳುಧ್ವಾನಮಂಭೋನಿಧಾನಂ ೪೬

೧. ವಿಶ್ರುತಾ ( ಮ. ಬ. )

ಮತ್ತಮಲ್ಲದೆ,

ಮತ್ತೇಭ.

ನೊರೆಯಿಂ ಬುದ್ಬುದದಿಂ ಕಣಾವಳಿಗಳಿಂದಾವರ್ತದಿಂ ತುಂತುಱುಂ
ತೆರೆಯಿಂ ಪೆರ್ದೆರೆಯಿಂ ತಿಮಿಂಗಿಳಸ್ತೋಮಂಗಳಿಂ ಕಚ್ಛಪೋ-
ತ್ಕರದಿಂ ನಕ್ರನಿಕಾಯದಿಂ ಮಕರದಿಂ ನೀರಾನೆಯಿಂ ಕಂಬುವಿಂ
ವರರತ್ನವ್ರಜದಿಂ ಪ್ರವಾಳಲತೆಯಿಂದೊಪ್ಪಿತ್ತು ನೀರಾಕರಂ ೪೭

ಶಾರ್ದೂಲ.

ಆ ವಿಸ್ತಾರಗಭೀರವಾರಿನಿಧಿಯಿಂದಂ ಪಶ್ಚಿಮಾಂಭೋಧಿಗಂ
ತೀವಿರ್ದೊಪ್ಪುವುದಾತ್ತಗಹ್ವರಗುಹಾಸಂತಾನಪರ್ಯಂತಗೋ-
ತ್ರಾವಾಸೋಜ್ಜ್ವಲಗಂಡಶೈಲಶಿಖರ ಪ್ರೋದ್ಭೂತಭೂಜಾತಸ-
ತ್ರಾವೇಶೋನ್ನತಭೀಮರೂಪಧರದೇವಾಗಮ್ಯಹೈಮಾಚಳಂ ೪೮

ಸ್ರಗ್ಧರೆ.

ಆರಾಜತ್ಕೌಮುದೀಸಂಗತಶಿಶಿರಶಿಲಾನೀಕನಿರ್ಯದ್ಧಿಮಂಸ-
ಸ್ಮೇರಾಬ್ಜಾಕ್ಷೀಕರೋತ್ಪಲ್ಲವನಖಕುಸುಮವ್ರಾತಚಂಚದ್ವಸಂತಂ
ಸೂರಾಂಶುಸ್ಪರ್ಶತೀವ್ರಾನಳಕರರವಿಕಾಂತಾತಪೋದ್ಯನ್ನಿದಾಘಂ
ಕ್ರೂರಾಭೀಳದ್ವಿಪಪ್ರೋಚ್ಛಳಿತಮದಜಲಾಸಾರಸಾಂದ್ರಂ ೪೯

ಅಂತುಮಲ್ಲದೆಯುಂ,

ಉತ್ಪಲ

ಪಾಱುವಸೋಗೆ ಸೀಗುರಿ ಚಲಚ್ಚಮರೀಮೃಗವೀಥಿಚಾಮರಂ
ನಿಱಾಱ ನಿಮಿರ್ಕೆನೆತ್ತ ಕುಜಮೆತ್ತಿದಸತ್ತಿಗೆ ಸಿಂಹವಿಷ್ಟರಂ
ತೋಱುವಚಂದ್ರಕಾಂತಶಿಲೆಯಾಗೆ ಸಮುನ್ನತರಾಜಲೀಲೆಯಂ
ಬೀಱುತೆ ಪೂರ್ವಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ ೫೦

---

೧ ನವ (ಗೊ).

ವಾತ್ತಮಲ್ಲದೆಯುಂ,

ಚಂಪಕ.

ಗಿರಿಶಿಖರಂ ಮುಖಂ ಮರದೊಳೊಪ್ಪುವ ಬೀಳಲೆ ತಜ್ಜಟಾಳಿ ವಿ-
ಸ್ತ್ರರವರಗಂಡಶೈಲಮೆ ವಿಕೀರ್ಣಭುಜಾವಳಿ ವಾದ್ಯಸಂಕುಲಂ
ಕರಿಕುಳಬೃಂಹಿತಂ ನೆಗಳ್ದ ಸಿಂಹರವಂಗಳವಾಗೆ ಸಂತತಂ
ಸ್ಮರರಿಪುನಾಟ್ಯದೊಳ್ ನೆಲಸಿನಿಂದವೊಲೊಪ್ಪಿತು ಭೂರಿಭೂಧರಂ ೫೧

ನಳನಳಿಸುತೆ ಸುತ್ತಿಡಿದು ತೋರ್ಪಕದಂಬಕದಂಬದಿಂ ಚಳ-
ಜ್ಜಳದಮನೊತ್ತರಿಪ್ಪ ಘನದೀರ್ಘಸುಕೋಮಳವಂಶವಂಶದಿಂ
ಬಳಸಿಗಮೆತ್ತಲುಂ ತುಱುಗಿ ಪರ್ವಿದಗುರ್ವಿನ ಬಿಂಬಬಿಂಬದಿಂ-
ದಿಳೆಯೊಳಗೊಪ್ಪುತಿರ್ಪುದು ಹಿಮಾಚಳಮಾಶ್ರಿತಗೋತ್ರಗೋತ್ರದಿಂ ೫೨

ಮತ್ತಮಲ್ಲದೆ.

ಉರವಣಿಸಿ ನಡೆತರುತ್ತುಂ
ಗಿರಿಶಿಖರಮನೇಱಲಾಱದೆರಡುಂ ದೆಸೆಯೊಳ್
ಬರಲನುವಂ ಕಂಡು ದಿವಾ-
ಕರನಂದಿಂ ದಕ್ಷಿಣೋತ್ತರಾಯಣನಾದಂ ೫೩

ಹರಹರ ಗಿರಿಯುದ್ದಮನಾರ್
ವಿರಚಿಪರಗಚೂಡದಲ್ಲಿ ನಿಂದಿರ್ದು ಸಮಂ-
ತಿರೆ ತಾರಗೆಯಂ ವಿದ್ಯಾ-
ಧರಿಯರ್ ಮುತ್ತೆಂದು ತೆಗೆದು ತುಡಲವ್ವಳಿಪರ್ ೫೪

೧. ಮುಖಾಂಕುರ (ಓ.). ೨. ಶರ (ಬ). ೩. ಕರಿಗಳ (ದಾ).
೪. ಳುವಾಗೆ (ಬ). ೫. ವೊಲಿಪ್ಪುದು (ಯ.); ವೊಲಿರ್ಪುದು (ಟಿ. ಸೆ.).
೬. ನೆರೆದ ಜುತ್ತುಂ (ದಾ);. ೭. ನಾರೊರೆದ (ಕಾ).

ಗಿರಿಯುದ್ದಮನೇನಂ ಬಿ-
ತ್ತರಿಪೆನದಂ ಖೇಚರರ್ ಬಿಸಿಲ್ಗಂಜುತ್ತುಂ[೧]
ಭರದೊಳ್[೨] ಬಳಲ್ದು ಬಂದಾ-
ಗಿರಿಶಿಖರದ ಮರದ ತುದಿಯ ನೆಳಲಂ ಸಾರ್ವರ್ ೫೫

ಕರಮೆಸೆದುದು ಗಿರಿಶಿಖರಂ
ಪರಮ ಸ್ವಚ್ಛಂದಲೀಲೆ ಪೆರ್ಚಿದ ಗಂಧ-
ರ್ವರ ಗರುಡರ ಸಿದ್ಧರ ಖೇ-
ಚರರ ಮುನೀಶ್ವರರ ಸುರರ ನೆರವಿಗಳಿಂದಂ ೫೬

ಧರೆಯಜಿಯೆ ಹೊನ್ನಮೆಯ್ಯಾಂ[೩]-
ತಿರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ
ಸುರುಚಿರ ಧವಳಿಮದಿಂ ಸುರ-
ಗಿರಿಯಂ ಹಿಮನಗದ ಚೆಲ್ವು ನಗದೇಕಿರ್ಕುಂ ೫೭

ಇಂತಿಂತು ಮೆಜಿಯುತಿರ್ಪ್ಪನ-
ನಂತಂ ಘನತೇಜದಿಂದಯೋಗ್ರಾಹ್ಯತೆಯಿಂ-
ದಂ ತಣ್ಪೆಂದಾಹಾ ರವಿ-
ಕಾಂತಮಯಸ್ಕಾಂತಮಿಂದುಕಾಂತಂ ನಗದೊಳ್ ೫೮

ಉತ್ಪಲ.

ಆ ನಗದಲ್ಲಿ ಪುಣ್ಯತತಿಯೊ ಪ್ರಭೆಯೊಬ್ಬುಳಿಯೊ ಮಹೇಶ್ವರ-
ಶೀನಿಧಿಯೊ ಸುಧಾಕರಮೊ ಸತ್ಯಮೊ ನಿತ್ಯಮೊ ಶೈವಪೂರಿತ-
ಸ್ಥಾನಮೊ ಶಾಂತಿಯೊ ದಯೆಯೊ ಧರ್ಮವೊ ನಿರ್ಮಳ[೪]ನೀತಿಯೊ ಶಿವ-
ಜ್ಞಾನಮೊ ಮುಕ್ತಿಸಂಕುಳಮೊ ಪೇಳೆನೆ ತಾಪಸವೀಥಿಯೊಪ್ಪುಗುಂ ೫೯

---

೧. ತ್ತಂಬರದೊಳ್ (ಯ.). ೨. ಗಿರಿಶಿಖರದ ಬಿತ್ತರಮಂ (ಕ). ೩. ಮೆಯ್ಯಾಗಿರು(ದಾ. ಯ.)
೪. ಯೂಥಮೊ (ಯ).

ಗುಹೆಗುಹೆಗಳೊಳಗೆ ಬಳಸಿದ-
ಬಹುಗಹ್ವರಗಹ್ವರಂಗಳೊಳ್ ಪೆರಸೌಖ್ಯ-
ವಹ ನಿರ್ಝರನಿರ್ಝರದೊಳ-
ಗಹರಹನೊಪ್ಪಿರ್ಪುದಧಿಕಮೆನಿಸುವಮುನಿವೃಂದಂ ೬೦

ಯಮನಿಯಮನಿತ್ಯಕರ್ಮಂ
ಸಮನಿಸೆ ವನಲತೆಯ ಗುಲ್ಮವೃಕ್ಷಾವಳಿಯೊಳ್
ವಿಮಳವ್ರತಿಗಳ್ ಸಲೆಕಂ-
ದಮೂಲಫಲದಿಂದೆ ತಣಿದು ಪರಿಣಮಿಸಿರ್ಪರ್ ೬೧

ಭಾಸ್ಕರಕರಸಮವಿಮಳವ-
ನಸ್ಮರರತಿವ್ರತಿಗಳಗ್ರಗಣ್ಯರ್ ಕಮೆಯಿಂ
ತಸ್ಕರರತಿಮುದದಿಂದೆ ನ-
ಮಸ್ಕರಿಸುವ ಮುನಿಗಳನಘರಿರ್ಪರ್ ನಗದೊಳ್ ೬೨

ಗಣ್ಯಾತೀತರ್ ಶಿವಲಾ-
ವಣ್ಯದೆ ಸರ್ವಾಂಗಭಸಿತದಿಂ ನೆರೆಯಿಂ ಕಾ-
ರುಣ್ಯದಿನತಿಧವಳಿಮದಿಂ
ಪುಣ್ಯಂ ಪಣ್ಣಾದ ತೆಱನೆ ತಾಪಸರಿರ್ಪರ್ ೬೩

ಇಂತುಮಲ್ಲದೆ,

ಚಂಪಕ.

ಭಸಿತಮನೊಪ್ಪೆ ಪೂಸುವ ಶಿವಾಗಮಮೋದುವ ಶಾಸ್ತ್ರಮಂ ವಿಚಾ-
ರಿಸುವ ವಿನೂತನಾಕ್ಷಮಣಿಯಂ ಸರನೇಱುವ ನಾರಸೀರೆಯಂ
ಪಸರಿಪ ಕಂದಮೂಲಫಲಮಂ ತರೆ ಪೋಸ ಲಸನ್ಮೃಗಾಜಿನ-
ಪ್ರಸರಮನೆಯ್ದೆ ಪೊಲ್ವ ಮುನಿಮುಖ್ಯಕುಮಾರಸಮೂಹಮೊಪ್ಪುಗುಂ ೬೪

ಅಂತವರ ಶಾಂತಿಮಯ ಶೈವತೇಜಸ್ಸಾಮರ್ಥ್ಯಮೆಂತೆಂದೊಡೆ,

೧. ನಸ (ಬ. ದಾ. ಕ. ಯ.). ೨. ಮನುಗಳ್ ಮುನಿಗಳ್ (ಬ. ಗೊ.). ೩. ವನಾ (ಕಾ. ). ೪. ಯುಂತಸ್ಕರಣರ್ (ಬಿ. ಯ. ಮ.). ೫. ಧವಳತೆಯಿಂ (ಕಾ. ಕ.).

ಮೆಯ್ಗ[1]ರೆದು ಮೆಲ್ಲಮೆಲ್ಲನೆ
ಕೆಯ್ಗೊಟ್ಟೊಡನೆಯ್ದೆ ಮತ್ತೆ ತಂದಿರಿಸಿ ಪಗಲ್
ಬಯ್ಗಿರುಳೆನ್ನದೆ ಸಲೆ ಬೆಸ-
ಕೆಯ್ಗುಂ ಮುನಿಗಳ್ಗೆ ನಗದ ಮರ್ಕಟ ನಿಕರಂ ೬೫

ಓಸರಿಸಿ ಬಿರ್ಚಿ ಪಕ್ಕಮ-
ನೋಸರಿಸದೆ ಮುನಿಗಳಿರ್ಪ ಹೋಮಸ್ಥಳದೊಳ್
ಭಾ[2]ಸುರದಿನಂತುಮಿಂತು
ಬೀಸುತ್ತೆಳ್ಚ[3]ಱಿಸಿ ಕುಡುವುದಾ ಶಿಖಿ ಶಿಖಿಯಂ ೬೬

ಅಂತೆಳ್ಚಱಿಸಿ ಕುಡುತಿರ್ಪನ್ನೆಗಮಲ್ಲಿ

ಮಹಾಸ್ರಗ್ಧರೆ.

ಇದು ಭೂಮಿಸ್ಥಾನದಿಂ ಮುಕ್ತಿಗೆ ನಡೆಯಿಪ ನೀಲಾಶ್ಮಸೋಪಾನಮಾಹಾ
ಇದು ಸಂಸಾರಾತಪಶ್ರಾಂತರೊಳತಿಸುಖಮಿಾವಂಬುದಶ್ರೇಣಿ ಮೇಣಿಂ-
ತಿದು ದುಷ್ಕರ್ಮಾಬ್ಜಷಂಡಂಗಳನುಱೆಕೊರಗಿಪ್ಪೊಂದು ನೀಹಾರಮೆಂಬಂ-
ತಿದೆ ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಬೇಳ್ಪ[4]ಮಂತ್ರಾಗ್ನಿಯಿಂದಂ ೬೭

ಮತ್ತಮೊಂದೆಡೆಯೊಳ್,

ಮತ್ತೇಭ.

ಸುಲಿಪಲ್ ಕೆಂಜೆಡೆ ನಾರ ಸೀರೆಯಜಿನಂ ಯಜ್ಞೋಪವೀತಂ ಕಮಂ-
ಡಲುವಾಧಾರಕಮಕ್ಷಮಾಲೆ ಭಸಿತಂ ಸ್ಮೇರಾನನಂ ಕರ್ಣಕುಂ-
ಡಲಮೊಪ್ಪುತ್ತಿರೆ ಪುಣ್ಯದಂತೆ ಶುಭದಂತಾನಂದದಂತಚ್ಛನಿ-
ರ್ಮಲದಂತುಜ್ವಳತೇಜದಂತೆ ಸುಳಿವರ್ ತಚ್ಛೈಲದೊಳ್ ತಾಪಸರ್ ೬೮

ಅಂತವರ ಶಾಂತ್ಯಾಭರಣಶೈವತೇಜಃ ಪ್ರತಾಪದಿಂದೋರಂತೆ ಕ್ರೂರಮೃ[5]ಗಂ-
ಗಳ್ ನಿಜವೈರಮಂ ಬಿಟ್ಟಿರ್ಪುವೆಂತೆಂದೊಡೆ,

---

೧. ಕೊಡಸೆ (ಕಾ. ಬೆ. ಯು. ಬ. ದಾ.). ೨. ಭಾಸಿಪಪೊಲಂತು. (ಕಾ). ೩. ಸಾಳ್ಕೆ (ನಾ. ಯು. ಪ.).
೪. ಚರಣ (ಕಾ. ಬೆ. ಗೊ.). ೫. ಮೃಗಸ್ರಜಂ (ಬ. ನಾ.)

ಉತ್ಪಲ.

ಪುಲ್ಲೆಯ ಕೋಡ ಮೇಲೆ ಪುಲಿಗಳ್ ತಲೆಯಿಟ್ಟು ಕುರಂಗ ಸಂಕುಳಂ
ಭಿಲ್ಲರ ಬಿಲ್ಲ ಮೇಲೆ ಮೊಗವಿಟ್ಟು ನವಿಲ್ಗಳ ಮೇಲೆ ಭೀತಿ ತಾ-
ನಿಲ್ಲದೆ ಸರ್ಪವೀಥಿ ಪೆಡೆಯಿಟ್ಟು ಗಜಂ ಶಿರಮಿಟ್ಟು ಸಿಂಗದೊಳ್
ನಿಲ್ಲದೆ ನೋಡುತಿರ್ಪುವು ನಗೇಂದ್ರಮುನೀಂದ್ರರ ಶಾಂತಮೂರ್ತಿಯಂ ೧೯

ಮತ್ತಮಾ ತಪಸ್ವಿಗಳ್ ರುದ್ರನಂತೆ ಜಟಾಜೂಟರಂಜಿತಾಬ್ಜರುಂ, [೧]ದುರ್ಯೋಧನಂ[೨]ತೆ ಕರ್ಣಾಲಂಕಾರಶೋಭಿತರುಂ, ಕುಬೇರನಂತೆ ವಿಭೂತಿವಿಲಸಿತಗಾತ್ರರುಂ, ಪುಣ್ಯವೃಕ್ಷದಂತೆ ಶಾಖಾವಲಂಬಿತಕರ್ಮನಿಷ್ಠರುಂ, ವಲ್ಕಲಾಂತರ್ವಾಸೆರುಂ, [೩]ಕಳಮಕ್ಷೇತ್ರದಂತೆ ಪಂಕಜಗುಣೋಪವೀತರುಂ, ಭೂಮಿಜೆಯಂತೆ ಕುಶಲವಾಧಿಷ್ಠಿತರುಂ, ನವಗ್ರಹದಂತೆ ರವಿರಾಜವಕ್ರ ಸೌಮ್ಯ-ಜೀವಕಾವ್ಯಶ್ರೀನಿಷ್ಠರುಂ, ನಕ್ಷತ್ರಮಂಡಲದಂತೆ ಪುಣ್ಯಶ್ರವಣಚಿತ್ರಾನಂದ ಹೃದಯರುಂ ಮೂಲ[೪]ಹಸ್ತಸಂಯುಕ್ತರುಂ, ವಾರಣಾಸಿಯಂತೆ ದಿವ್ಯಕ್ಷೇತ್ರ-ವಾಸಿಗಳುಮೆನಿಸಿರ್ದರಂತುಮಲ್ಲದೆಯುಂ,

ಚಂಪಕ.

ತರತರದಿಂದೆ ತೋರ್ಪ [೫]ಸರಿಯಿಂ ದರಿಯಿಂ ಪರಿವೊಜ್ಜರಂಗಳಿಂ
ತರುಕುಲದಿಂ ಲತಾನಿಸರದಿಂ ಮಡುವಿಂ ಗಿಡುವಿಂ ಗುಹಾಳಿಯಿಂ
ಸರಸಿಗಳಿಂದೆ ಪೆರ್ಮೆಳೆಗಳಿಂ ಕೆರೆಯಿಂ ತೊಱೆಯಿಂ ನದಂಗಳಿಂ
ಪರಿವೊನಲಿಂ ಬಿಲಂಗಳಿನರಣ್ಯದಿನಲ್ಲಿಯತಳ್ಪಲೊಪ್ಪುಗುಂ ೨೦

ಆ ಶೈಲನಿಂತಂಬಮಂ ಸುತ್ತಿಮುತ್ತಿದ ಘೋರಗಭೀರಕಾಂತಾರಮಿರ್ಪುದ-ದೆಂತೆಂದೊಡೆ,

---

೧. ದುರ್ಯೋಧನಾಸ್ಥಾನದಂತೆ (ಕಾ. ಕ. ಯ.). ೨. ಶೋಭಿತರುಂ ( ಬ ). ೩. ಕಮಲ ( ಕಾ. ಬ. ಋ. ಬೆ. ದಾ. ಕ. ಗೊ. ಗ. ). ೪. ಹಸ್ತರುಂ ( ಬ ). ೫. ಸರುವಿಂ ದರುವಿಂ ( ಕಾ. ಕ. ಬೆ. ); ಸರಿವಿಂ ದರಿವಿಂ ( ದಾ. ಬ. ). ೬. ವನಂಗಳಿಂ ( ಬೆ. ); ನಗಂಗಳಿಂ ( ಅ ).

ಎಳಸಿ ಗಿರಿಯುಟ್ಟ ಪಟ್ಟಾ-
ವಳಿಯೆನಿಕುಂ ತದ್ವನಂ ಲತಾವಳಿ ಪತ್ರಾ-
ವಳಿ ಪುಷ್ಪಾವಳಿ ಹಂಸಾ-
ವಳಿ ಸಿಂಹಾವಳಿ ಮೃಗಾವಳಿಯ ಪಙ್ಕ್ತಿಗಳಿಂ ೭೧

ಮತ್ತಮಲ್ಲದೆ,

ಮಹಾಸ್ರಗ್ಧರೆ

ಅರನೇಱಲ್ ತಾಱಿ ತುಂಬುರ್ ತದುಕಳಿಲೆ[1] ಲವಂ ನೆಲ್ಲಿ ಬಿಲ್ವಾರ್ಜುನಂ ಕ-
ಮ್ಮರನಾಲಂ ಜಾಲ[2] ಬೇಲಂ ಬಿಳಿಲರಳಿಯೆರಂ ಕಕ್ಕೆಹೂರಂ[3] ಬೆಳಲ್ ನಾ-
ವರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ ಗೊಟ್ಟಕ್ಕಿ ದಿಂಡಂ
ಚಿರಬಿಲ್ವಂ[4] ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ ೭೨

ಚಂಪಕ

ನರಿ ಶಶಕಂ ವೃಕಂ ಸರಟನೆಯ್ಯಮಿಗಂ ಮರೆವಿಂಡು ಬೆಕ್ಕು ಮುಂ-
ಗುರಿ ಮುಸಲಿವ್ರಜಂ ಕರಡಿ ಮಂಡಲಿ ಪೆರ್ಬುಲಿ ಮರ್ಕಟಾಳಿ ಸೂ-
ಕರನಿಕರಂ ಕುರಂಗತತಿಯುಷ್ಟ್ರಚಯಂ ಘನಖಡ್ಗಿ ಸೈರಿಭಂ
ಪುರುಷಮೃಗಂ ಗಜಂ ಶರಭಸಿಂಹದಿನೊಪ್ಪುವುದಲ್ಲಿ ಕಾನನಂ ೭೩

ಅರಗಿಳಿ ಪಾರಿವಂ ಕುರರಿ ಲಾವಗೆಯನ್ಯಭೃತ ಶರಾರಿ ಹೊಂ-
ಗುರು ಚರಣಾಯುಧಂ ಶಕುನಿ ಚಂದನವಕ್ಕಿ[5] ಚಕೋರಿ ಟಿಟ್ಟಿಭಂ
ಹರಡೆಗೆವುಂಜು[6] ಜಾದಗೆಬಕಂ ಶಿಖಿವಾಯಸಮುಂಚೆಕೊಂಚೆ ತಿ-
ತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯವೊಪ್ಪುಗುಂ ೭೪

---

೧. ತದುರಗಿಲೆ (ಯ.); ತದುಕಣಿಲೆ ( ಅ ). ೨. ಜಾತಿ ( ಯ. ); ಜಾಲಿ ( ಅ ). ೩. ಬೂರಂ(ಬೆ.).
೪. ಚಿಲ್ಲ ( ಶಾ ). ೫. ಚಂದಣ ( ದಾ. ಬೆ. ಬ.). ೬. ಕವುಂಜು ( ದಾ. ಬ. ಯ. ಅ. ).

ಮಹಾಸ್ರಗ್ಧರೆ.

ಅತಿಘೋರಂ ಧ್ವಾಂತಪೂರಂ ಬಹುತರುಕುಲಸಾರಂ ಸಮುದ್ಯದ್ಗಭೀರಂ
ಪ್ರತಿಶೂನ್ಯಂ ದಾವಮಾನ್ಯಂ ಮೃಗವಿತತಿಗನನ್ಯಂ ನದೀವ್ರಾತಧನ್ಯಂ
ಮಹಜೋದ್ಯಂ ವ್ಯಾಧವೇದ್ಯಂ ದಿನಕರಕಿರಣಾಭೇದ್ಯಮೀ ಭೂಮಿಗಾದ್ಯಂ
ನತಪುಣ್ಯಂ ತಾನಗಣ್ಯಂ ಕಲಿನವಿಷಯಗುಣ್ಯಂ ವಿರಾಜಿಪ್ಪರಣ್ಯಂ ೭೫

ಮತ್ತೇಭ.

ಹರಿಯಂತಿಂದುವಿನಂತೆ ಕೃಷ್ಣಮೃಗಸಂಶ್ಲೇಷಂ ಸುರಾವಾಸದಂ-
ತುರಗಾಧೀಶ್ವರನಂತೆ ಕೌಶಿಕವಿಭೋಗಂ ಕಾಮನಂತಬ್ಧಿಯಂ-
ತಿರೆ ಚಂಚದ್ರತಿ.ಸಂಯುತಾನಿಮಿಷವೃಂದಂ ವ್ಯೋಮದಂತಬ್ಜವಿ-
ಷ್ಟರನಂತುಜ್ವಳರಾಜಹಂಸವಿಭವಂ ರೌದ್ರಾನನಂ ಕಾನನಂ ೭೬

ಅದು ಸರುವ ದರುವಿನಾಗರ-
ಮದು ಭೂಜವ್ರಜದ ತಾಣಮದು ಮೃಗಸಂತಾ-
ನದ ನೆಲೆಯದು ಶಬರಾನೀ-
ಕದ ಜನ್ಮಸ್ಥಲಮೆನಿಪ್ಪುದೊಪ್ಪುವರಣ್ಯಂ ೭೭

ಮತ್ತೇಭ.

ಅದರೊಳ್ ಭೀಕರಕಾಲಕಿಂಕರನಿಭಂ ಭೀಷ್ಮಾನನಂ ರೌದ್ರಸಂ-
ಮದನೇತ್ರಂ ಘನಕೃಷ್ಣಕಾಯನಿಕರಂ ಕಾಠಿನ್ಯಧರ್ಮಂ ಭಯ-
ಪ್ರದ ಬಾಣಾವಳಿನಿಷ್ಠುರಧ್ವನಿಜಯಂ ನಾನಾಮೃಗಾಯುಷ್ಯದಾ-
ಪದಲಂಕಾರದಿನೊಪ್ಪಿ ಲುಬ್ಧಕಬಲಂ ತೀವಿರ್ದುದಂತಾವಗಂ ೭೮

ಅಂತಿರ್ದ ಪುಳಿಂದಬಲಂ ಬೇಂಟೆಗೆಂದೊರ್ಮೆಗೊಂಡು ಮಹಾ ಮಹಿ-
ದಂತೆ ಪಡಗರಿಸಿ ಸಮಕಟ್ಟಿ ಸನ್ನೆದೋಱೆ,

೧. ಪೇಪ ( ದಾ. ). ೨. ಜನ್ಯಂ ( ಯ. ) ೩. ನುತ ( ಕಾ. ). ೪. [illegible]ರಣ್ಯಂ (ಅ.) ೫. ಸಂಶ್ಲಿಷ್ಟಂ ( ದಾ. ಯ. ). ೬. ಕಾರ್ಪಣ್ಯ ( ಟಿ. ದಾ. ಬ. ಅ. ). ೭. [illegible] ( ಕ. ಟಿ. ). ೮. ಭಯಂ (ಬ.). ೯. ಕುಲಂ (ಕಾ).

ಮಹಾಸ್ರಗ್ಧರೆ.

ಬಡಿಕೋಲ್[೧]ಕಿಗ್ಗಟ್ಟುಹಾಸಂ ಶುನಕವಿತತಿ ಹೇರಿಟ್ಟಿಕೂರಂಬುಗಳ್ ಕೆಯ್-
ಪೊಡೆ ಬಿಲ್ ಪುಲ್ದಂಡೆ ಬೆಳ್ಳಾರ್ಪಟ [೨]ಮೆರೆ ಬಲೆಗಳ್ ಸಾಳುವಂ ಕೂಳೆಗಾಳಂ
ಗಿಡುಗಂ ಬಲ್ವಂಡಿಯೊಳ್ ದೀಹದಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂ-
ಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ಯತ್ಕಿರಾತ [೩]ಪ್ರಜಾತಂ ೭೯

ತಡಿಕೆವಲೆ ಕಣ್ಣವಲೆ ನಿ-
ಟ್ಟಡಿಕಿಲ್ವಲೆ ಗೂಂಟವಲೆ ಪೊಣರ್ಚುವಬಲೆ ಮುಂ-
ಬಿಡುವಲೆ ನಡುವಲೆ ತಡೆವಲೆ
ಸಿಡಿವಲೆ ನಿಡುವಲೆಗಳೊಪ್ಪಿದುವು ಲುಬ್ಧಕರೊಳ್ ೮೦

ಆಗಳ್,

ಚಂಪಕ.

ಹರಿಣನ ಬೇಂಟೆ ಪೆರ್ಬುಲಿಯ ಬೇಂಟೆ ವರಾಹನ ವೀರಬೇಂಟೆ ಪೆರ್-
ಗರಡಿಯ ಬೇಂಟೆ [೪]ಪೆರ್ಮರೆಯ ಬೇಂಟೆ ವಿಹಂಗದ ಮೊತ್ತವೇಂಟೆ [೫]ಸತ್-
ಕರಿಗಳ ಬೇಂಟೆ ಸಿಂಹಶರಭಂಗಳ ಬೇಂಟೆಗಳಾದಿಯಾದ ಭೀ-
ಕರಮೃಗಸಂಘ ಸಂಹನನ[೬]ಮುಣ್ಮಿತು ಪರ್ವಿದರಣ್ಯಮಧ್ಯದೊಳ್ ೮೧

ಮತ್ತೇಭ.

ನಡೆಯೆಂಬಬ್ಬರಿಸೆಂಬ ಪರ್ವಿಪರಿಯೆಂಬಾರೆಂಬ ಸಾರೆಂಬ ಸಂ-
ಗಡಿಸೆಂ[೭]ಬಡ್ಡವಿರೆಂ[೭]ಬ [೮]ಪಾರ್ದುಸರುವಂ ಕಟ್ಟೆಂಬ ಮುಟ್ಟೆಂಬ [೯]ಬಂ-
ದಡಸೆಂಬೊತ್ತರಿಸೆಂಬ ಸುತ್ತಿ ನಿಲಿಸೆಂಬೆಯ್ದೆಂಬ ಮೆಯ್ದೋರುತುಂ
ಪೊಡೆಯೆಂಬೊಂದು ಪುಳಿಂದವೃಂದನಿನದಂ ಪೊಣ್ಮಿತ್ತು ಕಾಂತಾರದೊಳ್ ೮೨

೧. ಕಿರ್ಗಟ್ಟು ( ಕಾ. ). ೨. ಪೆಡೆ ( ಅ. ). ೩ ಪ್ರಜಾತಂ (ಮ. ಗ. ಬಿ.). ೪. ಹೆಮ್ಮರೆಂಜ (ಕಾ ).
೫. ತತ್ ( ಕಾ. ಬ ದಾ. ಬ. ಯ. ). ೬. ಮೊಪ್ಪಿತು ( ಅ. ಬ ). ೭. ದೆಂಬಸಾರೆಂಬ ( ಅ. ).
೮. ಸಾರ್ದು ( ಕಾ. ದಾ. ಬ. ಅ. ಯ. ಬಿ. ). ೯. ಪಿಂ ( ಕಾ. ಅ. ಬ ಯ. )

ಚಂಪಕ

ಇಡು ಮೊಲನಂ ತೆರಳ್ಚೆದಿಸು ಪುಲ್ಲೆಗಳಂ ಬಲೆಯೊಡ್ಡಿ ಖಡ್ಗಿಯಂ-
ಪಿಡಿ ಮರೆವಿಂಡನೆಳ್ಚು ಪುಲಿಯಂ ಛಲದಿಂದಿಱಿ ಪಂದಿಯೊತ್ತುಗೊಂ-
ಡೊಡೆ ಬಿಡುನಾಯ್ಗಳಂ ಸಮೆದ ಪೆರ್ಗುಳಿಯೊಳ್ ಕರಿಪೋತಕಂಗಳಂ
ಕೆಡೆಪು ಮರಳ್ಚು ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್ ೮೩

ನಡುಗಿತ್ತು ವಿಹಗತತಿಯು-
ರ್ಕುಡುಗಿತ್ತು ಮೃಗಾಳಿ ತಮ್ಮ ನಿಜಪೋತಮಂ
ಮಡಗಿತ್ತು ಗೂಡುಗುಹೆಯೊಳ್
ತೊಡಗಿತ್ತು ಕಿರಾತ ಭೀಕರಧ್ವನಿ ವನದೊಳ್ ೮೪

ಆ ಸಂಭ್ರಮದೊಳೊರ್ವ ಪುಳಿಂದಂ ತನ್ನ ನಚ್ಚಿನನಾಯಂ ಮೊಲನಂ ಸರುವಂ ತೋಱಿ ಕೀಱಿ ಬಿಟ್ಟಾಗಳ್.

ನಡೆನಡೆದು ನಸುಬಳಂಕು-
ತ್ತಿಡಬಲನಂ ನೋಡಿ ಕೂಡೆಯಾಘ್ರಾಣಿಸುತುಂ
ಗಿಡುವಿನ ಸುರುವಿನ ದೆಸುವಿನ
ಮಡುವಿನ ಬಳಿಗೊಂಡು ಶುನಕನಟ್ಟಿತು ಮೊಲನಂ ೮೫

ಅಟ್ಟಿದೊಡೆ ತಿರುಗಿ ಮುರಿಮುರಿ-
ದೊಟ್ಟೈಸುತ್ತೆ ಕೊಂಕಿ ಪರಿಯುತೆಡನಂ ಬಲನಂ
ತುಟ್ಟಿಸುತೆ ನಿಂದುನಿಲ್ಲದೆ
ನಿಟ್ಟೋಟದೊಳೋಡಿತೆಸೆವ ಮುಸಕದ ಶಶಕಂ ೮೬

೧. ದೆಸು ( ಬ. ಮು. ). ೨. ನಗದೊಳ್( ಅ. ಬ. ). ೩. ಸಮಯ ( ಅ. ). ೪. ಮಡುವಿನ ದಡಿವಿನ( ದಾ. )
೫. ಸಡೆ ( ಬ. ದಾ. ). ೬. ದಿಟ್ಟಿಸುತೆ ( ಕಾ, ಬ. ಯ. ದಾ. ಅ. ಸ. ). ದಟ್ಟೈಸಿ ( ಕ. ).
೭. ಮುಸಕದೆ ( ಬ. ಯ. ).

ಬಿಡದೋಡೆ ಕಂಡು ಶಬರಂ
ಕಡುಮುಳಿದಱ[೧]ಯಟ್ಟಿ ತಿರುಗೆ ತಿರುಗುತ್ತುಂ ಸಂ-
ಗಡಿಸಿ ಪರಿದುಬ್ಬುಬೆನುತ್ತುಂ
ಬಡಿಕೊಲಿಂದಿಟ್ಟನಧಿಕ[೨]ಬಲನಾ ವೊಲನಂ ೮೭

ಸ್ರಗ್ಧರೆ

ಇಡೆ ತಿರುಗುತ್ತೆ [೩]ಬರ್ಸಬಡಿಕೋಲೊಳೆ ಸಿಲ್ಕುತೆ ಸಿಲ್ಕದಾ ವೊಲಂ
ಗಿಡುಗಳೊಳೋಡಿ ಪೊಕ್ಕ ಪದದೊಳ್ ಘನರಾಹುವ ಕೋಳ್ಗೆ ಭೀತಿಗೊಂ-
ಡುಡುಪತಿ ಬಿಂಬದಿಂದೆ ಸರಿದೋಡಿ ಮುಗಿಲ್ಗಳೊಳೆಯ್ದೆ ಪೊಕ್ಕು ಗಂ-
ಡುಡುಗಿ ಸುರುಳ್ದ ತಚ್ಛಶಕನಂ ನೆಱ ಪೋಲ್ತುದು ಕಾಡ ಪೆರ್ನೊಲಂ ೮೮

ಮತ್ತೊಂದೆಡೆಯೊಳ್,

ಮತ್ತೇಭ.

ಪಸರಂ ಬೆತ್ತೆಡೆಯಾದ ನೀಡಡಿ ಪೊದಳ್ದಾಕರ್ಣವಾಕುಂಚಿತಾ-
ಸ್ತ್ರಸಮೇತೋಚ್ಚಕರಾಗ್ರ[೪]ಮುಸ್ಖಲಿತಚಿತ್ತಂ ಸಂಸ್ಫುಟಾಲೋಕನಂ
ಕುಸಿದಂಗಂ ಮಿಗೆ ದೃಷ್ಟಿಮುಷ್ಟಿಶರಸಂಧಾನಂಗಳೊಂದಾಗೆ ತಾ-
ನಿಸಲೊಂದೊಂದು ಕುರಂಗಮುಂ [೫]ಶಬರನಿಂತಿರ್ದಂ ಮಹಾರಣ್ಯದೊಳ್ ೮೯

ಕಂಡುದು ಮೃಗಮಲ್ಲಿ ಭಯಂ
ಗೊಂಡುದು ಪೆಪ್ಪಳಿಸುತದಿರುತೋಡಲ್ಕೆ ಕರಂ
ದುಂಡಿಸು[೬]ತಿರ್ದಪುದೆಂದುರು-
ಚಂಡಾಸ್ತ್ರದಿನಚಲ ಶಬರನಿಸೆ ಕಾನನದೊಳ್ ೯೦

---

೧. ಯಟ್ಟಿ ತಿರುಗಿ ( ಬ. ಯು. ಬೆ. ದಾ.). ೨. ಬಲನಂ ( ಕಾ. ಬ. ಯು. ಅ. ಕ. ). ೩. ಮತ್ತೆ ( ಬೆ.). ೪. ಸಂಸ್ಖಲಿತ (ದಾ). ೫. ಶಬರನೊಪ್ಪಿರ್ದಂ ಮಹಾರಣ್ಯದೊಳ್ ( ಕಾ, ದಾ. ಕ. ಗ. ); ಶಬರನೊಪ್ಪಿರ್ದಂ ಕಾಂತಾರದೊಳ್ ( ಬ.); ಶಬರನಿಂತೊಪ್ಪಿರ್ದನಾ ಕಾಡಿನೊಳ್ (ಬೆ. ); ಶಬರನಂತೊಪ್ಪಿರ್ದ ಕಾಂತಾರದೊಳ್ ( ಅ. ಗೊ. ಡ. ಸೆ. ). ೬. ತಿರ್ದುದದೆಂ ( ಕಾ. ಕ. ).

ಉತ್ಪಲ.

ತಿರುಗುವ ತನು ಬೆಚ್ಚುರ್ವಕಣ್
ಪರಿವಮನಂ ನಟ್ಟಕಿವಿಯುಡಂಗುವ [1]ಸುಯ್ಯಿಂ
[2]ಸೆರಳಂ ವಿರಾಜಿತೆ ಹರಿಣಂ
ಸರಳಿಸಿತಯ್ವಾಜನೇಳನೆಂಟೊಂಬ[3]ತ್ತುಂ ೯೧

ಆ ಸಮಯದೊಳ್,

[4]ಕುನಿಕುನಿದು ವನದ ಗಿಡುಗಿಡು-
ವಿನ ಮಱಿಮಱಿಯಲ್ಲಿ ಸುಳಿದು ಸುಳಿದೋಡುವ [5]ಟೆ-
ಕ್ಕಿನ ಹರಣನನತಿಭರದಿಂ
ತನತಸಗೆ ಪುಳಿಂದರಟ್ಟಿ ಮುಟ್ಟುತ್ತಿಚ್ಚರ್ ೯೨

[6]ಸಿಲ್ಕಿ ಶಬರಾಳಿಯೆಚ್ಚ ಸ-
ರಲ್ಕಿಕ್ಕಿಱಿಗಿಱಿದು ನಟ್ಟು ಗಱಿದೋಱುತ್ತುಂ
ಸಾಲ್ಕುಂ ಮೆಯ್ಯೊಳ್ ತೀವಿರೆ
ಸಿಲ್ಕಿದ ಮೃಗಮಯ್ಯಮಿಗದ ತೆಱನಾಯ್ತಾಗಳ್ ೯೩

ಮತ್ತಂ ಪೆಱತೊಂದೆಡೆಯೊರ್ವ ಕಿರಾತನಾಥನಳವಿಯೊಳೋಡುತ್ತಿರ್ಪ-
ಮೃಗಸಮೂಹಮಂ ಕಂಡು,

ಬಂಡಿಯ ಪುಲಿಯಂ ಮೆಲ್ಲನೆ
ಕೊಂಡಿಳಿಪುತೆ ಸರಿದು ಕೊರಲ ಹಾಸದ ನೇಣಂ
ಕಂಡಳವಿಗೆ ಸಿಲ್ಕಿದ ಮೃಗ
ಮಂಡಲಮನದರ್ಕೆ ತೋಱಿ ಶಬರಾಧೀಶಂ ೯೪

ಮಹಾಸ್ರಗ್ಧರೆ.

ನಿಮಿರ್ದಂಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲಮಂತಂ
ನಿಮಿಳೋಚ್ಚಂಡಾಕ್ಷಿ ಸೂಕ್ಷ್ಮಶ್ವಸಿತವದನಮತ್ಯೇಕಚಿತ್ತಂ ನಿರಸ್ತ-
ಕ್ರಮಗಾಥಂ ಕೂಡೆತನ್ನೊಳ್ ಬಗೆದಳವಿಗೆ ಮುಂಕೊಂಡು ಧೀಂಕಿಟ್ಟು ಸಾಯು-
ತ್ತ[7]ಮರುತ್ತೋಡುತ್ತೆ ಪೀಱುತ್ತಡಸಿ ಕೆಡಪಿತೊಂಪೇಣನಂ ಚಿತ್ರಕಾಯಂ ೯೫

---

೧. ಸುಯ್ಯುಂ ( ಬೆ. ); ಸುಯ್ಲುಂ (ಶಾ.). ೨. ಸರಳಂ. ( ಕೊ. ). ೩. ತ್ತುಂ ( ಶಾ. ಯ. ಬೆ. ).
೪. ಕುಣಿಕುಣಿಗಿ ( ಬ. ). ೫. ತ ( ಶಾ. ) ೬. ನಿಲ್ಕಿ ( ಪಾ. ಅ. ಬೆ. ). ೭. ತಾಱುತ್ತಿರ್ಪ ( ಶಾ. ಮ. ).

ಪೊದಱೊಳಗತ್ಯುನ್ನತತರ-
ಮದಾಂಧತಾನಂತಬಲ ವಿಭೂಷಣನಪ್ಪ-
ಗ್ಗದ ಪೆರ್ಬುಲಿಯಿರೆ ಶಬರರ್
ಮುದದಿಂದಂ ನೋಡಿ ಕಂಡು ಮತ್ತೊಂದೆಡೆಯೊಳ್ ೯೬

ಚಂಪಕ

ನೆಳೆಯೊಳಗಿರ್ದ ಪೆರ್ಬುಲಿಯನಾರ್ದು ಪುಳಿಂದನಿಕಾಯಮೆಳ್ಚೆ ಪಿಂ-
ಗಳತರಲೋಚನಂ ಬಹಳಸಂಹನನಂ ಪೃಥುಳಾಸ್ಯಗಹ್ವರಂ
ಗಳಿತ ನಿಶಾತದಂಷ್ಟ್ರನತಿಕೋಪಮನಂ ಘನಚಿತ್ರಕಾಯನು-
ಜ್ವಲಚರಣಂ ವಿಘೂರ್ಣಿತಗಳಂ ಪೊಱಮಟ್ಟುದುದಗ್ರ ವೃತ್ತಿಯಿಂ ೯೭

ಪೊಱಮಡೆ ಕಂಡು ಗಂಡುಮಿಗೆ ದಂಡೆಯನಿತ್ತು ಕುಱುತ್ತು ಪತ್ತೆ ಸಾ-
ರ್ದುಱದೆ ನಿಲುತ್ತೆ ಸುತ್ತಿದ ಕಿರಾತಕುಲಂ ಮಝುಭಾಪೆನುತ್ತೆ ಬೊ-
ಬ್ಬೆಱಿಯೆ ಕುನುಂಗಿ ಕುಕ್ಕುಱಿಸಿ ಸರ್ಜನೆ ಕಿಳ್ತಲಗಿಂ ಕಡಂಗಿ ಕಾ-
ಯ್ದಿಱಿದನದೊರ್ವಲುಬ್ಧಕನಗುರ್ವಿನ ಪೆರ್ಬುಲಿಯಂ ವನಾಂತದೊಳ್ ೯೮

ಮತ್ತನೊಂದೆಡೆಯೊಳ್ ಪುಳಿಂದನಾಥರೊಂದಾಗಿ,
ತನತನಗೆ ಹಂದಿವೇಂಟೆಗೆ
ವನಚರರೆಯ್ತಂದು ನಿಂದು ನಿರ್ದಾಣದೊಳೊ-
ಗ್ಗಿನ ಮೆರದ ಮಱಿಯೊಳಿರೆ ಮೆ-
ಲ್ಲನೆ ಬಂದತ್ತೊಂದು ಸೊರ್ಕಿದೆಕ್ಕಲನಾಗಳ್ ೯೯

ಶಾರ್ದೂಲ.

ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮವಕ್ತ್ರಂ ಘನ-
ಕ್ರೂರಂ ವಜ್ರಸಮಾನ ರೋಮನಿಚಯಂ ಸಂಪೂರ್ಣಕಾಯಂ ಸ್ಥಿರಂ
ಶೂರಂ ರೌದ್ರಗಭೀರಚಿತ್ತನತಿಮಾನಿ ಸ್ವಲ್ಪಪುಚ್ಛಾನ್ವಿತಂ
ಘೋರಾರಣ್ಯಚರಂ ವಿರಾಜಿಸಿದುದುದ್ಯದ್ಘೀಕರಂ ಸೂಕರಂ ೧೦೦

---

೧. ಮದದಾಳ್ದುರುನಖದ ಬಲ (ಅ.) ೨. ಪೆಚ್ಚು (ಕ) ೩. ರೋದ್ಗ (ಕಾ. ಗೊ. ಸೆ. ಕ. ಡ. ಗ. ಒ.) ೪. ರೋಷ (ಕಾ. ಬ ಯ. ಬಿ. ದಾ. ಅ. ಕ. ಗೊ.) ೫. ದದುಗ್ರ (ಕೊ.). ೬. ರೇಳ್ತಂದು (ಅ.) ೭. ಮರನ (ಅ. ಬ.). ೮. ನಖಯಂ (ಮ.) ೯. ನಸಮಾನಂ (ಕಾ. ಕ. ಯ. ಬಿ.).

ಮಹಾಸ್ರಗ್ಧರೆ

ಬರೆ[1] ಕಾಣುತ್ತಲ್ಲಿ ಭಿಲ್ಲ ಪ್ರಕರಮಡಸಿ ಕೂರ್ನಾಯ್ಗಳಂ ಬಿಟ್ಟು ಬೊಬ್ಬಿ-
ಟ್ಟುದರೇ ಕೆಯ್ಕೊಂಡು ನಾಲ್ಕುಂ ದೆಸೆಗೆ ಮಸಗೆ ಕಂಡೆಕ್ಕಲಂ ದಾಡೆಗುಟ್ಟು-
ತ್ತಿರದುಂ ಕಣ್ಣಿಂ ಸ್ಫುಲಿಂಗಂ ಸುರಿದಪುದೆನೆ[2] ನೋಡುತ್ತೆ ತೀಡುತ್ತೆ ಕಲ್ಲಿಂ
ಮುರದಂಷ್ಟ್ರಾಗ್ರಂಗಳಂ ಭೂಮಿಯನು[3]ಜಿದೆ ಬೆಜಂಟುತ್ತೆ ಮುಂಗಾಲ್ಗಳಿಂದಂ ೧೦೧

ಸಟ್ಟಡವಿಯೊಳಗೆ ಮುಳಿಸಿಂ
ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಜಿ[4] ಕಿ-
ರ್ಗುಟ್ಟುತೆ ಮುಂದಟ್ಟ ಪೆಡಂ
ಮುಟ್ಟುತೆ[5] ಸೂಕರನಡರ್ದು ಸಾರ್ದುದು ಮೆಳೆಯಂ ೧೦೨

ಕುಪ್ಪಳಿಸಿ ತುರುಗಿ ಪರ್ವಿದ-
ಜಿಪ್ಪವನಿರದಂಡುಗೊಂಡು ಪಂದಿಯ ಬಳಿಯೊಳ್
ನೊಪ್ಪು ನೆಗೆದುರ್ಬಿ ಪಾಯುತೆ[6]
ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ ೧೦೩

ಮತ್ತಮುವಜಿಳೊಳಗೊಂದು ಜಾತಿಜಾಯಿಲಂ ಪೋಗದೆ ನಿಂದು,

ಮುಳದಟ್ಟೆ ತಿರುಗಿ ನೋಡು-
ತ್ತೊಳಪೊಕ್ಕು ಮುರಳ್ದು ಮತ್ತೆ ಬೆನ್ನಟ್ಟೆ ಕರಂ
ಕಳಿದು ಪೆಡಂ ಬಾಯ್ದುಳಲಿಂ
ಬಳಸುತ್ತಿರೆ[7] ನಿಂದ ಪಂದಿಯಂ ಶುನಕೇಂದ್ರಂ ೧೦೪

ಮಿಕ್ಕು ಪುಗಲತ್ತು ಕಿರ್ಗ-
ಣ್ಣಿಕ್ಕುತ್ತೊಳಪೊಕ್ಕ ಜಾಯಿಲನ ಬಡ ನಡುವಂ
ಚಕ್ಕನೆ ತುಂಡಿಸಿ ಮಲೆಯುತೆ
ಧಿಕ್ಕರಿಸಿತ್ತತುಳಕೋಪ ನೀಡಂ ಕ್ರೋಡಂ ೧೦೫

ಆಗಳ್,

---

೧. ಬರಲುಂ ಕಾಣುತ್ತೆ (ಓ.). ೨. ದನೆ (ಕಾ. ಕ.). ೩. ನಿರದೆ. (ಅ.). ೪. ೧ (ಬ. ಮಾ. ಮ. ಅ.). ೫. ಮು (ಕೊ). ೬. ಪೊಯ್ಯುತೆ (ಯ.). ೭. ಬಳಸು (ಅ. ಕ. ಯ.). ೮. ಬಳಸುತ್ತಂ(ಕೊ.).

ಅಳ್ಕಿ ಪುಳಿಂದಂ ಕಾಣುತೆ
ತಳ್ಕೈಸಿಯೆ ಕೊಂಡು ಶುನಕನನೆರಡುಂ ಕಡಿಯಿಂ
ಕಾಳ್ಕಿರ್ಚು ತಗುಳ್ದ ತೆಱದಿಂ
[೧]ನಿಳ್ಕೈಸದೆ ನೊಂದು ಬೆಂದು ಬಳಲುತ್ತಿಂದಂ ೧೦೬

ಉತ್ಪಲ.

ಪಾಸಿನಮೇಲೆ ಪಟ್ಟಿರಿಸಿ ಪಾಲೆಱೆದೆನ್ನೊಡ[೨]ಗೂಡಿ ಬಾಲಕಾ-
ಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿಯು-
ಜ್ಞಾಸನದಲ್ಲಿ [೩]ಕುಳ್ಳಿರಿಸಿ [೪]ಯೋವಿದ ಕುನ್ನಿಯನೀ ವರಾಹನೀ
ಸಾಸಿಗನೀ ಕಠೋರಮುನನೆನ್ನಯೆ ಮುಂದೆ ಸಮಂತುಕೊಲ್ವುದೇ ೧೦೭

ಒಡನೂಡುತ್ತೊಡವೆಳೆಸು-
ತ್ತೊಡನಾಡಿಸಿದೆನ್ನ ಚೆನ್ನ ಕುನ್ನಿಯನೀ ಕ-
ಕ್ಕಡವಂದಿ ಕೊಂದುದಿನ್ನಿದ-
ಱೊಡನಳಿವೆಂ ಕೊಲ್ಲದುಳಿಯೆನೀ ಸೂಕರನಂ ೧೦೮

ಉತ್ಪಲ.

ಎಂದು ಪುಳಿಂದನಾಥ[೫]ನುಳಿದಾರುತೆ ಕೂರಲಗಿಂ ಕಱುತ್ತು ಪೆ-
ರ್ಚಂದಿಯನೆಯ್ದಿ ತಳ್ತಿಱಿದೊಡುಂಗುಟದಿಂದೆ ಶಿರಂಬರಂ ವರಾ-
ಹಂ ದಿಟಮೆತ್ತಿ ಮತ್ತಿಱಿಯೆ ಮತ್ತೆಕರಂ ಸೆಳೆದೆತ್ತಿ ನೊಂದು ತಾ-
ನೊಂದೆಸೆಯೆಳ್ ವರಾಹಪತಿಯೊಂದೆಸೆಯೊಳ್ ಕೆಡೆದತ್ತರಣ್ಯದೊಳ್ ೧೦೯

ಕೆಡೆದಿರ್ದ ಶಬರನಂ ಕ-
ಕ್ಕಡವಂದಿಯ ನೀಕ್ಷಿಸುತ್ತೆ ಶಬರಸಮೂಹಂ
ಬಿಡೆಕೊಂಡು ಕೊನೆದು ಬಲ್ಪಂ
ನುಡಿಯುತ್ತಿರ್ದನ್ನೆಗಮಿತ್ತ ಮತ್ತೊಂದೆಡೆಯೊಳ್ ೧೧೦

---

೧. ನಿಳ್ಕುಳಿಸದೆ (ಅ.); ನಿಳ್ಕುರಿಸದೆ (ಸ.). ೨. ನೂಡಿ (ಮ.); ನಾಡಿ (ಬ. ಅ.). ೩. ತಂದಿರಿಸಿ (ಸ. ಕೊ. ಅ.). ೪. ಸಾಕಿದ (ಕಾ. ಕ. ಯು.). ೫. ನಿರದಾರುತೆ (ಅ. ಮ.); ಸುಳಿದಾರುತೆ (ಕಾ.).

ಪ್ರಕುಪಿತದಿಂ ತೆಗೆದಿಸೆ ಮ-
ಸ್ತ್ರಕಮಂ ಕರಿನೊಂದು ತಿರುಗೆ ಪರಿವ ಶರಂ ಪೇ-
ಚಕದಿಂದುರ್ಚಿ ಕರಂ ಲು-
ಬ್ಧಕನಂ ತಾಗಿತ್ತು ಮಗಳ್ದು ವನದೊಳ್ ಚಿತ್ರಂ ೧೧೧

ಮತ್ತೊಂದೆಡೆಯೊಳ್

ಮಹಾಸ್ರಗ್ಧರೆ.

ದರಿಯಂ ದಂತಾಗ್ರದಿಂದೀಡಿಱಿದು ಕೆಡುಪುತುಂ ಗುಲ್ಮವೃಕ್ಷಂಗಳಂ ತತ್-
ಕರದಿಂದಂ ಸುತ್ತಿಕಿೞ್ತುತ್ತೆ ನಿಜವಿಪುಳಚ್ಛಾಯೆಯಂ ಕುಂಭಿಗಿತ್ತು-
ದ್ಘುರಕೋಪಾಟೋಪದಿಂ ಕಂಡೆಱಗುತೆ ಮದಸೌರಭ್ಯಲೋಲುಪ್ತ ಭೃಂಗೋ-
ತ್ಕರಮಂ ಕರ್ಣಾಗ್ರದಿಂ ಸೋವುತೆ ಕರಿಯಿರೆ ನಿಂದೊಂದದಭ್ರಾಭ್ರಕಾಯಂ ೧೧೨

ಉತ್ಪಲ.

ಕಂಡು ಕಿರಾತನೊರ್ವನಿಭಮಸ್ತಕಮೌಕ್ತಿಕಲೋಭದಿಂದೆ ಕೋ-
ದಂಡಮನಾರ್ಪಿನಿಂ ತೆಗೆದು ಕೂರ್ಪಿನ ಬಾಣದಿನೆಚ್ಚೊಡುರ್ಚಿ ವೇ-
ದಂಡಲಲಾಟದಿಂ ಪೆಜಗೆ ಪೇಚಕದೊಳ್ ಮಿಗೆಮೂಡೆ ತಲ್ಲಣಂ-
ಗೊಂಡುದು ಕುರ್ಗಿಕುಕ್ಕುಱಿಸಿ ಘೀಳಿಡುತಿರ್ದುದು ಬಿಳ್ದು ಭೂಮಿಯೊಳ್ ೧೧೩

ಬೀಳೆ ಪರಿತಂದು ಶಬರಂ
ಸೀಳುತ್ತುಂ ಕುಂಭದೊಳಗಣಲ್ಲಿಯ ಮುಕ್ತಾ-
ಜಾಳಕಮನೆ ಕೊಂಡು ಸುಖಂ-
ದಾಳುತ್ತುಂ ಬಂದನಬಲೆಗೀವತಿಭರದಿಂ ೧೧೪

ಅಂತು ಬಂದು,

ಮತ್ತಗಜ ಮಸ್ತಕದ ಪೊಸ-
ಮುತ್ತಂ ಬಲ್ಪಿಂದೆ ತಂದೆನೆಂದೊಲವಿಂದಂ
ವೃತ್ತೋತ್ತುಂಗ ಪಯೋಧರಿ-
ಗಿತ್ತಂ ಮತ್ತೊರ್ವಶಬರಿ ಮಿಗೆ ನಗೆ ವನದೊಳ್ ೧೧೫

---

೧. ಪಿಂಚಕ (ಬ. ಸೆ. ಗ. ಡ. ಮ. ; ಪಿಂಛಕ (ಬಿ. ಓ. ); ಪಾಛಕ (ಜಿ); ಪಂಚಕ (ದಾ.). ೨. ಧರೆಯಂ (ಯು.). ೩. ಮದಮುಖದಿಂದೊಂದಭ್ರಾ (ಯು.); ಕರಿಯಿರೆನಿಂದತ್ತಯೊಂದ (ಕ.); ಕರಿಯಿದೆ ಕಂಡಾಗನಿಂದ (ಅ.); ಮದಮುಖದಿಂ ನಿಂದುದೊಂದ (ಕೊ.). ೪. ಮಂ (ಕಾ. ಯು. ಬಿ. ದಾ.). ೫. ಮೊಗದೊಳ್ (ಯು. ಮ.).

ಮತ್ತಮೊಂದೆಡೆಯಿಲ್ಲಿ
  ಮತ್ತಮಲ್ಲದೆ ಘನಸುಖ-
ಚಿತ್ತಂ ಚಿತ್ತಜನ ಪೋಲೆ ಮನ್ಮಥರಾಗೋ-
ನ್ಮತ್ತನದೊರ್ವಂ ಲುಬ್ಧಕ-
ನತ್ತಿತ್ತಂ ಶಬರಿಯಿಲ್ಲಡೊಂದಡಿಯನಿಡಂ ೧೧೬

  ಕೆಲದೊಳ್ ಪುಳಿಂದಿಯಿರೆ ಪೆ-
ರ್ಬುಲಿ ಬಂದೊಡಮಂಜನಳ್ಕನೋಡಂ ನೋಡಂ
ಚಲದಿಂ ಕಾಡಂ ಕಾಡಂ
ಸಲೆ ಪಸಿವಂ ಮಱೆದು ತಣಿದು ಬೇಡಂ ಬೇಡಂ ೧೧೭

  ಪೆಱತೊಂದೆಡೆಯೊಳ್ ಮುತ್ತಿಂ
ತುಱುಗಿದ ಮಂಡನಚಯಂಗಳಂ ತೊಟ್ಟೊಲಪಿಂ-
ದೆಱಗಿ ಕುಣಿದಾಡಿಸುತ್ತುಂ
ಮೆಱೆವ ಪುಳಿಂದಿಯರ ನಿಂದ ಮೊತ್ತದೊಳೊರ್ವಳ್ ೧೧೮

  ಎಳನವಿಲ ಕಲಾಪಂಗಳ-
ನೞವಡೆ ತಳೆದುಂ ಮದೇಭಮಸ್ತಕ ಮುಕ್ತಾ-
ಫಳವಿಳಸಿತ ಸಾಪತ್ನೀ-
ಕುಳದೊಳ್ ಗರ್ವಿಸುವ ಶಬರಿಯಿರವತಿಚಿತ್ರಂ ೧೧೯

  ನಡೆದು ಗಳಗಳನೆ ಮತ್ತೊಂ-
ದೆಡೆಯೊಳ್ ಗಜಮೆಯ್ದೆ ಪೊಕ್ಕು ನದಿಯೊಳ್ ಕಡುಸೇ-
ರಪಸಿ ತೆಗೆದೀಂಟೆ ಜಲಮಂ
ಬಿಡೆ ತಮ್ಮೊಳ್ ತೀವಿಕೊಂಡು ಚೆಲ್ಲುವ ಪದದೊಳ್ ೧೨೦

೧. ಪೇಳೆ (ಮ. ಕ. ಬೆ.). ೨. ಕಿರಾತೆ (ಬೆ.). ೩. ಮುತ್ತ್ರಂ (ಅ. ಬ.). ೪. ಪಂತವೆ|ಯುಳವಡೆ (ಅ.); ಪಂತಲೆ|ಯುಳವಡೆ (ಓ.). ೫. ಕುಳದೊಳಗುರ್ವಿಸುವ ಶಬರಿಯೇನೊಪ್ಪಿದಳೊ (ಬ.); ಕುಳದೊಳ್ ಗರ್ವಿಸುವ ಶಬರಿಯಿರವು ವಿಚಿತ್ರಂ (ಮ. ದಾ. ಬೆ. ಕೊ.); ಕುಳದೊಳ್ ಗರ್ವಿಸುವ ಶಬರಿಯಿರವಿದು ಚಿತ್ರಂ (ಅ. ಓ.). ೬. ಪಥದೊಳ್ (ಅ. ಗ.).

ಇಳೆಯೊಳ್ ತಮ್ಮಂ ಕಾದಾ
ಪುಳಿಂದ ನಾಯಕಿಯ ಯೌವನಶ್ವರ್ಯಮನೆಂ
ತಳವಡೆ ಕುಡುವಂತಿರ್ದುದು
ಜಳಪೂರಿತಹಸ್ತದಿಂದೆ ಹಸ್ತಿಕವಂಬಂ ೧೨೧

ವಿಲಸನ್ಮತ್ತಗಜೇಂದ್ರೋ-
ಜ್ವಲ ನಿರ್ಮಳದಂತಮುಸಲಹಸ್ತಸಮೇತಂ
ನಲಿನಲಿದು ಕಿರಾತಸ್ತ್ರೀ-
ಕುಲಮೊಬ್ಬುಳಿಗೊಂಡು ನಿಂದು ಮತ್ತೊಂದೆಡೆಯೊಳ್ ೧೨೨

ಚಂಪಕ

ತಳಿರ್ಗಳಸೀರೆಯುಟ್ಟು ಗುರುಗುಂಜೆಯ ಹಾರಮನಾಂತು ಮುಂದೆ ಶೀ-
ತಳಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ ನಿ-
ಚ್ಚಳಮನ ಸುವ್ವಿ ಕಾಡೊಡೆಯ ಸುವ್ವಿ ಮನೋಹರ ಸುವ್ವಿ ಸುವ್ವಿಯಂ-
ದಳವಡೆ ರಾಗದಿಂ ತಳಿಸಿದರ್ ವನದಲ್ಲಿ ಪುಳಿಂದ ಕಾಂತೆಯರ್ ೧೨೩

ಅದಲ್ಲದೆಯುಂ ಮತ್ತೊಂಡೆಡೆಯೊಳ್ ಅತಿಬಳನೊರ್ವ ಪುಳಿಂದನಾಥಂ ಒಡನೆಯ ಜೇಡರ ಮುಂದಾಸುರದಿಂ ಭಾಷೆಗುಡುತ್ತಿರ್ದನದೆಂತೆಂದೊಡೆ,

ಸ್ರಗ್ಧರೆ.

ಸಿಂದೆಂ ಸಿಂದೆಂತುವೀ ವೀರದ ರದನಿಕರಂ ಬಂದೊಡಂ ಗೊಂ-
ಡಂದಾಸಂದಾವನಂತಿರ್ಪ ಸರಪಸರಮಂ ಕಾಣ್ಬನಾ ಮಾತದಿರ್ಕೆ-
ನ್ನಂದಂ ನಂದಂ ಕಸಲ್ದಿರ್ಪೊಡೆ ಪೊಡೆ ಪುಲಿಯಂ ಜೇಗದಿಂ ಜೇಗದಿಂದಂ
ಬಂದಂ ಬಂದಂತೆ ಕೊಂದುರ್ಕುವ ಕುವರನವಂ ಸೋಂಕಿರಾತಂ ಕಿರಾತಂ ೧೨೪

ಬಿದಿರಂ ಬಿದಿರಂ·ನಡೆ ನಡೆ
ಯದೆಯದೆ ಪಿಡಿ ಪಿಡಿಗೆ ಬಂದ ಕರಿಯುಂ ಕರಿಯುಂ
ಪದೆದೆಚ್ಚು ಕಲಿಕಲಿ ಪೇ-
ಸದೆ ಸದೆದಪನೆಂದು ಜೇಡರೆಸೆ ನಲಿದಿಸುವೆಂ ೧೨೫

---

೧. ಪುಳಿಂದ ನಾಯಕಿಯರಪ್ಪವರ್ಗರ್ಘ್ಯಮುಮಂ ( ಕಾ. ಕ. ಬಿ. ); ಚೆಲುವ ಪುಳಿಂದಿಯರ ಜವ್ವನೈಶ್ವರ್ಯಮುಮಂ ( ಅ. ದಾ. ). ೨. ವು ( ದಾ. ಕೊ. ) ೩. ಪೆಱಕೊಂದೆಡೆಯೊಳ್ (ಅ. ಗ. ದಾ. ಕೊ. ). ೪. ಮುಂಕೆ ( ಬ. ಮ. ). ೫. ನಿರ್ಮಳ ( ದಾ. ).

ಮತ್ತನೊಂದೆಡೆಯೊಳ್,

ಇ[೧]ನೆಯನೊಡಗೂಡಲೆಂದಿಂ-
ಪಿನ ರಮ್ಯಸ್ಥಳಮನಱಸಿ ಬರುತುಂ ನವಯೌ-
ವನೆ ಮುಗ್ಧೆ ತುಱುಗಿ ಪರ್ವಿದ
ವನದೊಳಗಣ ಮೆಳೆಗಳೊಳಗೆ ಪುಗುವನ್ನೆವರಂ ೧೨೬

ಬೆಳಗಂ ಕಳ್ತಲಿಸುವ ಮೆಳೆ-
ಮೆಳೆಯಂ ಪೊಕ್ಕಲ್ಲಿ ತನ್ನ ಕಣ್ಗಳ ಬೆಳಗಿಂ
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಲೆ ಶಬರಿ ಸೊಬಗಳಿದಿರ್ದಳ್ ೧೨೭

ಇರೆ ಸುಪ್ರೌಢಕಿರಾತಂ
ತುರುಣಿಯ ಮುಗ್ಧತೆಗೆ ಮಚ್ಚಿ ಮುಗ್ಧೆಯ ಕಣ್ಣಂ
ಬರೆ ಮುಚ್ಚಿ ಇಡಿದ ಕಳ್ತಲೆ
ದೊರೆಕೊಂಡತ್ತೆಂದು ನೆರೆದು ಸುಖಿಯಾಗಿರ್ದಂ ೧೨೮

ಮತ್ತಮತಿವಿಸ್ತಾರಮಾದ ಘೋರಾರಣ್ಯಂ ಕಡುನಿಡುದುಗೊಂಡಂಬರಚುಂಬಿತಮಾಗಿ ನಳನಳಸಿ ಕೊರ್ಬಿ ಬೆಳೆದ ಪೆರ್ಬಿದಿರ ತುದಿ ತಾಗಿ ಪಱಿದ ಕಿಱುಮುಗಿಲ್ಗಳಿಂದವನಿತಳಕ್ಕಾಲಿಕಲ್ಲೊಕ್ಕು ಚೆಲ್ಲಿದಂತಿರ್ಪ ಮುಕ್ತಾಫಲಗಳಂ ವಂಶತಂಡಂಲಂಗೆತ್ತು ಸುತ್ತಿ ಬಂದುಡುಗುವ ಮುಗ್ಧಶಬರಿಯರಂ ನಗುವ ಕಾಮುಕಶಬರಸಂದೋಹದಿಂ, ಮತ್ತಂ ಪೆಱತೊಂದೆಡೆಯೊಳ್ ಪುಲಿಯ ಬೇಂಟೆಯ ಕಾಳೆಗದ ಕೋಳಾಹಳದ ಮಲ್ಲಾಮಲ್ಲಿಯಿನಾದ ಕರನಖರನವವ್ರಣಕಳಂಕಾಂಕಿತಭುಜವಳಯನಾಗಿ ಬಂದ ಪುಳಿಂದನಂ ಕಂಡು ಕಡುಮುಳಿದು ಪ್ರಣಯಕಲಹಂ ಕೆಯ್ಗೈ

೧. ಇನಿಯನನೊಡಗೂಡಲ್ ಪೆಂ ( ಅ. ). ೨. ಮೆಳೆ ಮೆಳೆಯೊಳ್ ( ಬ. ದಾ. ಶ. ಬೆ. ); ಮೆಳೆಯೊಳಗಂ ( ಕಾ). ೩. ಬೆಳಗಾಗಿಂ (ದಾ). ೪. ತರಳೇಕ್ಷಣಮಂ ( ಕಾ ); ಶಬರಿಯ ಕಣ್ಣಂ ( ಬೆ. ಕೊ. ).೫. ದರ್ರ್ ( ದಾ. ಗ. ಗೊ. ಮ. ). ೬-೬.ಬರಮಂ ಚುಂಬಿಸಿ ( ಕಾ. ).

ಪಲ್ಲವದಿಂ ಪೊಯ್ದು ಪೊಯ್ದು ತಿಕೋಪದಿಂದುತ್ಕಂಠೆಯಾದ ನಲ್ಲಳ್ಗೆ ಲಲ್ಲೆಗರೆದು ಬೆರಲಂ ಕರ್ಚಿ ಕಾಲ್ಗೆಱಗಿ ವಿನಯದಿಂ ತಿಳಿಪಿ ಮುಳಿಸಂ ಕಳಲ್ಚಿ ಕತ್ತಲಿಪ ಮೆಳೆಗಳೊಳ್ ಉತ್ತಾನಲತೆ ಚಿತ್ರಜಂಗೆತ್ತಿದುಪ್ಪರವಟ್ಟಮಾಗೆ ನಿರಂತರಂ ನೆರೆವ ಕಿರಾತಮಿಥುನಂಗಳಿಂ, ಮತ್ತಂ ಸಂಚಿತ ತಿಳಕಿತ ವರ್ಧಕ ಪ್ರೋಳಿತವತಿವರ್ತಿತವಧೋನುಬಂಧಿನಿ ಕ್ರೋಧಿನಿ ಗಂಧಚಾರಿಣಿಗಳೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ತನ್ನ ನೆಳಲಂ ಪ್ರತಿಗಜವೆಂದುಱದೆ ಕಱುತ್ತೆಱಗಿ ಬೆಟ್ಟದ ಪೆಟ್ಟುಗಳನೆತ್ತಿಯೆತ್ತಿ ಕೋಪವಾಱದೆ ಮೀಱಿ ಬಂದು ನೀಡುಂ ನೋಡಿ ಕೋಡುಂಗಲ್ಲಂ ಪರಿದು ಪಾಯ್ದು ಕೋಡುಡಿಯೆ ನಾಡೆ ನೊಂದು ನೋವಂ ಮಱೆದು ಚಂದ್ರಕಾಂತಶಿಲಾತಲದೊಳ್ ಮಾರ್ಪೊಳೆವ ನಿಜಬಿಂಬಮಂ ಕಂಡು ಕಣಿಗೆತ್ತಡಿಗಡಿಗೆ ಕರಮನಿಟ್ಟಾರಯ್ದು ಸಾರುತಿರ್ಪ ಮದಾಂಧಗಂಧಸಿಂಧುರಂಗಳಿಂ, ಮತ್ತಮೊಂದೆಡೆಯೊಳ್ ಪಸಿವೆತ್ತು ಮಸಗಿ ಬಂದು ಬಿಲಂಗಳೊಳಗಣಿಱುಂಪೆಗಳಂ ಮೊಗವಿಟ್ಟೂದಿಯೂದಿ ತಣಿಯದೆ ತವಕದಿಂ ನಡೆನಡೆದು ನಳನಳಿಸುವ ಬೇಲಮರದ ತಳದೊಳುದಿರ್ದ ಪಕ್ವಫಲಂಗಳನಾಯ್ದುಕೊಂಡು ಗಳಗಳನೆ ಪರಿದು ಪಾಸಱೆಯ ಮೇಲಾಸುರದಿಂದೊಡೆದೊಟ್ಟಿ ಜೇನ ಹುಟ್ಟುಗಳನಿಟ್ಟಿಟ್ಟು ಲಸದೆ ಕಲಸಿ ತಣಿವಿನಂ ತಿಂದು ತೇಗಿ ತೂಗಿ ಕೆಲೆಕೆಲೆದು ಕುಪ್ಪಿಕುಪ್ಪಿಯುರ್ಚಿ ಕೊರ್ಚಿ ನಲಿದಾಡುವ ಭಲ್ಲೂಕನಿಕಾಯದಿಂ, ಮತ್ತಮೊಂದಡೆಯೊಳ್ ಎಳವುಲ್ಗಳಂ ಮೇದು ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದ ಬೆಂಡೇಳ್ವ ಲೋಳೆ ಹಿಂಡಿಲ್ಗಟ್ಟಿ ಮೇವಂ ಮಗುಳ್ಚಿ ಕಟ್ಟಿದಿರ ಪುಲಿಯಂ ತೊಟ್ಟನೆ ಕಂಡು ಭೋಂಕನೆಳ್ದುಮೊಗಮನೆತ್ತಿ ಕಡುಮುಳಿದು ಖಾತಿಗೊಂಡು ಚಲದಿಂ ಮಲೆದು ಘಳಿಲನೆಯ್ದಿ ಪಾಯ್ದು ಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟ್ಟು ನೊಸಲ ತೀಂಟೆ ತೀಱದೆ ಕೊಣಕಿಟ್ಟು ಮುರಿದು ಸಿರಿದಪ್ಪ ಪುತ್ತಿನೊಳೊತ್ತಿ ಪೋರ್ದ ನೆತ್ತಿದ ಕರ್ದಮಂ ನಿಟಿಲತಟದೊಳ್ ಪತ್ತಿರ್ದ ಧೂಳಿ ಮೆಯ್ಯೊಳೆ ಮೆಱೆಯೆ ಸಲವೋತ್ಕರದಿಂ ಪೊಱಮಟ್ಟ ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ, ಮತ್ತಮೊಂದೆಡೆಯೊಳ್ ಮರದಿಂ ಮರಕ್ಕೆ ತಿರುಗಿ ಪಾಯ್ದೆಳಗೊಂಬನಲ್ಲಾಡಿ ತೂಗಿ ತೊನೆದಳ್ಳಿಱಿದು

---

೧. ಪೆಂಟೆ ( ಕಾ. ಪಾ. ). ೨-೨. ಅತ್ಯುಗ್ರದಿಂ ಮುಲ್ಲದೊಳ್ ಮುಳಿದು ( ಕಾ. ಬಿ. ಯು. ).

ಕುಳ್ಳಿರ್ದು ಕಾಲ್ಗಳಂ ನೀಡಿ [1]ಬಿರಿಯಂ ಬೆರಂಟಿ ಬಿಸಿಲ್ಗಾಯ್ದು ಪಸಿವೆತ್ತು ಮೇಲಂ ನೋಡಿ ನೀಡಿ ನೆಗೆದು ತಿಣ್ಣಗೊಂಬಿನೊಳ್ ಬಣ್ಣವಳಿಯದ ಪಣ್ಣಂ ತಿಂದು [2]ತಿಣ್ಣನೆ ತಣಿದು ಕಣ್ಣಂ ಬಿಟ್ಟು ಪುರ್ಬಿಕ್ಕಿ ಪಲ್ಗಿಱಿದು ಹುಱ್ಱಿಂದು ಕಿರಾತಕಾಂತೆಯರಂ ಮಿಗೆ ನಗಿಸುತಿರ್ಪ ಮರ್ಕಟಪ್ರಕರದಿಂ, ಮತ್ತಮೊಂದೆಡೆಯೊಳ್ ಚಿತ್ತಜಕೇಳಿಗೆಂದು ಮತ್ತಗಜಂ ಪರಿವ ಕರಿಣಿಯ ಬಳಿಸಂದು ಬೋಳೈಸಿ ಕರಮಂ ನೆಗೆಪಿ ಕೊಡುವ ಪಿಂಚಕಚುಂಬನಪ್ರಾರಂಭಸಮಯದೊಳ್ ತೊಟ್ಟನೆ ಕಂಠೀರವರವಮಂ [3]ಕೇಳಲಾಗೆ ಬೆಳ್ಳಾಗಿ ಬಿಗುರ್ತು ರಾಗಮುಳಿದಗಿದು ಸುಗಿದು [4]ಹಳುಂಗಿ ಹಮ್ಮದಂಬೋಗಿ ಪರಿದೋಡಿ ಪಿರಿಯ ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗದಂಪತಿಗಳಿಂ, ಮತ್ತಮೊಂದೆಡೆಯೊಳಾರ್ದು ಸಾರ್ದು [5]ಪರಿತರ್ಪ ಕಿರಾತನಿಕರದೊಳೊರ್ವಲುಬ್ಧಕಂ ಯಮಕಿಂಕರನಂತೆ ಮುಳಿದು ಪರಿತಂದು ಪಿರಿದಪ್ಪ ಪಕ್ಕಿಗಳ್ ನೆರೆದಿರ್ದ ಶಾಲ್ಮಲಿಯ [6]ತುದಿಯನದಿರದೆ ನೋಡಿ ಮಿಱಿದ ಮರನನೇಱಲ್ ಸಾಲದೆ [7]ಕಾಲಪಾಶದಂತೆ ಮುರಿದು ಪರಿದು ಪರ್ವಿದ ಪೆರ್ಬಳ್ಳಿಯನಡರ್ದೇಱಿ ಬಿಡದೆ ಬರ್ಪುದಂ ತಡೆಯದೆ ಕಂಡು ನಡನಡಂ ನಡುಗಿ ತಲ್ಲಣಿಸಿ ಮಲ್ಲಳಿಗೊಂಡು ಪೊಳಲೊಳಗಣ ಬಾಲವಿಹಂಗಂಗಳನೆಱಂಕೆಯೊಳಿಱುಂಕಿಕೊಂಡು ಪಾಱಲನುವಾಗಿ ತೂಱಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದತಿಸೌಂದರ್ಯಮನುರುತರವಿಕ್ರಮಮನುದ್ಯದ್ಭಯಾನಕಮನೂರ್ಜಿತಸಂಪದಮನಪಾರಗಭೀರತೆಯನನಂತಕೌತುಕಮನನೇಕರೌದ್ರರಸಮನೊಳಕೊಂಡಿರ್ಪುದಂತುಮಲ್ಲದೆಯುಂ;

ಶಾರ್ದೂಲ.

ಇಂತುದ್ಯನ್ಮೃಗಸಂಘದಿಂ ವನಚರಸ್ತೋಮಂಗಳಿಂ ಭೂಮಿಜಾ-
ನಂತ ಶ್ರೇಣಿಗಳಿಂದರಣ್ಯಕುಲದಿಂದಂ ತಾಪಸವ್ರಾತದಿಂ
ಸಂತಂ ಸುತ್ತಿದ ಸೂಕ್ಷ್ಮಗೋತ್ರಚಯದಿಂ ಗಂಧರ್ವಸಿದ್ಧಾಮರೌ-
ಘಂ ತೀವಿರ್ದ ಮಹಾಗುಹಾವಳಿಗಳಿಂದೊಪ್ಪಿರ್ದುದುದ್ಯನ್ನಗಂ ೧೨೯

---

೧. ಬಿದಿಯಂ (ಗ. ಗೊ. ನ. ಕೊ. ಡಾ.). ೨. ದಣ್ಣನೆ ದಣಿದು (ಕಾ. ಜಿ. ಯು.). ೩. ಕೇಳಲೊಡನೆ (ಗ. ಬ.); ಕೇಳ್ದು (ಕಾ. ಜಿ.). ೪. ಹಱಂಗಿ (ಕಾ.). ೫. ಕಪಿತರ್ಪ (ಜ). ೬. ತುದಿಸಾರ್ದ (ಜ). ೭. ಪಾಶದಂತೆ ಮೂಲದಿಂ (ಡಾ.).

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರಸಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೩೦

ಗದ್ಯ.

ಇದು ಸಮಸ್ತಸುರಾಸುರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯಪ್ರಭಾ-ಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕರಂದ-ಮಧುಕರಾಯಮಾಣಸತ್ಕವೀಶ್ವರ ಹಂಪೆಯ ಹರಿಹರದೇವ ವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ಹೈಮಾಚಲವರ್ಣನಂ ಪ್ರಥಮಾಶ್ವಾಸಂ.

---

೧. ಸುರನಿಕರ ( ಪಾ. ಅ. ಕ. ಪ. ).

# ದ್ವಿತೀಯಾಶ್ವಾಸಂ

## ಗಿರಿರಾಜದೇಶಪುರಾಸ್ಥಾನವರ್ಣನಂ

ಶ್ರೀಮಚ್ಛರ್ವಂ ಪರಮ-
ಸ್ವಾಮಿ ದಯಾವಾರ್ಧಿ ಭಕ್ತಿಯಂ ಕುಡುಗೆಮುಗು-
ದ್ದಾಮಸುರರಾಜರಾಜಂ
ಸೋಮಧರಂ ಕೂರ್ತು ಹಂಪೆಯ ವಿರೂಪಾಕ್ಷಂ ೧

ಉತ್ಪಲ.

ಆ ಹಿಮಶೈಲದುತ್ತರವಿಭಾಗದೊಳೊಪ್ಪುವುದಾತ್ತನಂದನ-
ವ್ಯೂಹತಟಾಕವೀಥಿ ಕಳಮಾವಳಿ ಕೈರವರಾಜಿಯಬ್ಜಸಂ-
ದೋಹವಿಶಾಲರಾಜನಗರೀವ್ರಜಚಾರುನದೀನದಾಳಿಯು-
ತ್ಸಾಹಸಮಗ್ರದಿಂದೆ ಗಿರಿರಾಜನ ದೇಶಮಿಳಾವಿಭೂಷಣಂ ೨

ಚಂಪಕ

ಸೊಗಯಿಪ ದೇಶಮಚ್ಚರಿಯ ದೇಶಮದುತ್ತಮ ದೇಶಮಾರ್ಗೆಯುಂ
ಬಗೆದುದನೀವ ದೇಶಮತಿಮಂಗಳದೇಶಮನೂನದೇಶಮು-
ರ್ವಿಗೆ ಸುಖಮಪ್ಪ ದೇಶಮುದಿತೋದಯದೇಶಮಪಾರಪುಣ್ಯಕಾ-
ರಿಗಳನುಕೂಲದೇಶಮಮೃತೋದಯದೇಶಮದೆಂತು ಬಣ್ಣಿಪೆಂ ೩

ತೀವಿ ಬೆಳೆಯಿಲ್ಲದಿಳೆಯಿ-
ಲ್ಲಾವಡೆ ಬೆಳೆಯಿಸದ ವನಮದಿಲ್ಲನವರತಂ
ಪೂವಿಲ್ಲದ ಕೊಳನಿಲ್ಲ ಫ-
ಲಾವಳಿಯಿಲ್ಲದ ಮರಂಗಳಿಲ್ಲಾ ನಾಡೊಳ್ ೪

---

೧. ಪನಿ ( ಬ. ಮ. ). ೨. ವೃಂದಮ ( ಬ. ). ೩. ಜನಗಳಿಂದೆ ( ದಾ. ಅ. ಕೊ. ಗ ). ೪-೪. ವರ್ಗ್ಗಳ ಸಬೋಧವನುತ್ಕ್ರಮ (ಓ.). ೫. ನು ( ಶಾ. ಬ. ಬೆ. ಯ. ). ೬. ಪೆಂಪಿನ ( ಬ ). ೭. ತೋದಿತ (ಬ); ತೋತ್ಥಿತ ( ಅ ). ೮. ಡಿಹ ಭೂಜವಿಲ್ಲಾ ( ಓ ); ದ ಬನಂಗಳಿಲ್ಲಾ ( ಮ. )

ಅಳಿಯಾಸೆ ಪುಷ್ಪವಾಟೀ-
ಸ್ಥಳದೊಳ್ ರಾಜಭಯಮಬ್ಜಸಂಕುಳದೊಳ್ ಸೆಂ-
ಚಳತೆ ಸವಮಾನನೊಳ್ ವಿ-
ಪ್ಪಳತೆ ರಥಾಂಗದೊಳಮಲ್ಲದಿಲ್ಲಾ ನಾಡೊಳ್ ೫

ಸಕಲಂಕತೆ ಚಂದ್ರಮನೊಳ್
ಪಿಕಲಧ್ವನಿ ವಿಹಗದಲ್ಲಿ ಭಂಗಂ ನದಿಯೊಳ್
ಸಕುಟಿಲತೆ ಲತೆಗಳೊಳ್ ಭುವ-
ನಕಂಟಕಂ ಬಿಸದೊಳಲ್ಲದಿಲ್ಲಾ ನಾಡೊಳ್ ೬

ಕರವಿಚ್ಛೇದಂ ಗ್ರಾಮನಿ-
ಕರಂಗಳೊಳ್ ಬಂಧನಂ ಕುಸುಮಮಾಲಿಕೆಯೊಳ್
ಪರವಶಮೆಂಬುದು ಯೋಗೀಂ-
ದ್ರರೊಳಲ್ಲದೆ ಶೈಲಪತಿಯ ದೇಶದೊಳುಂಟೇ ೭

ಆಮಯಮಕ್ಷರಕುಲದೊಳ್
ಸಾಮಂ ವೇದಂಗಳಲ್ಲಿ ಭೀಮಂ ಚಿತ್ರ-
ಸ್ತೋಮದೊಳಂ ಕ್ಷಾಮಂ ಲಲ-
ನಾಮಧ್ಯದೊಳಲ್ಲದಾ ಸುದೇಶದೊಳುಂಟೇ ೮

ಆ ದೇಶಂ ಸಲೆ ಗಿರಿರಾ-
ಜಾದೇಶಂ ಶಿವವಿಪ್ರವೇದೋಚ್ಚರಣಾ-
ನಾದಶಿವವಾಕ್ಯದೊಳ್ ಸಮ-
ನಾದ ಶಿವಜ್ಞಾನಗಾನದಿಂದೆಸೆದಿರ್ಕುಂ ೯

---

೧. ಚಂ ( ಮ. ). ೨. ಕಂ ಬಿಸಜಕ ( ಅ ); ಕ ಬಿಸಜದೊಳ ( ಗ ). ೩. [illegible] ( ಬ ). ೪. ಲ್ಲದಿಲ್ಲದಾ ದೇಶದೊಳುಂ ( ಅ ). ೫. ಸಕಲಭಾಷ್ಯ ( ಕಾ. ಬಿ. ಮ. ಗ ). ೬. ಶಾಸ್ತ್ರ ( ಗ ).

ಗ್ರಾಮಂ ಜಿತಾಘಕುಲಸಂ-
ಗ್ರಾಮಂ ಸದನಂ ಸುಖಕ್ಕೆ ಪೆಸದನಮೆನಿಸಿವಾ-
ರಾಮಂ ರಾಮಂ ಜನಕುಲ-
ಕಾಮಂ ಕಾಮಹರಪೂಜೆ ನೋಡಾ ನಾಡೊಳ್ ೧೦

ಕಲ್ಲೆಲ್ಲಂ ಪರುಷಂ ತರು-
ವೆಲ್ಲಂ ಕಲ್ಪತರು ಗುಲ್ಮಮೆಲ್ಲೌಷಧಿ ಗೋ-
ವೆಲ್ಲಂ ಸುರಭಿಕುಲಂ ಮಡು-
ವೆಲ್ಲಂ ಸಿದ್ಧರಸಮೆನಿಕುಮಂತಾ ನಾಡೊಳ್ ೧೧

ಆ ವಿಷಯದೊಳೊಪ್ಪುವ ಕಳ-
ಮಾವಳಿ ನಳನಳಿಸಿ ಬೆಳೆದು ಪಸುರೇಱೆ ಲಸದ್-
ಭೂವನಿತೆಗೆ ಧಾತ್ರಂ ಪರಿ-
ಭಾವಿಸಿ ಪೊದೆಯಿಸಿದ ಹರಿತಪಟದಂತಿರ್ಕುಂ ೧೨

ಸೊಂಪಾಗುತ್ತಂಕುರಿಸು-
ತ್ತುಂ ಪಸುರೇಱುತ್ತೆ ಕವಲಿಱಿದು ಪೊಡೆಯೊತ್ತು-
ತ್ತುಂ ಪಾಲೇಱುತ್ತುಂ ನೆರೆ-
ದಿಂಪಿಂ ನಳನಳಿಸಿ ಶಾಲಿವನಮೆಸೆದಿರ್ಕುಂ ೧೩

ಉಗುವೆಳನೀರಿಂದಂ ಕದ-
ಳಿಗಳಾ ಕದಳಿಗಳ ಪಣ್ಣ ರಸದಿಂ ಪುಂಡ್ರೇ-
ಕ್ಷುಗಳಿಕ್ಷುರಸದಿನಾ ಕಳ-
ವೆಗಳಾ ಕಳವೆಗಳ ಕಣಿಶದಿಂ ಗಿಳಿ ಬಳೆಗುಂ ೧೪

ಆ ಕಳಮಕ್ಷೇತ್ರಮಂ ಬಳಸಿ ಬಂದು ತಾಮರಸಾಕ್ಷಿಯರಪ್ಪ ಪಾಮರಿಯರ್ ಸಾದರಂ ಕಾದಿರ್ಪಲ್ಲಿ,

---

೧ ಜಿತಾಘಸಂಕುಲ (ಯ). ೨. ಸದನಮೆನಿಸುವಾ (ಅ). ೩. ಜನಕುಲರಾಮಂ (ಅ). ೪. ಭಕ್ತಿ (ಅ. ಓ.). ೫. ದಿಳಿಬೆಳೆಗುಂ (ನು). ೬. ಸಾದರದೆ (ಕಾ. ಯ.): ಸಾದರದಿಂ (ಕೊ. ೫.).

ಚಂಪಕ

ತ್ವರಿತಗತಿಪ್ರಚಾರತೆ ಮರಾಳಲಸದ್ಗತಿ ಸಾರುತೆಳ್ಚಲ-
ಚ್ಚರಿಸುವ ನಾದಮನ್ಯಭೃತನಾದಮೆಡರ್ಚುತಿಡಲ್ಕೆ ಮೆಚ್ಚಿ ಮು-
ಚ್ಚರಿಸುವ ತೋಳ್ ಮರದ್ಧತಲತಾಕುಳಮೆಂದುಱಿ ಪಕ್ಕಿಪೋಪ ಪಾ-
ಮರಿಯರ ಝುಂಕೆಗಲ್ಲಿ ಗಿಳಿಯುಂಜದೆ ಬೆರ್ಚದೆ ನಿಲ್ಕುಮಾವಗಂ- ೧೫

ಮತ್ತಮಲ್ಲಿ,

ಮುಡಿ ಮೊಲೆ ನಿತಂಬಭಾರದಿ-
ನಡಿಯಿಡಲಾಜವೆ ಶುಕಾಳಿಯಂ ಪಾಮರಿಯರ್
ಬಿಡೆ ಪೋಪುತ್ತಿರ್ಪರ್ ಸಂ-
ಗಡಮಿರ್ದಲ್ಲಿರ್ದು ಬಱಿಯ ಗಳಬಳದಿಂದಂ ೧೬

ಗಿಳಿಯಂ ಸೋವೆಳೆಯಳ ನುಡಿ-
ವಳಿಯಿಂದೆ ವಿಕಾಸಮಾದ ಬಾಯ್ದೆಱಿಗಂಡಂ
ದೆಳಸುತ್ತಿರ್ಪುವು ದಾಡಿಮ-
ಫಳಬೀಜಂಗೆತ್ತು ದಂತಕುಳಮಂ ಗಿಳಿಗಳ್ ೧೭

ಮತ್ತಂ ಪೆಜತೊಂದೆಡೆಯ ಕಳಮಕ್ಷೇತ್ರಮಂ ಕಾದಿರ್ಪ ಕಾಮಿನಿಯರೊಳೊರ್ವ ಪ್ರೌಢಪಾಮರಿ ಪಾಂಥರೊಳಗೆ ಬಳಲ್ದು ಬರ್ಪ ಜವ್ವನಿಗನಂ ಕಂಡು ನಾಡೆ ಮನ-ಮೆಳಸಿ ಕೂಡಲೆಂದು

ಪತ್ತಿತು ಬಿಸಿಲುಱಿ ಕಾಲಂ
ಮುತ್ತಿತು ನೋಪುದಕದಿಚ್ಛೆಯಿಂದಂ ಬೆಳರ್ವಾಯ್
ಬತ್ತಿತ್ತಯ್ಯೋ ಶ್ರಮಮನಿ-
ನಿತ್ತಂ ಕಳೆವವರೆ ಜಾಣರೆನುತುಂ ನುಡಿದಳ್ ೧೮

---

೧. ಮಮುಚರ್ುತಿಡಲ್ಕೆ ( ಕಾ. ದಾ. ); ಮಮುಚರ್ುತಿರಲ್ಕೆ ( ಬ. ಅ. ಬೆ. ). ೨. ನೆಚ್ಚ ( ನಾ ). ೩. ಬರಿ ( ಕಾ. ಯ. ಕೊ. ). ೪. ನಿತ್ತಂ ( ಬ ). ೫. ಪನೆ ಜಾಣನೆ ( ಕಾ ).

ಚಂಪಕ.

ನುಡಿಯೆ ಬಳಲ್ದ ಪಾಂಥನೆರ್ದೆ ತಣ್ಪಿನ ಸೋನೆಯನಾಂತ ವಾಳ್ಕೆಯಿಂ
[೧]ಪೊಡಕರಿಸುತ್ತೆ ಪೆರ್ಚೆ ಮಿಗೆ ಸಾರ್ದು ನಿವಾತಸುಖಸ್ಥಳಕ್ಕೆ ಬಂ-
ದೆಡೆಗುಡದನ್ಯಚಿಂತೆಗೆ ಮನೋಜಸುಖಾರ್ಣವಮಧ್ಯದೊಳ್ ಮನಂ-
ಗುಡುತುಮುರ್ಚುತೀಸುತೆ ಧುಡುಮ್ಮೆಱಯುತ್ತಮೆ ಪಾಂಥನೊಪ್ಪಿದಂ ೧೯

ನೆಳಲಾದುದು ಧಮ್ಮಿಲ್ಲಂ
ಪುಳಿನಸ್ಥಳಮಾಯ್ತು ನೃತ್ತಜಘನಭರಂ ಶೀ-
ತಳತರಜಳಮಾದುದು ಕೋ-
ಮಳೆಯಧರಮರೀಚಿ ಪಾಂಥನೇಂ ಬರ್ದುಕಿದನೋ ೨೦

ಮತ್ತಮಾ ದೇಶದೊಂದೆಡೆವಟಗೆಯಲ್ಲಿ,

ಮಹಾಸ್ರಗ್ಧರೆ.

ಕಳಕೇಕೀಕೇಶಪಾಶಂ ಶಶಿನಿಭವದನಂ ಭೃಂಗನೀಲಾಳಕಂ ಸಂ-
ಚಳಿತಪ್ರೋನ್ಮತ್ತಸ್ಯನೇತ್ರಂ ಘಟಿಕುಚಯುಗಳಂ ಲೇಶಮಧ್ಯಂ ಗಭೀರೋ-
ಜ್ಜ್ವಳಶೋಭಾನಾಭಿ ಕುಂಭಸ್ಥಳಸದೃಶನಿತಂಬಂ ಸುರಂಭಾವಿಳಾಸಂ-
ದಳೆದೊಪ್ಪಿರ್ದೂರುದಂಡಂ ತನಗೆಸೆದಿರೆ ಸಂತಂ ಪ್ರಪಾಕಾಂತೆಯಿರ್ದಳ್ ೨೧

ವರನಾಭಿ ಸುಳಿಗಳಂ ತೋಳ್
ತರಂಗಮಾಲೆಗಳನಂಬಕಂ ಮತ್ಸ್ಯಮನಂ-
ಗರುಚಿ ರುಚಿರಾಂಬುವಂ ಪೋ-
ಲ್ತು ರಮಣಿ ನದಿಯಂದದಿಂ ಪ್ರಪಾಂತದೊಳಿರ್ದಳ್ ೨೨

---

೧. ಪೊಡರಿಸುವಂತೆ ( ಓ ). ೨–೨. ದು ಪಾನೀಯ ಶಾಲೆಯಲ್ಲಿ (ಕಾ. ಯ.). ೩–೩. ತ್ತ ನೇತ್ರಂ ಘನ ( ಓ ). ೪, ಸಿಂಹ (ಗೊ. ಯ.). ೫. ಬಳಿ ( ಮ. ಬ. ಬೆ. ಕ. ಅ. ಓ. ). ೬. ಯೆ ನಿತಾಂತಂ ( ಕಾ ); ಯೆ ನಿರಂತಂ ( ಅ. ಬ. ಗೊ ). ೭. ಲೆ ( ಕಾ ).

ಇರೆ ಬಂದ ಪಥಿಕನೊರ್ವಂ
ತರುಣಿಯ ಲಾವಣ್ಯರಸಮನಕ್ಷಿಗಳಿಂದಂ
ಬರೆ ಪೀರ್ದು ದಣಿದು ಬಟ್ಟೆಯ
ಪರಿಶ್ರಮವ್ಯಥೆಯನಱಿಯದಿರ್ದಂ ಸುಖದೊಳ್ ೨೩

ಆ ಪ್ರಪಾಕಾಮಿನಿ ಪಥಿಕರ್ಗೆ ನೀರ್ಗುಡಿಯಲೆಱೆವಲ್ಲಿಯೊರ್ವ ವಿಟಂ ಜಲಪಾನಂ ಮಾಡುತುಂ ತರುಣಿಯ ನಿರತಿಶಯಲಾವಣ್ಯಮಂ ಕಂಡು,

ತೀರ್ದುದು ನೀರ್ ತೀರ್ದುದು ತೃಷೆ
ತೀರ್ದುದು ಕಡುಸೇವೆ ತೀರ್ದೊಡೇಂ ಪಥಿಕಂ ತಾ-
ನಿರ್ದಂತಿರ್ದಂ ಸ್ತ್ರೀಮುಖ-
ಮಿರ್ದಿರನಂ ನೋಡುವಾಸೆ ತೀಱದೆ ಮನದೊಳ್ ೨೪

ನಡೆ ನುಡಿ ಬಳಲ್ಕೆ ಮುನ್ನಂ
ಕಡುಚೆಲ್ವೆಯ ರೂಪುಗಂಡ ಬಳಿಕಂ ನಡೆಯರ್
ನುಡಿಯರ್ ನೀರಂ ಕುಡಿಯರ್
ನಡೆನೋಡುತ್ತಿರ್ಪರತನುಶಿಥಿಲರ್ ಪಥಿಕರ್ ೨೫

ಮತ್ತಮೊಂದು ಪ್ರಪಾಶಾಲೆಯಲ್ಲಿ,

ಅಂಬುವನೆಱೆವಾಗಳ್ ಪ್ರತಿ-
ಬಿಂಬಿಸೆ ಕೆಯ್ನೀರೊಳವಳ ವದನಂ ಪಥಿಕಂ
ನಂಬಿ ನಲಿದೀಂಟಿದಂ ಪ್ರತಿ-
ಬಿಂಬಾಧರಮಧುರರಸಮನೀಂಟುವ ತೆಱದಿಂ ೨೬

೧. ತೀರ್ದೊಡಂ ( ಬ. ಮ. ಜ. ). ೨-೩. ನೀರಂ| ಕುಡಿಯರ್ ನಡೆಯರ್ ನುಡಿಯರ್ (ಪಾ. ಮ. ಆ. ಕ. ಕೊ. ).

ಮತ್ತಮಾದೇಶದಲ್ಲಿ,

ಬಳಸಿಗವೊಪ್ಪಿದುವು ಜಿನುಗಿ
ಗಳಪಿ ಕುಳಿರ್ಕೋಡಿ ಕಳ್ತಲಿಸಿ ಮಲೆದುದ್ದಂ-
-ದಳೆದು ಫಲಮಾಗೆ ಪರಿವಡೆ-
ದಳಿ ಗಿಳಿ ಮಡು ಗಿಡು ಕರಿ ಗಿರಿ ಚೂತಂ ಗೀತಂ ೨೭

ನಾನಾದೇವಾಯತನಾ-
ನೂನವಿಭೋಗಾದಿಸಂಪದಪ್ರದಮೆನಿಸಿ-
ರ್ಪಾ ನಾಡಿಂಗೆ ಶಿರೋಮಣಿ
ತಾನೆನಿಕುಂ ಪೆಸರೊಳೋಷಧಿಪ್ರಸ್ಥಪುರಂ ೨೮

ಅದು ಗಿರಿರಾಜನ ರಾಜ್ಯಾ-
ಸ್ಪದರಾಜಿತರಾಜಧಾನಿ ತಾನೆಂದೆನಿಸಿ-
ರ್ಪುದು ಪುರಮಾ ಪುರಮಂ ಸು-
ತ್ತಿದ ಬಹಿರುದ್ಯಾನಚಯಮನಾರ್ ಬಣ್ಣಿಸುವರ್[೧] ೨೯

ಚಂಪಕ.

ಕರಮೆಸೆವೀಳೆ ಬಾಳೆ ನವಪೂಗಚಯಂ ಫನಸಾಳಿ ಶಾಳಿ ಭಾ-
ಸುರಸುರಹೊನ್ನೆ ಜಂಬು ಘನನಿಂಬಕುಳಂ ಬಕುಳಂ ಕವುಂಗು ತೆಂ-
ಗುರುತರಮಾತುಳಂಗತತಿ ಚೂತಕುಜಾತಮಶೋಕೆ ಪೂಗೊಳಂ
ಕುರುವಕನತ್ತಮಾಲಕೃತಮಾಲತಮಾಲದಿನೊಪ್ಪುಗುಂ ವನಂ ೩೦

ಮತ್ತೇಭ.

ಸಿರಿ ತಂದಿಕ್ಕಿದಶೋಕೆ ವಾಗ್ವನಿತೆಯಿಟ್ಟಾಮ್ರಂ ಶಚೀದೇವಿಯಿ-
ಟ್ಟರನೇರಿಲ್ ಮಿಗೆ ರಂಭೆಯಿಟ್ಟ ಕದಳೀಷಂಡಂ ಸುರಸ್ತ್ರೀಯರಿ-
ಟ್ಟರವಿಂದಾಕರಮೂರ್ವಶೀವಧು ಸರಾಗಂ ತಂದ ಪೂಗದ್ರುಮಂ
ತರದಿಂದಂ ರತಿಯಿಟ್ಟ ಡಾಡಿಮಕುಲಂ ಸಾರ್ವರ್ತುಕೋದ್ಯಾನದೊಳ್ ೩೧

೧. ವನ (ಕೊ).

ಚಂಪಕ.

ಸುರುಚಿರಸಾರಪಕ್ವಫಲವಕ್ತ್ರಲಸಚ್ಛುಕಚುಂಬನಂ ಬನಂ
ಪರಮವಿರಕ್ತಸಂತತಿಗಿದೇತಱ ಮೋಹನಮೆಂಬಿನಂ ಬನಂ
ಚರಿತದೆ ಸೋಲಿಕುಂ ಶುಕಪಿಕಾಳಿಕುಲಕ್ಕತಿಜೀವನಂ ವನಂ
ಧರೆಗೆ ವಿಚಿತ್ರಭಾಸುರಮದೇಳಿಪುದಗ್ಗದ ಕಾವನಂ ವನಂ ೩೨

ಆ ಸಾರ್ವರ್ತುಕಮೆನಿಸಿದುದ್ಯಾನದಲ್ಲಿ,

ಉತ್ಪಲ.

ಅಂಕುರದಿಂ ಪ್ರವಾಳಕುಲದಿಂ ಸನೆಯಿಂ ಮುಗಳಿಂ ಪ್ರಸೂನದಿಂ-
ದಂ ಕಿಱುಗಾಯ್ಗಳಿಂ ತೊರೆದ ದೋರೆಗಳಿಂ ತನಿವಣ್ಣ ಪಜ್ಜ್ಕ್ರಯಿಂ-
ದಂ ಕಳಕಂಠಕೂಜಿತದಿನೊಪ್ಪುವ ಷಟ್ಪದವೃಂದಗಾನದಿಂ-
ದಂ ಕಡುಕೊರ್ಬಿ ಚಪ್ಪರಿಪ ರಾಜಶುಕಾಳಿಯಿನಾಮ್ರನೊಪ್ಪುಗುಂ ೩೩

ಮತ್ತಂ,

ಚಂಪಕ.

ಇದು ರತಿರಾಜಭದ್ರಗಜನೋ ಇದು ಚೈತ್ರನ ರಾಜಧಾನಿಯೋ
ಇದು ವನಲಕ್ಷ್ಮಿಗೆತ್ತಿಸಿದ ಪೀಲಿಯ ಸತ್ತಿಗೆಯೋ ವಸಂತನಿಂ-
ದಿದು ಶಶಿಯುಳ್ತಿಯಿಂ ಸಲಪಿದರ್ವಿಯ ಕೊರ್ವಿದ ಕಲ್ಪವೃಕ್ಷಮೋ
ಇದು ಧರೆಯಿಂದೆ ಮೂಡಿದ ನವಾಂಬುದಮೋ ಎನೆ ಚೂತಮೊಪ್ಪುಗುಂ ೩೪

ಮತ್ತೇಭ.

ತರದಿಂದಂಕುರಮಂಕುರಪ್ರಕರದಿಂದಂ ಪಲ್ಲವಂ ಪಲ್ಲವೋ-
ತ್ಕರದಿಂದಂ ಕುಸುಮಂ ಲಸತ್ಕುಸುಮದಿಂ ಚಂಚತ್ಫಲಂ ತತ್ಫಲೋ-
ತ್ಕರದಿಂ ಚಾರುಶುಕಂ ಶುಕಾವಳಿಗಳಿಂ ಭೃಂಗಾಳಿ ಭೃಂಗಾಳಿಯಿಂ
ಪರಪುಷ್ಟಂ ಪರಪುಷ್ಟಪೋತಕಕುಲಂ ಪೊಣ್ಮೆರ್ಪುದಿಮ್ಮಾವಿನೊಳ್ ೩೫

---

೧. ಲತೆಯಿಂ ( ಕ ) ೨. ದ ಪರ್ವಿದ ( ಶಾ. ಕೊ. ); ಯ ಪರ್ವಿದ ( ಬ ); ದ ಕೊರ್ವಿದ ( ಕ ).
೩. ಪ್ರಸರ ( ಅ ). ೪–೪. ತತ್ಫಲಾ|ಕರದೊಳ್ ( ಮ. ಡಾ. ); ತತ್ಫಲೋ|ತ್ಕರದೊಳ್ ( ಬ ).
೫. ರಾಜ ( ಗೊ ).

ಚಂಪಕ.

ಸಲೆ ಸಹಕಾರದಲ್ಲಿ ಕೆಲವಂಕುರಮಂ ಕೆಲವಾ ಪ್ರಸೂನಮಂ
ಕೆಲವು ಫಲಗಳಂ ಮಿಸುಪ ಚಂಚುಗಳಿಂ ನವನಾಸಿಕಂಗಳಿಂ
ತೊಲಗದೆ ಜಿಹ್ವೆಯಿಂ ಕರ್ದುಕಿ ವಾಸಿಸಿ ಪೀರ್ದುಱಿ ಸೊರ್ಕುತುಂ ಕರಂ
ನೆಲಿಯುತೆ ಮೀಱಿ ತೊಂಡುಗೆಡೆಯುತ್ತೆ ಪಿಕಾಳಿಶುಕಾಳಿಯೊಪ್ಪುಗುಂ ೩೬

ಕಾವಂಗೆಂದು ವಸಂತಂ
ಭಾವಿಸಿ ಸೆಮೆದಿಟ್ಟ ನೀಲದರಮನೆಯೆನಿಕುಂ
ಮಾವಿನ ಹೂವಿನ ಕಾವಿನ
ತಾವಿನ ಮೊದಲಿಂದೆ ತೀವಿದಳಿಗಳ ಬಳಗಂ ೩೭

ಬಿರಿಯಲ್ ಪೊಂಗಿದ ಪಣ್ಗಳ
ಸಿರೆಯುಱಿದಲ್ಲಿರಿಸಿ ಚಂಚುಪುಟದಿಂ ಸವಿಯಂ
ಬರೆ ತೆಗೆದು ತಣಿವು ತವಕನು-
ನರಳ್ಚುತಿರೆ ಮೆಱೆದುವಾಮ್ರದೊಳ್ ಶುಕನಿಕರಂ ೩೮

ಬಿಗಿಯಪ್ಪಿ ಮೊಗವನಿಟ್ಟಾ-
ಲಿಗಳವು ನಸುಮುಚ್ಚಿ ಪಕ್ಷಯುಗಮೆಳಲೆ ರಸಂ-
ದೆಗೆವ ದನಿ ನಿಮಿರೆ ನಾಲಗೆ
ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ ೩೯

ಎಳಸಿ ನೆಗೆತಂದು ಮಿಕ್ಕ-
ಗ್ಗಳಿಸುತುಮಿರ್ದಂತಿರಪ್ಪೆ ಮಧುರರಸಂ ನೆ-
ಗ್ಗಳಿಸೆ ಲವಲವಿಸುತುಂ ಪ-
ಣ್ಗಳೊಳಳ್ದುದದೊಂದು ರಾಜಶುಕನತಿಭರದಿಂ ೪೦

---

೧. ಕೆಲವುಂ ( ಕಾ ). ೨. ನಲಿನಲಿದುರ್ವಿ ( ಕಾ. ಯ. ) ೩. ತೆಗೆದಿಟ್ಟ ( ಅ. ಬ. ). ೪. ಪುಟವಮಂ ( ಬ. ಮ. ). ೫-೫. ತೆಗೆದು ತಣಿವು ತವಕವು|ನರಲ್ಚು ತುರೆ ಮುಱಿವುದಾ ( ಕಾ ); ಪಾರ್ದು ತಣಿವು ತವಕನು|ನರಳುತ್ತಿರೆ ಮೆಱೆದುದಾ ( ಬ. ಗೊ. ); ತೆಗೆದು ತಣಿವು ತವಕನು|ನರಳುತ್ತಿರೆ ಮೆಱೆದುವಾ ( ಬಿ ). ೬. ಗಳಂ ( ಕಾ. ಬಿ. ಯ. ದಾ. ) ೭. ತೆ ಮಿಟ್ಟನಂತಿರಪ್ಪಿ ( ದಾ. ಗೊ. ಕೊ. ).

ಮತ್ತಮಲ್ಲದೆ,

ಅರಳೆಲೆ ಮೇಲಾಡುತ್ತಿರೆ
ಭರದಿಂ ಮಾಂಗಾಯ್ಗಳೊಲೆಯೆ ಕೆಲಬಲದೊಳ್ ನಿಂ-
ದರಗಿಳಿಯ ತೊದಳ್ನುಡಿ ಬಿ-
ತ್ತರಿಸೆ ವಸಂತನ ಕುಮಾರನೆನಿಸಿತ್ತಾಮ್ರಂ ೪೧

ಅಂತಂತೆ ನಲಿದು ನಾಲಗೆ
ತೀಂತೆ ಮಿಗಲ್ ಕಳಿಕೆಗೆಳಸಿ ಚಂಚುವನಿಟ್ಟೋ-
ರಂತೆ ಸವಿಸವಿದು ಸೊರ್ಕಿ ನಿ-
ರಂತಂ ಕರೆವತ್ತು ಮಾವಿನೊಳ್ ಪರಪುಟ್ಟಂ ೪೨

ಅಳಿ ಗಿಳಿ ಪಿಕಕುಲರವದಿಂ
ನೆಳಲಿಂ ರೂಪಿಂ ಫಲಂಗಳಿಂ ಪೂವಿಂದಂ
ಬಳಸಿ ತಣಿಪುವುದು ಪೊಸಮಾ-
ವೆಳಸಿದ ಪಾಂಥಪ್ರತಾನಪಂಚೇಂದ್ರಿಯಮಂ ೪೩

ತಿಳಿನೀರಿಂ ತಾವರೆಯಿಂ
ಕಳಹಂಸೆಯಿನೆಸೆವುದಲ್ಲಿ ಸರಸೀಷಂಡಂ
ತಳಿರಿಂ ನನೆಯಿಂ ಪೂವಿಂ
ಫಳಂಗಳಿಂದೆಸೆವುದಲ್ಲಿ ಚೂತಕುಜಾತಂ ೪೪

ಪಿಕಕುಲದ ಸೊರ್ಕು ಮಧುಕರ-
ನಿಕರದ ಮದವರಗಿಳಿಗಳ ಗರ್ವಂ ನವಚೂ-
ತಕುಜಂ ಮಲ್ಲಿಗೆ ದಾಡಿಮ-
ನಿಕಾಯಮಂಕುರದೆ ಪುಷ್ಪದಿಂ ಫಲದಿಂದಂ ೪೫

---

೧. ಯೊಳೆದಾ ( ಅ. ಮ. ). ೨. ಅಂತಂತು ನಲಿದು (ಕಾ); ಅಂತತಿನಲಿದುಂ ( ಅ ). ೩.೩ ತೀಂತೆ ಕರಂ ಕಳಿಕೆಗಳಿಸಿ ಚಂಚುವನಿಟ್ಟೋ (ಬ). ತೀಂತೆ ಕರಂ ಮಸಗಿ ಕಳಿಕೆಗಳ ನೊಗವಿಟ್ಟೋ (ಅ); ತೀಂತೆ ಮಸಗಿ ಕಳಿಕೆಗಳಿಸಿ ಚಂಚುವನಿಟ್ಟೋ ( ಕ. ಬ ). ೪. ಶುಕ ( ಕಾ ). ೫. ಫಳದಿಂತೆಸೆವುದಲ್ಲಿ ( ಕಾ ). ೬. ನಿಕರಮು ( ಅ ).

ಮತ್ತಮಲ್ಲದೆಯುಂ,

ಬೇರಿಂದಂ ನೀರುಂಡಾ
ಬೇರಿಂದಗ್ರಂಬರಂ ಫಲಂಗಳನೀವೆಂ
ಧಾರಿಣಿಗೆಂಬಂತಿರೆ ಫಲ-
ಪೂರಿತಪನಸದ್ರುಮಂಗಳೆಸೆದುವು ಬನದೊಳ್ ೪೬

ನೀರೆಱೆದುಪಕಾರಕ್ಕೆಳ-
ನೀರಂ ರುಚಿವೆರಸು ತೀವಿ ವನಪಾಲಕರಂ
ಪಾರುತ್ತಿರ್ಪಂತಿರ್ಪುವು
ಸಾರಾಯಫಲಾಳಿ ನಾಳಿಕೇರಂ ಬನದೊಳ್ ೪೭

ವನಲಕ್ಷ್ಮಿಗೆ ಸಕಲವಿಲಾ-
ಸಿನಿಯರ್ ಬಳೆದೋಳ್ಗಳಿಂದೆ ಚಾಮರಮಿಕ್ಕಲ್
ತನತನಗೆ ನಿಂದರೆನೆ ತದ್-
ವನದೊಳ್ ಪೊಂಬಾಳೆಯಿಂದೆ ಪೂಗನುದೆಸೆಗುಂ ೪೮

ಕುಸುಮಶರಂಗೆ ವಸಂತಂ
ಪೊಸಪೊಂಗಳಸಂಗಳಲ್ಲಿ ಸೌರಭ್ಯಸುಧಾ-
ರಸಮಂ ತೀವಿರಿಸಿದವೋ-
ಲೆಸೆವುವು ಫಳಭಾರಮಾತುಳಂಗವ್ರಾತಂ ೪೯

ಬಾಗುತೆ ಬಲಿಯುತೆ ಪೊಳೆದಿನಿ-
ದಾಗುತೆ ದಳವೇಱುತಿಡಿದಿಡಿದು ಹಿಗ್ಗುತೆ ಪ-
ಣ್ಣಾಗುತೆ ಕಾಯ್ಗಳ್ ಪೊಱಮಡೆ
ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ ೫೦

---

೧. ನೀರಿಂ ( ಕಾ. ಬಿ. ಯ. ). ೨. ಲಿಸೆದುದು ಫಲಭರಿತ ( ಕ. ಯ. ); ಲಿಸುವುವು ಫಲಭಾರ ( ದಾ. ಕೊ. ) ೩–೩. ದಳನೋಱು ಹಿಗ್ಗುತ್ತವೆ ಹೂ। ವಾ ( ಅ ); ದಳನೇಱುತಿಡಿಕಿಱಿದು ನ। ಣ್ಣಾ ( ಕಾ. ಮ. ಬೆ ). ೪–೪. ಬೀಗಿ ಬೆಳೆದುವಲ್ಲಿ ಬನದ ( ಅ. ಕ. ).

ಅಂತುಮಲ್ಲದೆಯುಂ,

[೧]ಅಳಿಗಳ ಗಿಳಿಗಳ ಕೋಗಿಲೆ-
ಗಳ ಕಳಹಂಸೆಗಳ[೧] ಪಾರಿವಂಗಳ ಕೋಕಂ-
ಗಳ ಪುರುಳಿಗಳ ನವಿಲ್ಗಳ
ಕೊಳರ್ವಕ್ಕಿಗಳೆಸೆವ [೨]ಮನದ ಬಿನದಂ ಬನದೊಳ್ ೫೧

ನಲಿದು ಕೊರಲೆತ್ತಿ [೩]ಕುಕಿಲಿಜು-
ದುಲಿದುಂ[೩] [೪]ಸುಳಿದೆಳಸಿ ಬಳಸಿ ಬಳಿಸಂದು ಪಳಂ-
ಚಲೆದೊಲೆದು ಪಕ್ಕಮಂ ಬಿ-
ಚ್ಚಿ ಲಲ್ಲೆಗೆ[೫]ಯ್ದತ್ತು ಪಾರಿವಂ ಪಾರಿವದೊಳ್ ೫೨

ಚಾರುತರಂ ನಿರ್ಮಲಜಲ-
ಪೂರಂ ಸೌರಭ್ಯಮುದಿತಮದಮಧುಕರಝಂ-
ಕಾರಂ ಹಂಸಕುಲಕ್ರೀಂ-
ಕಾರಂ ರಾಜೀವಭರಿತನವಕಾಸಾರಂ ೫೩

ಅಂತುಮಲ್ಲದೆಯುಂ,

ಚಂಪಕ.

ಸುರರ ನಿವಾಸದಂತನಿಮಿಷಪ್ರಕರಂ ನಭದಂತಿರಬ್ಜಬಂ-
ಧುರಮಧುಮಾಸದಂತೆ ಸಿತಪಕ್ಷ[೬]ಯುತಂ ರಥದಂತೆ ಚಕ್ರವಿ-
ಸ್ತರಮುರುಪದ್ಮಜಾಂಡದವೊಲಾತ್ತಲಸದ್ಭುವನಾಶ್ರಯಂ ಧನು-
ರ್ಧರರ ಕಳಾಪದಂತೆ ರಮಣೀಯಶಿಳೀಮುಖಸಂಕುಳಂ ಕೊಳಂ ೫೪ §

---

೧—೧. ಅಳಿಗಿಳಿಗಳ ಕೋಗಿಲೆಗಳ|ಕಳಹಂಸಾಳಿಗಳ ( ಕಾ ). ೨. ಮದದ ( ಅ ); ಮದನ ( ಕೊ ). ೩—೩. ಕುನಿದು ಕು|ಕಿಲಿಜುದು ( ಕಾ. ಸೆ. ಓ. ); ಕುಕಿಲಿಜು|ದುಲಿದುರೆ (ಬೆ). ೪. ಸುಳಿಸುಳಿದು ( ಬ ). ೫. ಗರೆದತ್ತು ( ಅ ). ೬. ಯುಗಂ ( ಅ ). § ೫೪ನೆಯ ಪದ್ಯದ ಮುಂದೆ ದಾ. ಓ. ಪ್ರತಿಗಳಲ್ಲಿ ಪಾವಕ ದಿಕ್ಕಿನಂತೆ ವನದಂತೆ ವಿಜೃಂಭಿತಪುಂಡರೀಕಮಿಂ| ದೀವದನಾಭರಮ್ಯಸಭೆಯಂತೆ ರಸಾತಲದಂತನಂತಪ|| ದ್ಮಾವಹಮುರ್ವಿಯಂತೆ ನಭದಂತೆ ವಿರಾಜಿಪ ರಾಜಹಂಸವಾ| ಹಾವಳಿಯಂತೆ ಕಾಮಿಜನದಂತೆ ಸುಮುತ್ಕಳಿಕಾಕುಳಂ ಕೊಳಂ|| ಎಂಬ ಪದ್ಯವಿದೆ.

ನಳಿನದ ಕರ್ಣಿಕೆಯೊತ್ತಿನೊ-
ಳ್ಳವಡೆ ಕಣ್ಮುಚ್ಚಿ ಮುಗ್ಗುಲಿಕ್ಕಿಯಜಸ್ರಂ
ತಳರದೆ ನಿದ್ರಾಸುಖದಿಂ
ಕಳಹಂಸೆಯ ಮಱಿಗಳಿರ್ಪುವಂತಾ ಕೊಳನೊಳ್ ೫೫

ಇಂತೊಪ್ಪುವ ಸರೋವರದೊಳೊಂದು ಕಳಹಂಸಂ ಕಾಂತೆಯನಗಲ್ಚಿ,

ಅತಿಭರದಿಂ ನವಕುವಲಯ-
ತತಿಯೊಳ್ ಕಾಸಾರದೊಳ್ ಕುಶೇಶಯಚಯದೊಳ್
ಲತೆವನೆಯೊಳ್ ವನದೊಳ್ ಪುಳಿ-
ನತಳದೊಳಱಸಿದುದು ಕಾಂತೆಯಂ ಕಳಹಂಸಂ ೫೬

ಪುಳಿನಮನಡಿಗಡಿಗೇಱುತೆ
ಕೊಳನೊಳಗಡಿಗಡಿಗೆ ಪೊಕ್ಕು ಪೊಱಮಡುತೆ ಲತಾ-
ವಳಿಗಳೊಳಡಿಗಡಿಗಾಲಿಸು-
ತಳವಳಿದಡಿಗಡಿಗೆ ಬಳಲುತಿರ್ದುದು ಹಂಸಂ ೫೭

ಬಱಿದೆ ಗಳಗಳನೆ ನಡೆವುದು
ಪೆಱಸಾರ್ವುದು ಬೆರ್ಚುವುದು ಬಳಲ್ವುದು ನುತ್ತೈ-
ಳ್ಚಱಿಯೊಳಿರ್ಪುದು ಕಣ್ಗಳನರೆ-
ದೆಱೆವುದು ನೆನೆನೆನೆದು ಕಾಂತೆಯಂ ಕಳಹಂಸಂ ೫೮

ಇರೆ ಸಿರಿ ಬರ್ಪಂದದೆ ಸುಂ-
ದರಿ ಬರೆ ಪರಿತಂದು ಚಂಚುಗೂಡುತೆ ಪಕ್ಷಾಂ-
ತರದೊಳ್ ಮುಸುಂಕಿ ಬಿಬ್ಬಿರ-
ಬಿರಿವಂತಪ್ಪಿದುದು ದೇಹನೊಂದೆಂಬಿನೆಗಂ ೫೯

---

೧. ವನದೊಳ್ (ಸೆ). ೨. ಬರ್ಪಂತಿರೆ (ದಾ.) ೩. ಬಿಬ್ಬನೆ| ಬಿರಿವಂತಪ್ಪಿತ್ತು (ಕ. ಕೊ).

ಮತ್ತಮೊಂದೆಡೆಯೊಳ್

ಉತ್ಪಲ

ಕಾಮನ ಬಾಣದಿರ್ಕೆವನೆಯೋ ಭ್ರಮರಾಳಿಯ ಸತ್ರಸಾಲೆಯೋ
ಭೂಮಿಯದೊಂದು ಗಂಧಗುಣಮಿರ್ಪೆಡೆಯೋ ವಿಲಸತ್‌ಸದಾಗತಿ
ಪ್ರೇಮದೆ ಸೌರಭಂದಳೆದ ತಾಣಮೊ ಪೇೞಿಮಿದೆಂದು ಕಂಡವರ್
ಕಾಮಿಸೆ ಮಾಲೆಗಾಜರೊಸೆಮೋವಿದ ಪೂವಿನ ತೋಂಟಮೊಪ್ಪುಗುಂ ೬೦

ಚಂಪಕ

ಸುರಗಿಯ ಕಂಪು ಸಂಪಗೆಯ ಕಂಪದಿರ್ಗಂತಿಯ ಸೊರ್ಕುಗಂಪು ಪಾ-
ದರಿಯಲರ್ಗಂಪು ಪಡ್ಡಳಿಯ ಕಂಪಿರವಂತಿಯ ಕಂಪು ಮೊಲ್ಲೆಯೊಂ-
ದುರವಣೆಗಂಪು ಮಲ್ಲಿಗೆಯ ಕಂಪು ಸರೋಜದ ಕಂಪು ನೀಲನೀ-
ರರುಹದ ಕಂಪು ಕೇತಕಿಯ ಕಂಪೆಸೆಗುಂ ಸಲೆ ಪುಷ್ಪವಾಟಿಯೊಳ್ ೬೧

ಆ ನವಗಂಧಕ್ಕೆಳಸಿಯ-
ನೂನಂ ಮಧುಕರನಿಕಾಯಮೊಲ್ದನವರತಂ
ನಾನಾಮಂಜುಳನಿನದದೊ-
ಳಾನಂದಂ ಮಿಕ್ಕು ಕಂಪನೀಂಟುತ್ತಿರ್ಕುಂ ೬೨

ಬಿಗಿಯಪ್ಪಿ ಪುಷ್ಪರಸಮಂ
ತೆಗೆದೀಂಟಿ ತುಳುಂಕಿ ತೂಱಿ ತೇಂಕಾಡಿ ಮನಂ
ಮಿಗೆ ಸೊರ್ಕಿ ಜಿನುಗಿ ಜೀವಿಸಿ
ಮಗಮಗಿಸಿತ್ತೊಂದು ಮಧುಕರಂ ಮಲ್ಲಿಗೆಯೊಳ್ ೬೩

ಅಂತುಮಲ್ಲದೆಯುಂ,

ಧೃತಕಂಟಕಮಾದೊಡಮು-
ನ್ನತಿಯಿಂ ಕೇತಕಿಯೊಳೆಱಗಿದುದು ಮಧುಕರಸಂ-
ತತಿರೂಕ್ಷರಾದೊಡಂ ಸ್ನೇ-
ಹಿತರಂ ಕಾಯಲ್ಕೆ ಬರ್ಪುದೇ ಧಾರಣಿಯೊಳ್ ೬೪

ಅದಲ್ಲದೆಯುಂ,

ಭದ್ರಮೆನಿಸಿರ್ದ ಕುಸುಮಲ-
ಸೆದ್ರಸಮಂ ಪೀರ್ವ ಪದದೊಳೊಪ್ಪಿತು ಮದನಂ
ಮುದ್ರಿಸಿದಂಬಿನ ಲಾಕ್ಷಾ-
ಮುದ್ರೆಯಿದೆಂಬಂತೆ ತೀವಿದಳಿನಿಕುರುಂಬಂ ೬೫



ಅದಲ್ಲದೆಯುಂ,

ನನೆಯಂ ಮುಂಡಾಡುತೆ ಬಲ್-
ನನೆಯಂ ಬಲವಂದು ಮುಗುಳನಾಲಿಂಗಿಸಿ ಕಂ-
ಪಿನ ಬಿರಿಮುಗುಳಂ ಚುಂಬಿಸಿ
ಯನುನಯದಿಂದಲರನಲೆದು ತೀವಿದುವಳಿಗಳ್ ೬೬

ಅಂಡಲೆದು ಜಾದಿಯಂ ಬಂ-
ಡುಂಡಳಿಯಂ ಮಿಕ್ಕು ಮಧುಕರಂಗಳ್ ಭರದಿಂ
ಬಂಡಣ್ಬುವೆನೆ ಸುಗಂಧಮ-
ಖಂಡಿತಮುತಿನುತರಸೋದಯಂ ಮಾಳತಿಯಾ ೬೭

ಅಂತುಮಲ್ಲದೆಯುಂ

ಆ ವನದ ಕೊಳಂ ಪೂಗೊಳ-
ನೇವೇಳ್ವೆಂ ಹಂಸೆ ರಾಜಹಂಸೆಗಳಾಹಾ
ತಾವರೆ ಹೊಂದಾವರೆಗಳ್
ಮಾವಿಮ್ಮಾವಳಿ ಮದಾಳಿ ಗಿಳಿಯರಗಿಳಿಗಳ್ ೬೮

---

೧. ಸದ್ರಸ ( ಕಾ. ಅ. ಗೊ. ಯ ). ೨. ಗಳ ಬಳಗಂ ( ಅ. ಗೊ. ). ೩. ಮುದ್ದಾಡಿಸಿ ( ಮ. ಯ. ಗ. ದಾ. ); ಮುಂಡಾಡಿಸಿ ( ಕ. ಸೆ. ). ೪. ಯೊಳ್ ( ಬ. ಯ. ). ೫. ಸಲವುಂ ( ಓ ). ೬. ರಜೋಮಯಂ (ಕ).

ಅಂತುಮಲ್ಲದೆಯುಂ

ತವೆ ಬೆಳೆದ ಪೊಸಪನಸು ಬ-
ಕ್ಕೆವಲಸು ಸೆಳಸೆಳಿಸುವಿಕ್ಷು ಪುಂಡ್ರೇಕ್ಷು ಪಳಂ-
ಚುವ ತೆಂಗವು ಚೆಂದೆಂಗೊ-
ಪ್ಪುವ ದಾಳಿಂಬಂಗಳೆಲ್ಲ ರಸದಾಳಿಂಬಂ ೭೯

ಚಂಪಕ

ಬನವಿದೆ ನೋಡು ಸರ್ವಸುಖಮಪ್ಪುದು ಕೇಳ್ ಸಡಿಯಿಲ್ಲ ತಣ್ಣೆಲರ್
ಮನದೊಲವಿಂದೆ ತೀಡುತಿದೆ ಚೆಲ್ವು ಮನೋಹರಮಿರ್ಪುದಕ್ಕಜಂ-
ದನುದಿನಮೆಯ್ದಿ ಕಿಂಪುರುಷಕಿನ್ನರಖೇಚರಭೂಚರಾದಿ[1] ಮಂ-
ಡನಮಿಥುನಂ ರತೀಶ್ವರಸುಖಾಬ್ಧಿಯೊಳೊಪ್ಪುಗುಮಾ ವನಾಂತದೊಳ್ ೮೦

ಸುರತರುವೊಂದೆ ತತ್ಸುರಭಿಯೊಂದೆ ಸುರಾಪಗೆಯೊಂದೆ ನಿಶ್ಚಯಂ
ಸುರಪುರದಲ್ಲಿ ಇಲ್ಲಿ ಸುಮನಸ್ತರುಗೋಪಶುನಿರ್ಜರಾಪಗೋ-
ತ್ಕರಮುಮನಂತಮೆಂದು ಗಿರಿರಾಜಪುರೋಪವನಾಳಿಯಲ್ಲಿಯ[2]-
ಪ್ಸರತತಿ ಕಿನ್ನರಿ[3]ಪ್ರತತಿ ಕಿಂಪುರುಷವ್ರಜಮಿರ್ಪುದಾವಗಂ ೮೧

ಮತ್ತಮಾ ಪುರದ ಬಹಿರುದ್ಯಾನಂ ನಾನಾಪಿಕಚಂಚುಸಂಚಾರಿತಚೂತಾಂಕುರ-ಪ್ರಕರದಿಂದೊಸರ್ದು ಮಂದಾನಿಲನಿಂ ಸೂಸಿ ಮಂಜು ಮೆಸಗಿ[4] ಬೀಳ್ವ ಪೊಸರಸದಿಂ[4] ವಿಕಸಿತಪ್ರಸೂನಕುಲದೊಳ್ ಕೂಡೆ ಬಂಡುಣ್ಬ ಷಟ್ಪದಪದಘಾತ[5]ದಿಂದುದಿರ್ದ ಪರಾಗಧೂಳಿಯಿಂ ಶುಕತುಂಡವಿದಾರಿತಪಕ್ವಫಲಗಳಿತರಸಾ[6]ಸಾರದಿಂ ಪರಿಮಳದ ಕೆಸಱ್ ಮಸಗಿದ ವನಸ್ಥಳದೊಳ್ ಬಿನದದಿಂ ನಡೆವಲ್ಲಿ ಕಾಲ್ ಜಗುಳ್ದು ಜೋಲ್ದು ಬೀಳ್ವ ಕಳಹಂಸೆಗಳಂ ನಗುವಂತಿರಲೆವಿರಿದ ಪಣ್ಗಳಿಂ[7] ಕಣ್ಗೊಳಿಸ ದಾಡಿಮದ್ರುಮಂ-ಗಳಿಂ, ಮತ್ತಮೊಂದಡೆಯೊಳ್ ವಿರಾಜಿ ಸಾಜುವ ಪಜಮೆಗಳ ಪಜ್ಜೆವಿಡಿದಜಿ

---

೧. ರಾತ್ರ (ಕಾ). ೨. ಗಳಂಗಜ. (ಬೆ. ಬ. ಕೊ. ಅ.) ೩—೩ ಕಿನ್ನರತತಿಯಪ್ಸರಃ (ಕಾ). ೪.೪ ಮುಸುಂಕಿದಂತೆ ಬೀಳ್ವ ಪೊಸ ರಸಪ್ರಸರದಿಂ (ದಾ). ೫. ಪದಾಹತ (ಮ); ಪಾದಘಾತ (ಅ). ೬. ನಾನಾರಸದಿಂ (ಅ. ಓ.). ೭. ಪಣ್ಗಳ ಚೆಲ್ವಿಂ (ಕಾ. ಕ.).

ಗಂಧವಹನನೊಡಗೂಡಿ ಬಂದೆಳೆದುಯ್ದು ಮಿಸುಗುವ ಕುಸುಮಕರ್ಣಿಕೆಯೊಳ್ ಕಡುಪಿಂ ಕೆಡೆಪಿ ಕೊಲ್ಲುವುದಿದೆಂಬ ಶಂಕೆ ಭೋಂಕನೆ ಪುಟ್ಟೆ ಝುಂಕಾರರವದಿಂ ಸಲ್ಮೊರೆವಂತೆ ಸಲೆ ನೊರೆದು ಸಂಪಗೆಯ ಕಂಪಿಂಗೆ ಕಂಪಿಸಿ ಮಲ್ಲಳಿಗೊಂಡೊಲ್ಲದ ನೊಗಂದಿರುಪಿ ಪರಿತಂದು ಸಾದರದಿಂ ಪೂದೋಂಟದ ಪ್ರಸೂನಕುಲಮನಂಡಲೆದು ಬಂಡುಣ್ಬಲ್ಲಿ ಬಾಯ ಕುಟಕನೆಳಕುಳಿಗೊಂಡು ತೀಡುವ ಗಂಧವಹನ ಬಳಿವಿಡಿದು ಘಳಿಲನೆಳ್ದು ಪರಿಮಳದ ಪಸಿವಿನುಜಿವಣೆಯಡಂಗದೆ ಕಡಂಗಿ ಕಾಯ್ದು ವಸಂತ-ರಾಜಂಗೆ ಪುಯ್ಯಲಿಡುವಂತೆ ನೆರೆನೆರೆದು ನೊರೆವ ಮಧುಕರಪ್ರಕರದಿಂ, ಮತ್ತ-ಮೊಂದೆಡೆಯೊಳ್ ತೀವಿ ಪೂತ ಸೇವಂತಿಗೆಯ ತೋಂಟದೊಳ್ ಮಿಾಂಟುವರಿಪ ಪರಿಮಳದ ಪನಿನೀರ ಪಳ್ಳಮಂ ದಾಂಟಲಾಱದ ಬಾಲಮರಾಳಂಗಳಂ ಪದ್ಮಪತ್ರದಿ-ನೊಪ್ಪುವ ತೆಪ್ಪದೊಳಿಟ್ಟು ದಾಂಟಿಸುತಿರ್ಪ ರಾಜಹಂಸರಾಜಿಗಳಿಂ, ಮತ್ತಂ ಚಕ್ರ-ವಾಕಚಕ್ರವಳಯಾಗ್ರದೊಳೊಗ್ಗಿನ ಕಮಳದ ಮೊಗ್ಗೆಯ ಗುಂಡಿಗೆಯಂ ತಂಡ-ದೊಳಮರ್ಚಿ ಕೊಳರ್ವಕ್ಕಿಯಂ ಹೂಡಿ ದ್ರಾಕ್ಷಾರಸಪೂರಿತಕಾಸಾರಜಲಮಂ ಕೇತಕೀದಳದ ದೋಣಿಯೊಳ್ ವಸಂತರಾಜಂ ಕತ್ತುರಿಯ ಮಡಿಯೊಳ್ ಕಪ್ಪುರದ ಗಿಡುವನ್ನಿಟ್ಟು ಜೂಟಳಮನೆತ್ತಿ ಬೆಳೆಯಿಸಿದನೆಂಬಂತಿರ್ದ ಕರ್ಪೂರದ್ರುಮಂಗಳಿಂ, ಮತ್ತಮೊಂದೆಡೆಯೊಳ್ ಪಸಿದ ಮರಿಗಿಳಿಯ ಮೊಗಮಂ ನೋಡಿ ಚಂಚುಗೂಡಿ ಕಿಸಲಯದೆಸಳ ಮಾಣಿಕ್ಯದ ಸಿಂಪಿಂ ಘಳರಸದ ಪಾಲನೆಱೆದು ತಳಿರ ತೊಟ್ಟಿಲೊ-ಳಿಟ್ಟು ಸಣ್ಣ ನನೆಗಳ ನನೆಯಕ್ಕಿಯನಿಕ್ಕಿ ಪಣ್ಣ ಬಾಯಿನಮನಣ್ಣಾವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು ಮಂದಾನಿಳಂ ತೂಗೆ ಮಧುಕರನಿಕರಂ ಪಾಡೆ ಸಹಕಾರಕುಲದೊಳ್ ಸಂತಸದಿಂ ಸಲಪುತಿರ್ಪ ರಾಜಶುಕಪ್ರಕರದಿಂ, ಮತ್ತ-ಮೊಂದು ಪೂಗೊಳದೊಳ್ ಪೆತ್ತ ಮಱಿದುಂಬಿಯಂ ಕಂಡು ಮನಂಗೊಂಡು ಪುಂಡ-ರೀಕದೆಸಳ ಬೆಳ್ಳಿಯ ಸಿಂಪಿಂ ಪರಿಮಳದ ರಸಮನೆಱೆದು ಪರಾಗದ ತಿಲಕಮನಿಕ್ಕಿ ಸೌರಭದ ತುಂತುಱುಂ ತೂಪಿಱಿದೆಸಳ ಸೋಗಿಲ ಹಸುಳೆಯಂ ಝುಂಕಾರರವದಿಂ ಜೋಗುಳಂಬಾಡಿ ತರಂಗದಿಂ ತೂಗಿ ವಸಂತತಿಲಕನೆಂದು ನಾಮಕರಣಮಂ ಮಾಡಿ ಬಾಳುತಿರ್ಪ ಬಾಣಂತಿದುಂಬಿಗಳ ಗೊಂದಣಂಗಳಿಂ, ಮತ್ತದೊಂದೆಡೆಯೊಳ್ ಚಂದ್ರ-

---

೧. ಪಡೆದ ( ಕಾ. ಕ. ಯ. ಡ. ) ೨. ಪಂ ಬಣ್ಣ (ಕಾ). ೩. ನಿಟ್ಟು (ಓ).

ಕಾಂತನಿರ್ಮಿತ ಕೃತಕಾಚಳನಿತಂಬವಿಳಸಿತಲತಾಮಂಟಪವಳಯಸ್ಥಿತಪುಳಿನಸ್ಥಳ-ಕುಸುಮತಳ್ಪದೊಳ್ ಕುಸುಮಾಯುಧಸಕಳಸುಖಸಾಮ್ರಾಜ್ಯಭರದಿಂ ನೆರೆವ ಹಂಸ-ಕೀರಪಾರಾವತಂಗಳಂ ನೋಡಿ ನಾಡೆ ನೆಲಿದು ಕಾಮಬಾಣಮನಿಕ್ಕಿ ಮೆಟ್ಟಿದಂತೆ ಹೂವಿನ ಹಸೆಯೊಳ್ ಮನಂ ಮುಟ್ಟಿ ಮಾಣದೆ ನೆರೆದ ವಿದ್ಯಾಧರಮಿಥುನಂಗಳಿಂ, ಇಂತು ತುರುಕುಲದ ತೆಕ್ಕೆಯಿಂ ಗುಲ್ಮಕುಳದಿರ್ಕೆಯಿಂ ನೆಳಲ ತಣ್ಪಿಂದಂಕುರದ ಸೊಂಪಿಂ ಪಲ್ಲವದ ನುಣ್ಪಿಂ ಕುಸುಮಾವಳಿಯ ಕಂಪಿಂ ಪರ್ಣಗೊನೆಯ ಬಿಣ್ಪಿಂ ಪಕ್ವಫಲರಸದಿಂಪಿಂ ಕೋಕಿಲಧ್ವಾನದಿಂದಳಿಕುಲದ ಗಾನದಿಂ ಶುಕರವಪ್ರತಾನದಿಂ ಫಲರಸಪಾನದಿಂ ರಾಜಹಂಸಯಾನದಿಂ ಲತಾಮಂಟಪಸ್ಥಾನದಿಂ ಪರಿಕಾಲ ಪರ್ಬಿಂ ಪೂದೋಂಟದ ಕೊರ್ಬಿಂ ವಿಹಂಗಕುಲದುರ್ಬಿಂ ತಮಾಳವನದ ಮರ್ಬಿಂ ವಿದ್ಯಾ-ಧರಿಯುಗುರ್ಬಿಂ ಪ್ರಸೂನಕುಲದ ಪರ್ಬಿಂ ಚಕ್ರವಾಕದ ಪೆರ್ಮೆಯಿಂ ಮಂದಾನಿಲನ ಕೂರ್ಮೆಯಿಂ ಇಂತು ಪುರದ ಬಹಿರುದ್ಯಾನಂ ಸಕಲಸೌಂದರ್ಯಮನಧಿಕತರಸುಕುಮಾರತೆಯನುರುತರಭೋಗಮನುನ್ನತಕ್ರೀಡೆಯನತ್ಯುದಾರತೆಯನತಿಪ್ರಸನ್ನತೆಯ ನೊಳಕೊಂಡಿರ್ಪುದಂತುಮಲ್ಲದೆಯುಂ,

ಮಹಾಸ್ರಗ್ಧರೆ

ಮೊಗಮಬ್ಜಂ ಲೋಚನಂಗಳ್ ಕುವಲಯಮಧರಂ ಬಿಂಬಮಾ ನಾಸಿಕಂ ಸಂ-
ಪಗೆ ತೋಳ್ ಶಾಖಾನಿಕಾಯಂ ಘನಕುಚಯುಗಳಂ ಚಕ್ರವಾಕದ್ವಯಂ ನಾ-
ಭಿ ಗಭೀರೋದ್ಯತ್ಸರಂ ತೋಱುವ ತೊಡೆ ಕದಳೀಸ್ತಂಭಮಂಘ್ರಿ ಪ್ರವಾಳಂ
ಸೊಗಸಿಂ ತಾವಾಗೆ ತನ್ನಂದನಮೆ ಘನವನಶ್ರೀಗೆ ರೂಪಾಗಿ ತೋರ್ಕುಂ ೭೨

ಆ ವನದ ಪುರದ ನಡುವೆ ಸು-
ಖಾವಹಮತಿವಿಭ್ರಮಂ ವಿಶಾಲಂ ಸರ್ವೋ-
ರ್ವೀವರಶಸ್ತ್ರಾಭ್ಯಾಸನಿ-
ಜಾವಾಸಂ ಸುಭಟಪಟಲಪಟುರವಭರಿತಂ ೭೩

---

೧. ನಲಿದನಂಗಬಾಣಮನಿಕ್ಕಿ (ವಾ. ಅ.). ೨. ನೆರೆವ (ಅ). ೩. ಸೌಕುಮಾರ್ಯಮ (ಕಾ). ೪. ಸ್ತ್ರೀಗೆ ರೂಪಾಗೆ (ಕಾ).

ಹಯಶಿಕ್ಷಕರಿಂ ಗಜಶಿ-
ಕ್ಷೆಯ ಭೀಕರದಿಂ ಪ್ರವಂಗುಡುವ ಜೋದರ ಸಂ-
ಚಯದಿಂ ನಯದಿಂ ವೈಹಾ-
ಳಿಯ ಬಯಲೊಪ್ಪಿತ್ತು ಪಟ್ಟಣದ ಬೆನದೆಡೆಯೊಳ್ ೭೪

ಮತ್ತಮಲ್ಲಿ,

ಕರಿಗಳ್ ಬಾಳ್ಗಂಬದೊಳೊ-
ಪ್ಪಿರುತಿರ್ದುವು ಸುಳಿವ ನೀಲಮೇಘಾವಳಿಯಂ
ತರದಿಂ ಸೆಱೆಯಿಟ್ಟಂತಾ
ಗಿರಿಪತಿ ಸುರಪತಿಯ ಹಗೆಯ ಹರಿಬದ ಚಲದೊಳ್ ೭೫

ಸುರಿವ ಮದಂ ಮಳೆ ಗಂಭೀ-
ರರವಂ ಮೊಳಗಂಗಮುಂಬುದಂ ದಂತಂ ನಿ-
ಷ್ಠುರದಿಂದೆಱಗುವ ಸಿಡಿಲಾ-
ಗಿರೆ ಕಾರ್ಗಾಲದವೊಲಿರ್ದುವಲ್ಲಿಯ ಕರಿಗಳ್- ೭೬

ಮತ್ತಮಾ ಪೊಱವೊಳಲ ವೈಹಾಳಿಯ ಬಯಲಿಂದೊಳಗೆ,

ಧರೆಯಂ ಸುತ್ತಿದ ಜಲಧಿಗೆ
ಪುರುಡಿಸಿ ಪುರವಳಯವಿಳಸಿತಪ್ರಾಕಾರಂ
ಪುರಮಂ ಸುತ್ತಿರ್ಪುದು ತತ್-
ಪರಿಖಾತ ಜಲೌಘಮೌರ್ವವಿಹರಣದೂರಂ ೭೭

ಹರಿ ಮತ್ಸ್ಯಾಕಾರದೊಳು-
ಮ್ಮರತಮನಂ ಹತಿಸಲೆಂದು ಪಾತಾಳತಳ-
ಕ್ಕಿರದಿಳಿದ ತಾಣಮೆಂಬಂ-
ತಿರೆ ಪುರದಗಳಿರ್ಪುದತುಳಮತಿಗಂಭೀರಂ † ೭೮

---

೧. ೧೦ ( ಬ. ಕೊ. ) ೨. ಬಯಲೆಡೆ ( ಕ. ಡ). ೩. ಚಲದಿಂ (ದಾ). ೪-೪ ಪ್ರಾಕಾರಾಂ! ತರಪುಂ ( ಶಾ. ಯು. ಬ. ಬೆ. ದಾ. ಅ. ). † ಈ ಪದ್ಯವು ಅ. ಓ. ಪ್ರತಿಗಳಲ್ಲಿಲ್ಲ.

ಮತ್ತಮನಂತರದಲ್ಲಿ,

ಚಂಪಕ

ಪಳಿಕಿನ ಕೋಂಟೆ ಬಟ್ಟದಿನೆ ಜೇವಿನ ದಂಡೆ ನಭಕ್ಕೆ ಮಾರುವ-
ಟ್ಟಳೆ ನಿಮಿರ್ದೆಲಿಜು ಪಾರುವ ಪತಾಕೆ ವಿರಾಜಿಪೆ ಗೊಂಟುಗೊಂಟನೊಳ್
ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರಮಾಗಿಯು-
ಗ್ಗಳಿಸುವ ಗೋಪುರಂ ಪುಲಿಮೊಗಂ ಮೆಱೆಗುಂ ಪುರದೊಳ್ ನಿರಂತರಂ ೩೯

ನೆಗೆದ ಪತಾಕಾಪಟಕೋ-
ಟಿಗಳೊಪ್ಪಿದುವಾವಗಂ ತೊಳಲ್ದು ಬಳಲ್ದಾ
ಖಗನ ತುರಂಗಪ್ರತತಿಗೆ
ಗಗನಾಂಗನೆ ಬೀಸುತಿರ್ಪ ವೀಜನತತಿವೋಲ್ ೪೦

ಅಂತುಮಲ್ಲದೆಯುಂ,

ಬಗೆವೊಡಮರಾವತಿಗೆ ವೀಥಿ-
ಳಿಗೆಯುದಯನಗಕ್ಕೆ ಉಜ್ಜಯಂತಿಗೆ ದಿಟಮಾ
ನಗರಿ ಗುಣೋನ್ನತಿಯಿಂದಂ
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ೪೧

ಪೊಸಸೊದೆ ಕೌಮುದಿಯಂ ಪಸ-
ರಿಸೆ ಕನಕದ ಕಳಶಮಾಳೆ ಪೊಂಬಿಸಿಲಂ ಪ್ರೇ-
ರಿಸೆ ತರತರದಿಂದಂ ರಾ-
ಜಿಸುತಿರ್ಪುವು ಸೋಮಸೂರ್ಯವೀಥಿಗಳೆದಱೊಳ್ ೪೨

೧. ತ (ಶಾ. ಯ.). ೨. ಪಾಳ್ವರಿ (ಶಾ. ಅ.) ೩. ಬಿಜ್ಜಣ (ಅ). ೪. [illegible]
೫. ನಗರಿಗೆ (ನಾ. ಬಿ.). ೬. ಪೊಣ್ಮಿಸೆ (ಶಾ) ೭. ಆಗಳ್ (ಕ).

ಆ ವೀಥಿಗಳೊಳಗೆ

ನೆಯದಿಂ ಮಾಱುಗುಡುವ ಕೊ-
ಳ್ವ ಯತ್ನಪೂರ್ವಕದೊಳಿರ್ಪ ಘನಧನಿಕರ ಪ-
ಙ್ಕ್ತಿಯ ಮುಂದೆ ಸಂದಣಿಸಿ ವಿ-
ಕ್ರಯನವಕಳಮಾದಿಧಾನ್ಯರಾಸಿಗಳೆಸೆಗುಂ. ೮೩

ಅನಂತರಮಲ್ಲಿ,

ಪರಿಮಳದಾಡುಂಬೊಲನಿದು
ವರವಿಟರ ವಿಶಾಲಲೋಲಲೀಲಾಸ್ಥಲಮಾ-
ತುರಿಸುವ ತುಂಬಿಗಳೌತಣ-
ದರಮನೆಯೆನೆ ಪುಷ್ಪವಿಕ್ರಯಸ್ಥಲಮೆಸಗುಂ ೮೪

ಭರದಿಂ ಪೂಮಾಲೆಗಳಂ
ತರದಿಂ ಪಿಡಿದೆತ್ತಿ ನಿಂದ ಶಶಿಮುಖಿಯರ್ ಬಂ-
ಧುರಶಶಿಕಳೆಗಳನೀವಂ-
ತಿರ್ದರಾ ವಿಟಚಕೋರಸಂಗತಿಗಾಗಳ್ ೮೫

ಮತ್ತೊರ್ವಳ್,

ವರಮಲ್ಲಿಗೆ ಮೊಲ್ಲೆಗಳೊಳ್
ಬೆರಸಿದ ಮಧುಕರಕದಂಬದಿಂದಂ ನೀಲೋ-
ತ್ಕರಮಂ ಮೌಕ್ತಿಕಮಂ ಪೋ-
ಲ್ತಿರೆ ಮೆಱೆದಳ್ ಮಾಲೆಗಾರ್ತಿ ಮಣಿಗಾರ್ತಿಯವೋಲ್ ೮೬

ಆ ಮಾಲೆಗಾರ್ತಿಯರ ನಡುವೆಯೊರ್ವ ಪಣ್ಯಾಂಗನೆಯಿರೆ ಕಂಡು,

೧—೧. ನಿಯುತಮೊಳಾ ವೀಥಿಗಳೊಳ್|ನಯುದಿಂ ಮಾರ್ಗೊಡುವಕೊಳ್ವ ( ಅ ). ೨. ಶಶಿದಿನಕರ (ಬ). ೩. ತಿರೆಯಿರ್ದುದು ( ಬ ); ತಿರುತಿರ್ದುದ. ( ಅ ); ತಿರುತಿರ್ದರ್ ( ಶಾ. ಕ. ಬೆ. ). ೪. ಸಂತತಿ (ಗ). ೫. ಉಳ್ವ ( ಶಾ ).

ನಗೆಗಣ್ಗಳ ಕಾಂತಿಯ ಸೆ-
ಳ್ಳುಗುರ್ಗಳ ಕಾಂತಿಯ ಕರದ್ವಯದ ಕಾಂತಿಯ ಮಾ-
ಲೆಗಳಂ ಹೊಸಹೂವಿನ ಮಾ-
ಲೆಗೆತ್ತು ಬೆಲೆಗೊಟ್ಟು ಕೊಂಡು ನಗಿಸಿದನೊರ್ವಂ ೫೭

ಅಂತುಮಲ್ಲದೆ,

ಉತ್ಪಲ.

ಎತ್ತಿದುದೊಂದುಮಾಲೆ ಪೊಸಪೂವಿನ ಬಿಲ್ಲಪೊಲಾಗೆ ಮೀಱೆ ಬೆಂ-
ಬತ್ತುವ ನೋಟಮಂಗಜನ ಬಾಣದವೋಲಿರೆ ಕಾಯಕಾಂತಿ ಸೈ-
ತೊತ್ತಿದ ಮಾರ್ವಿಯಂತಿರೆಸಲೆಂದು ಯುವೋನ್ಮೃಗಮಂ ಕಱುತ್ತು ಕೋ-
ಲೆತ್ತುವ ಬೇಂಟೆಕಾರ್ತಿಯರವೋಲೆಸೆದರ್ ಮಿಗೆ ಮಾಲೆಕಾರ್ತಿಯರ್ ೫೮

ಮತ್ತಮಲ್ಲದೆಯುಮಾ-ಪುರದಲ್ಲಿ,

ಚಂಪಕ.

ಎಸೆಯೆ ಪುರಂಧ್ರಿಯರ್ ಪದೆದು ಸಂಗಡಮಿರ್ದು ಮನೋನುರಾಗದಿಂ-
ದಸುವೆಯ ಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾ-
ರಿಸಿ ಹಿಮಚೂರ್ಣಮಂ ತಳಿದು ಕಂದುಗಳಂ ಪಿಡಿದಾಂಕಿ ನೂಂಕಿದರ್
ದೆಸೆದೆಸೆಗೆಲ್ಲ ಕಂಪೆಸಗೆ ಗಟ್ಟಿಮಗಳ್ಬುತೆ ಗಟ್ಟಿವಳ್ತಿಯರ್ ೫೯

ಸುಳಿಗುರುಳಾಡೆ ತೋಳ್ಗಳೆಡೆಯಾಡೆ ಬೆಮರ್ ಮಿಗೆ ಮೂಡೆ ಸುಯ್ಯೆಲರ್
ಮಿಳಿರೆ ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ ಮೇಲುದಿಂ-
ಬಳಿಯೆ ಕರಂ ಕರಂ ಕೊರಗೆ ಸೋರ್ಮುಡಿ ಲಂಬಿಸೆ ಕರ್ಣಪೂರಿತೋ-
ತ್ಪಳಮೊಲೆದಾಡೆ ಗಟ್ಟಿಗಳನಂದು ಮಗುಳ್ಚಿದರಿಂದುವಕ್ತ್ರೆಯರ್ ೬೦

೧. ಪೊಸಪೂವಿನ ( ಬ. ಕೊ ). ೨. ಕೂಡೆ ( ಕಾ ). ೩. ವ ( ಬ. ಬಿ. ). ೪. ಸಾ ( ಅ ); ಭಾ ( ಗ ). ೫. ಕಂದುಗಳಿಂ ( ಕಾ ). ೬. ಕಂಪೆಸೆಯೆ (ಅ. ಬ.) ೭—೭ ಮೇಲುದಂ|ಬಳಿಯೆ ( ಮ ); ನೋೞಲುದಂ ಬೊಳೆಯೆ ( ಬಿ ). ೮. ಕೊಸರೆ ( ಅ ) ೯. ಮಗುಳ್ಬುವ ( ಅ ).

ಚಂದನಗಂಧಕ್ಕಂ ವದ-
ನೇಂದೀವರಪರಿಮಳಕ್ಕಮೆಱಗುವ ಭೃಂಗೀ-
ವೃಂದಮನುಱೆ ಸೋವುತ್ತುಂ
ಮಂದಯ್ಸ ಮಗುಳ್ಚಿ ಗಟ್ಟಿವಳ್ತಿಯರೆಸೆಗುಂ ೯೧

ಬೆಳಗಿನ ಬಿಂಬಂಗಳನಂ-
ತಳವಡೆ ತರತರದಿನಿಳಿಪಿದಂತಿರ್ದುವು ನಿ-
ರ್ಮಳಪಾತ್ರಾಕುಲದಿಂದಂ[1]
ತೊಳತೊಳಗಿರುತಿರ್ಪ ಕಂಚುಗಾಱರ ಪಸರಂ ೯೨

ಚಾರುತರವಿಮಳಮೌಕ್ತಿಕ-
ಹಾರಾದಿಸಮಸ್ತರತ್ನರಾಶಿಗಳಿಂದಂ
ನೀರೋಡಿದ ರತ್ನಾಕರ-
ದೋರನ್ನಮದಾಯ್ತು ರನ್ನವಸರಂ ಪುರದೊಳ್ ‡ ೯೩

ತೀವಿರ್ಪಶ್ವಾವಳಿಯ ಗ-
ಜಾವಳಿಯ ನರಾವಳಿಗಳ ವಿಕ್ರಯದಿಂದಂ
ಭಾವಿಸೆ ದೂಸಿಗವಸರಂ
ಮೂವರ್ ರಾಯರನೆ ಮಾಱುವಂತೆಸೆದಿರ್ಕುಂ ೯೪

ತನತನಗೆ ಪೊನ್ನ ರಾಸಿಯ-
ನನವರತಂ ಮುಂದುಗೊಂಡನೇಕಕುಬೇರರ್
ಜನಿಯಿಸಿ ನಿಂದಂತಿರ್ಪುದು[2]
ಕನಕವ್ಯವಹಾರದಿಂದೆ ವೈಶ್ಯಕದಂಬಂ ೯೫

---

೧. ಪಾತ್ರೋತ್ಕರ ( ಕಾ ) ೨. ನಿಂದವೊಲಿರ್ಪುದು ( ಅ. ಬ. ). ‡ ೯೩ ನೆಯ ಪದ್ಯದ ಮುಂದೆ ದಾ, ಬೆ. ಗೊ. ಸೆ. ಪ್ರತಿಗಳಲ್ಲಿ “ ಗಿರಿಯೇಱಿ ನೀರವೊಕ್ಕರ।ನುರು ಪುಲ್ಲಂ ಕಚ್ಚಿದವರ ಬಿಡುವರ್ ಬುಧರುಂ|| ಗಿರಿಯೇಱಿ ನೀರ ಪೊಕ್ಕಂ।ಉರು ಪುಲ್ಲ ಕಚ್ಚಿದವರ ಬಿಡರುಂ ಸರದರ್॥ ಎಂಬ ಪದ್ಯವಿದೆ.

ಮತ್ತಮಾ ಪುರದಲ್ಲಿ,

ನೀಲದ ಪಚ್ಚೆಯ ಸವಳದ
ಶಾಲೆಗಳ ಮರೀಚಿಯಂ ಪುರಂದರಧನುಗೆ-
ತ್ತಾಲೋಕಿಸಿ ನವನರ್ತನ-
ಲೀಲೆಯನೊಳಕೊಳ್ವುವಲ್ಲಿ ಪುರದ ನವಿಲ್ಗಳ್ ೯೬

ಬೆಳಬೆಳಪ ಸುಧಾಧವಳಿತ-
ನಿಳಯಂಗಳ ಧವಳಕಾಂತಿಯಂ ಕೌಮುದಿಗೆ-
ತ್ತೆಳಸುತ್ತಿರ್ಪುವು ಪಗಲುಂ
ಒಳಸಿ ಚಕೋರಾಳಿ ಪುರದ ನಿಳಯಮೊಳೆಲ್ಲಂ ೯೭

ಅಂತುಮಲ್ಲದೆ,

ಒದವಿದ ಮುತ್ತಿನ ಮಾಣಿ-
ಕ್ಯದ ಗೋಮೇಧಿಕದ ಪುಷ್ಯರಾಗದ ವೈಡೂ-
ರ್ಯದ ವಜ್ರದ ಪಚ್ಚೆಯ ಪವ-
ಳದ ನೀಲದ ಕಳಶದಿಂ ಶಿವಾಲಯಮೆಸಗುಂ ೯೮

ಮಹಾಸ್ರಗ್ಧರೆ.

ಶ್ರುತಿಘೋಷಂ ಮಂತ್ರಘೋಷಂ ನತಜನಜಯಘೋಷಂ ಪುರಾಣಪ್ರಘೋಷಂ
ಸ್ಮೃತಿಘೋಷಂ ಗೀತಘೋಷಂ ಪರಶಿವವಿಮಳಜ್ಞಾನಸಂವಾದಘೋಷಂ
ಕೃತಿಘೋಷಂ ಯಜ್ಞಘೋಷಂ ಪರಿಣಯನಮಹೋತ್ಸಾಹವಿಸ್ತಾರಘೋಷಂ
ಸತತಂ ಶೋಭಿರ್ಪುದಂತಾ ಪುರದೊಳಭವಗೇಹಾವಳೀವಾದ್ಯಘೋಷಂ ೯೯

---

೧. ದೆ (ಬ) ೨. ನೋಡರಿಚುವುದಲ್ಲಿ (ಬ. ದಾ.). ೩. ಯೆಂದೆ (ಕಾ. ಕ). ೪. ಇರೆಸಿರ್ಪು (ಅ).
೫. ಗೇಹಾಳಿವಾದ್ಯಪ್ರಘೋಷಂ (ಕೊ).

ಮತ್ತಮಾ ಪುರದ ರಾಜವೀಥಿಯಲ್ಲಿ,

ಮಹಾಸ್ರಗ್ಧರೆ.

ವಿಳಸತ್ಸೇವಾಪ್ತರಂಧ್ರೀನಿಕರಚರಣಮಂಜೀರತನ್ಮದ್ರಿಕಾಮಂ-
ಜುಳನಾದಂ ರಾಜಪುತ್ರಪ್ರಕರಪರಿವೃತಾಶೇಷಗೀತಪ್ರಣಾದಂ
ಜಳಪಾನಾಸಕ್ತಮುಕ್ತದ್ವಿಪಕುಲನಿಗಳವ್ರಾತಸಂಭೂತನೂತ್ನೋ-
ಜ್ವಳನಾದಂ ಪೊಣ್ಮುತಿರ್ಕುಂ ನರಪಯುತಕವೀಂದ್ರಾಸ್ಯಸಂಸ್ತೋತ್ರನಾದಂ ೧೦೦

ತಿಂತಿಣಿಪ ಸಿಳಯುದಿಂ ಜನ-
ದಿಂ ತರದಿಂದೆಸೆವ ವೀಥಿಯಿಂ ನೃಪಕುಲದಿ-
ದಂ [1]ತರುಣೀತತಿಯಿಂ ತಾ-
[1]ನಿಂತೊಪ್ಪುವುದಿಳೆಯೊಳೋಷಧಿಪ್ರಸ್ಥಪುರಂ ೧೦೧

ಉತ್ಪಲ.

ಶ್ರೀಪರಮೇಶ್ವರಾಂಘ್ರಿಸರಸೀಜಮಧುವ್ರತನುದ್ಧತೇಜನು-
ರ್ವೀಪತಿ ಸರ್ವದಿಗ್ಭರಿತಕೀರ್ತಿಯುತಂ ನತಭೂಭುಜಂ ಜಗ-
ದ್ದೀಪಕನತ್ಯುದಾರನತಿಧೀರನತಿಸ್ತುತಿಪಾತ್ರಗೋತ್ರನಂ-
ತಾ ಪುರನಾಥನೊಪ್ಪುವನುದಾತ್ತಗುಣಂ ಗಿರಿರಾಜನುರ್ವಿಯೊಳ್ ೧೦೨

ಮತ್ತೇಭ.

ಪರಭೂಪಾಲವಿಶಾಲಮೌಳಿಮಣಿಸಂಘಾತಪ್ರಭಾಪುಂಜವಿ-
ಸ್ತರಪಾದಂ ನತಸರ್ವಲೋಕನಭಯಂ ತೀವ್ರಪ್ರತಾಪಂ ಮಹೀ-
ಧರರಾಜಂ ಮಹಿಮಾಂಬುರಾಶಿಯಚಳಂ ಭರ್ಗಪ್ರಿಯಂ ಭೋಗಭಾ-
ಸುರನುದ್ದಾಮಗುಣಂ ಪ್ರಚಂಡಭುಜನೊಪ್ಪಿರ್ಪಂ ನಗಾಧೀಶ್ವರಂ ೧೦೩

೧. ತರುಣಿತರುಣತತಿಯಿಂ| ದಿಂ ( ಅ ). ೨. ದಿವಾಕರ ( ಬ. ಯ. ದಾ. ಅ. ಕ. ಡ. ಗ. ಓ. ಮ. )
೩. ವೀರ (ಅ). ೪. ಸುದಾರ ( ಅ. ಬ. ಕ. ಡ ). ೫. ವರ ( ಮ. ಬ. ಕೊ. ಸೆ. ಓ. ).
೬. ಪಾದಾನತ (ಮ); ಪಾದೋನ್ನತ (ಅ).

ಚಂಪಕ.

ಎಱಗದ ಭೂಪರಿಲ್ಲ ಬೆಸಕೆಯ್ಯದ ರಾಜಕುಮಾರರಿಲ್ಲ ಕೂ-
ರ್ತಱಿಯದ ಪೆಣ್ಗಳಿಲ್ಲ ತಲೆವಾಗದ ಚಾಗಿಗಳಿಲ್ಲ ತಳ್ತು ಕು-
ತ್ತುಱಿಸದ ವೀರರಿಲ್ಲ ನತರಾಗದ ಬಲ್ಲಿದರಿಲ್ಲ ಕೀರ್ತಿಯಿಂ
ತುಱುಗದ ದಿಕ್ಪ್ರತಾನಮಣಮಿಲ್ಲೆನೆ ಬಾಳ್ವನಗಾಧಿನಾಯಕಂ ೧೦೪

ಉತ್ಪಲ.

ಆತನ ಪುಣ್ಯವಲ್ಲಭೆ ವಿರಾಜಿತೆ ಪೂಜ್ಯೆ ಪರಾಪರೈಕ ವಿ-
ಖ್ಯಾತೆ ಪತಿವ್ರತಾಗುಣವಿಭೂಷಣೆ ಸಲ್ಲಲಿತಾಂಗಿ ಸತ್ಯೆ ಶೈ-
ಪಾತುರೆ ಶಾಂತೆ ಶಾಶ್ವತೆ ಶುಭಾಚರಣಾನ್ವಿತೆ ಮಾನ್ಯೆ ಸದ್ಗುಣ-
ವ್ರಾತೆ ವಿಳಾಸವಿಭ್ರಮಕಳಾನಿಧಿ ಮೇನೆಯೆನಿಪ್ಪಳುರ್ವಿಯೊಳ್ ೧೦೫

ಇಂತು ಪಿತೃಗಳ ಮನದೊಳ್ ಪುಟ್ಟಿದ ಸಕಲಗುಣಾಲಂಕೃತೆಯಪ್ಪ ಮೇನಾ-ದೇವಿ ನಿಜವಲ್ಲಭೆಯಾಗೆ ನಿಶ್ಚಿಂತತೆಯಿಂದಿರ್ವರುಂ ಪರ್ವಿದ ಹರ್ಷಕ್ಕಿಂಬುಗೊಟ್ಟು ನಲಿನಲಿದು ಕೆಲವು ದಿನಂ ಸಮಸುಖದೊಳಿರ್ದುಂ ಮೈನಾಕನೆಂಬ ಕುಮಾರನಂ ಪಡೆದು ಸಕಳಸಾಮ್ರಾಜ್ಯಭರಿತದಿಗ್ವಳಯನಾಗಿ ಅಪ್ರಹಿತಪ್ರತಾಪಭೂಷನೆನಿಸಿಯೋಷಧಿ-ಪ್ರಸ್ಥಪುರಕ್ಕೆ ಮಲಯಜತಿಲಕದಂತೆ ವಿರಾಜಿಸುವರಮನೆಯ ಸಭಾನಿಳಯದೊಳ್ ಪ್ರಭಾವಳಯಮೆನಿಸಿದ ನವಕನಕಮಣಿಗಣಭಾಸುರನಿವಾಸಭದ್ರಾಸನಮಂ ದುಷ್ಟ-ವಿದ್ವಿಷವಿದ್ರಾವಣನೆನಿಪ್ಪ ಶೈಲರಾಜನವಷ್ಟಂಭಿಸಲೊಡಂ, ಸಿಂಹಾಸನದಿರ್ಕೆಲದೊಳ್ ನಿಂದ ವೀರಲಕ್ಷ್ಮಿವಿಜಯಲಕ್ಷ್ಮಿಯರ್ ಸಕಲಭೂಪಾಲರ ಸುಕೃತಬೀಜರಾಜಿಗಳಂ ಜಗದ್ವಿಜಯವಲ್ಲಭೈಕಪಟ್ಟಕ್ಕೆ ವೀರಸೇಸೆಯನಿಕ್ಕುವಂತೆ ಬಿಂಕದಿಂ ಕೊಂಕಿ ನಿಂದು ಕಂಕಣಝುಣಝುಣತ್ಕಾರಂ ಸಭೆಯ ಕಿವಿಗೆ ಸವಿಗಳಂ ಸಾಲಿಡೆ ಸೂಳಱಿದಿಕ್ಕುವ ಚಾಮರಗ್ರಾಹಿಣಿಯರೊಳಂ, ಮತ್ತಮಾಸ್ಥಾನಮೆಂಬ ನೀರ್ತಗೆದ ರತ್ನಾಕರದೊಳ-ಲ್ಲಲ್ಲಿ ತರತರಂಬಿಡಿದು ಗುಡಿಸಿದ ರತ್ನರಾಸಿಗಳೆಂಬಂತೆ ಮಣಿನಿಕರಖಚಿತಮಕುಟ-ಕೋಟಿಗಳ್ ಮೆಱೆಯೆ ಬಹುರತ್ನಕದಂಬಕಾಂತಿ ಮಂಡಳಿಸಿ ಪರಿವೇಷಂಗೊಂಡ

೧. ಭೋಗಿ (ಅ). ೨. ಕೀರ್ತಿಯುಂ ( ಮ. ಬಿ. ಬ. ). ೩. ಮಿಲ್ಲ ದಿಟಂ ಗಿರಿಯೂಥನಾಥನೊಳ್ (ಬ). ೪. ಭೂರಮಣ ( ಶಾ. ಕ. ). ೫.೫ ಮತ್ತಮಾಸ್ಥಾನಮೆಂತಿರ್ದುದೆಂದೊಡೆ ( ದಾ. ಕೊ. ).

ರವಿಮಂಡಲದ ಹಿಂಡುಗಳಂತೆ ತೆಕ್ಕನೆ ತೀವಿ ಕಿಕ್ಕಿಱಿಗಿಱಿದು ಕುಳ್ಳಿರ್ದ ಲಾಳ ಗೌಳ ಚೋಳ ಕೇರಳ ಪಾಂಡ್ಯ ಪಲ್ಲವ ಮಗಧ ಮಾಳವ ವಂಗ ಕಳಿಂಗ ಬಂಗಾಳ ತೆಲುಂಗ ಗುರ್ಜರ ಹಮ್ಮೀರ ನೇಪಾಳರ್ ಮೊದಲಾದ ರಾಜಪುತ್ರರ ಪಙ್ಕ್ತಿಗಳೊಳಂ, ಮತ್ತಮಾ ಶೈಳಪತಿಗೆ ನೆನೆವ ಮನಂ ನುಡಿವ ನಾಲಗೆ ನೋಡುವ ಕಣ್ ಕುಡುವ ಕೆಯ್ ಪಿಡಿವ ಕೆಯ್ದುಗಳೆನಿಸಿ ಸುರಗುರುವಿನ ಬುದ್ಧಿಯೆಲ್ಲಂ ದೇವಲೋಕವಿಲಸಿತ-ಮೆಂದೇಳಿಸಿ ದೈತ್ಯಗುರುವಿನ ಮಂತ್ರಮನಧೋಭುವನವಿಳಸಿತಮೆಂದಧಃಕರಿಸಿ ನಿಜ-ಮಂತ್ರಶಕ್ತಿಯಿಂ ಸರ್ವೋರ್ವೀಧರನಿಕಾಯಮಂ ಕಾಲ್ಗೆಱಗಿಸಿಕೊಳ್ವ ಮಂತ್ರಿಗಳ ಮಂತಣದೊಳಂ, ಮತ್ತಮೊತ್ತರದಿನೆತ್ತಿ ನಡೆವೆಡೆಯೊಳರಿರಾಯರ ಗುಹೆಗಹ್ವರಂ ಬೆಟ್ಟಗಟ್ಟಬಿದಿರ್ಜೆತ್ತದಿಂದೆತ್ತಲುಂ ಮುತ್ತಲರಿದೆನಿಸಿದರಿಬಿರುದಿನ ಗಿರಿದುರ್ಗಂಗಳಂ ವಜ್ರಧರನಂತಡಿಸಿ ಘುಡುಘುಡುಸಿ ಪುಡಿಗುಟ್ಟುವ, ಮತ್ತಂ ಸಕಲತರುನಿಕರದಿಂ-ಡಿದಿಡಿದುರ್ವಿ ಕೊರ್ವಿ ಪರ್ಬಿದ ಮರ್ಬಿಂದಗುರ್ವಿಸುತ್ತಪ್ರತಿಹತಮೆನಿಸಿ ದುಷ್ಪ್ರ-ವೇಶಮಾದ ವನದುರ್ಗಂಗಳಂ ದಾವಾನಳನಂತಟ್ಟಿ ಮುಟ್ಟಿ ಸುಟ್ಟುರಿಪುವ, ಮತ್ತ-ಮಲ್ಲದೆಯುಂ ನಾಲ್ಕುಂ ದೆಸೆಗಳೊತ್ತರದಿಂ ಸುತ್ತಿ ಮುತ್ತಿ ನಿಬಿಡತರನಿರ್ಘೋಷ-ಪ್ರಭೂಷಣಲೋಲಕಲ್ಲೋಲಮಾಲಾ ಸಂಘಟ್ಟನಸಮುದ್ಭೂತಸಲಿಲಪೂರ್ಣಮಾದ ಜಲದುರ್ಗಂಗಳಂ ಬಡಬಾನಳಂತೆ ನಾಡೆ ಪೀರ್ವ, ನಿಜಭುಜಪ್ರತಾಪಂ ರೂಪು-ಗೊಂಡಂತೆ ತಂಡತಂಡದೊಳ್ ಕುಳ್ಳಿರ್ದ ದಂಡನಾಥಯೂಥದೊಳಂ; ಮತ್ತಂ ನಿಜ ಮಂದಿರದ ರಸಿಕರ ಗಾಯಕರ ಗೋಷ್ಠಿಯೊಳ್ ಪುಟ್ಟಿದ ರಸಕಾವ್ಯಗಾನಮನುಱೆ ಕೇಳ್ದು ಸವಿವ, ಮುಖಮಂಡಲದ ಲಲಿತಲಾವಣ್ಯಂ ಕಮನೀಯಕಾಂತಿಯಂ ಕನ್ನಡಿಯೊಳ್ ಕಳ್ದು ನೋಳ್ಪ, ಸಖೀಜನಂ ಕಲಿಸಿದ ಸುಖಪ್ರತಿಕೂಲವಚನಮಂ ಮುಖದ ಮುನಿಸುಮಂ ಪ್ರಿಯದರ್ಶನದಿಂ ಮುನ್ನಮೆ ಮಱೆದು ನಲ್ಲನೊಳ್ ಸಲ್ಲೀಲೆಯಿಂ ನೆರೆವ, ಕೇಳೀವನದ ಬಿನದಕ್ಕೆ ಇನಿಯಂ ಪೋದನಿತು ಬೇಗಮಂ ಸೈರಿಸ-ಲಾಱದೆ ಪರಿತಂದು ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿನಿಮಿರೆ ಸುರತಸಮಯದೊಳಿನಿಯನಾಡಿದ ಸವಿನುಡಿಗಳನುಸಿರ್ದುಸಿರ್ದು ಸವಿ-ಸವಿದಾಲಿಸಿ ಪುಳಕಿಸುತುಂ ಕೆಲಬಲನಂ ನೋಡಿ ಭಿತ್ತಿಯ ಚಿತ್ರಂ ಕಾಣ್ಬುಗೆಂದು

೧. ದಿಶಿ ( ಕಾ. ಯು. ). ೨–೨. ಸಂಘಟಿತ ಲಲಿತ ( ಗೋ ). ೩. ಪೋದನಿತುಬೇಗಮಂ ಧರಿಯಿಸ ಲಾಱದೆ ( ಮ. ಬ. ).

ನಾಣ್ಚಿ ನಿಲುತ್ತೆ [1]ತಡೆದ ನಲ್ಲನಂ ಕಣ್ಮುಚ್ಚಿ ನೆನೆದು ಮನದ ಕಣ್ಣೊಳ್ ಸನ್ನೆಗೆಯ್ದು ಬುದ್ಧಿಯಿಂ ಬರಿಸಿಯಹಂಕಾರದಿಂ ಪಿಡಿದು ಚಿತ್ತದೊಳ್ ನೆರೆದು ಭಾವರತಿ ಬಲಿದು ಬಂದಂತೆ ಬಗೆದು ಕಣ್ದೆಱೆದು ಕಾಣದೆ ಬಯಲನಪ್ಪಿದ ತೋಳ್ ಬಂಜೆಯಾಗೆ ಬಾಡಿದ ಲತೆಯಂತೆ ಕುಂದಿಕುಂದುವ ಪೊಳ್ತು ಮಱೆಯಿಲ್ಲದೆ ಪೊಸಂತಿಲಂ ಪೊಱ-ಮಡಲಱಿಯದೋಲಗಕ್ಕೆ ಪೋಪಲ್ಲಿ ದಾದಿಯ ಸೆರಗಂ ಪಿಡಿದು ನಡೆವಲ್ಲಿ ರಾಜವೀಥಿ-ಯೊಳ್ ಸುೞಿವ ಜವ್ವನಿಗರಂ ಕಂಡು ಪೊಲಂಬುಗೆಟ್ಟ ಪುಲ್ಲೆಯಂತೆ ದೆಸೆದೆಸೆಗೆ ಬೆರ್ಚುವ, ಸುಡಿಸಿದ ವಿಟಂಗೆ ಮೌನಮನುತ್ತರಂಗುಡುವ, ಸಮದೃಷ್ಟಿಯಾಗೆ ಮಿಂಚು [2]ಪೆಳಂಚಿದಂತೆ ಕಣ್ಮುಚ್ಚುವ, ಎಸೆವ ಸಭೆಯೊಳ್ ನಸುಮುಸುಂಕು ನಾಡೆ ಮೆಱೆಯೆ ಮಱೆಗೊಂಡು ಕುಳ್ಳಿರ್ದಲ್ಲಿ ರಾಜಪುತ್ರರ್ ನೆಪದಿಂ ಸೋಂಕೆ ಭೀತಿಯಿಂ ಬೆಮರ್ವ, ಸಾತ್ವಿಕರಸಂ ಪುಟ್ಟೆ ಸನ್ನೆಯಱಿಯದ ಸರಸವಱಿಯದ ಜಾಣಱಿಯದ ಕೇಣವಱಿಯದ ನಿಲವು ನಿರ್ವಿಕಾರಸುಖಮನೀಯೆ ಕಾಮಸುಖಕ್ಕೆ ಕಣ್ ಬಂದಂತೆ ಸೌಕುಮಾರ್ಯಕ್ಕೆ ಸವಿಯೇಱಿದಂತೆ ಆಲಿಂಗನಕ್ಕೆ ಅವಯವಂ ಬಂದಂತೆ ಚೆಲ್ವಿಂಗೆ ಮೊಲೆಮೂಡಿದಂತಲ್ಲಲ್ಲಿ ಕುಳ್ಳಿರ್ದ ಬಚ್ಚಬಱಿಯಚ್ಚಸುಖದ ಪಚ್ಚಪಸಿಯ ಪೊಚ್ಚ-ಪೊಸಹರೆಯದ ಮುಗ್ಧಾಂಗನೆಯರೊಳಂ; ಮತ್ತಂ ನಿಳಯಾಂಗಣದೊಳ್ ಸುೞಿವ ವಿಟನಂ ನೋಟದೊಳೊಳಪುಗಿಸಿ ಕೂಟದೊಳ್ ಕೊಸಱಿ ಬೇಟದೊಳ್ ಬಳೆಯಿಸಿ ನೆರೆವ, ಪರಿಮಿತದ ನೋಡಾನೋಡಿಯನುಭವದೊಳ್ ವಲ್ಲಭನ ಮನಂ ಸಲ್ಲಟಿಸುವ ಕಾಲಮನಱಿದು ಕಡುಮುಳಿದ ಖಾತಿಮಿಕ್ಕು ಪ್ರಣಯಕಲಹಂ ಕೆಯ್ಗಣ್ಮೆ ಕಂಡಂಜಿ ಕಾಲ್ಗೆಱಗಿದ ಕಾಂತಂಗೆ ಕಾರುಣ್ಯಮಂ ನೀಡಿ ಕೂಡುವ [3]ಸುರತಚಂದ್ರೋದಯದೊಳ್ ಕಾಮಸುಖಾಬ್ಧಿಯುಕ್ಕೆ ಪರಿಯೆ ಗಾಢಾಲಿಂಗನಂ ತೆರಪುಗುಡದಿರೆ ಸರ್ವಾಂಗಮಂ ಪ್ರತ್ಯಂಗದೊಳ್ ಮೇಳಯಿಸಿ ಕುಸುಮಾಯುಧಸುಖತರಂಗಿಣಿಯ ಸುೞಿಯೊಳ್ ಮನಂ ಮುೞುಂಗಿರ್ದ ಸುಖಸಮಯದೊಳರಮನೆಯ ಸೂೞಾಯ್ತ್ರ ಸರನೆತ್ತಿ ಸಾಱುವ ದನಿಯಂ ಘೋಂಕನೆ ಕೇಳ್ದು ಮುಗಿಲ ದನಿಗೇಳ್ದ ಮರಾಳನಂತೆ ಮನಂ-ಗುಂದಿ ಕೂಟದ ಕೇಡಿಂಗೆ ನಾಡೆ ನೊಂದು ಮನದಪ್ಪು ಸಡಿಲದೆ ತನುವಿನಪ್ಪು ಸಡಿಲ್ದು ಸಂಗಸುಖಮಂ ಪಿಂಗಲಾಱದೆ ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ

೧. ನಿಲ್ವ. (ಕ). ೨. ಸುೞಿದಂತೆ (ಕ). ೩. ಸುಷೋಪ್ತಿಯೊಳ್ ( ಶಾ. ಕ. )

ಮಲ್ಲಳಿಗೊಂಡು ಮೆಲ್ಲನೆಳ್ದು ಮುಂದುಗೆಟ್ಟಂತಂತೆ ಸಿಂಗರಿಸಿ ಸಿಡಿಮಿಡಿಗೊಂಡು ನಡೆತರ್ಪಾಗಳ್ ಮುಡಿಯ ಭಾರಕ್ಕೆ ಕೊರಲ್ ಕೊಂಕೆ ನೆಲೆಮೊಲೆಯ ಬಿಣ್ಪಿಂಗೆ ಬಡನಡು ಬಳ್ಕೆ ನಿತಂಬಭಾರಕ್ಕೆ ಮೆಲ್ಲಡಿ ಮಲ್ಲಳಿಗೊಳುತ್ತಿರೆ ನೇವುರದ ನುಣ್ದನಿ ಗಾವಱಿಸುವ ವಿಟರ ನೋಟಮಂ ಜಡಿವಂತೆ ಪಾದಮುದ್ರಿಕೆ ಪಳಂಚೆ ಕಡೆಗಣ್ಗಳ ಕಾಂತಿಯೊಳೆಳಲ್ವ ನವಯವ್ವನಿಗರಂ ನಗುವಂತೆ ಸೂಕ್ತಿಯೊಡನೆ ಸೂಸುವ ಸುಲಿಪಲ್ಲ ಬೆಳಗು ಬೀದಿವರಿಯೆ ನಡೆತಂದೊಡ್ಡೋಲಗಮನೊಟ್ಟಯಿಸಿ ಪೊಕ್ಕು ಮಕುಟವರ್ಧನರಂ ಮರುಳ್ಗೊಳಿಸುತುಂ ಮಲೆದು ಕುಳ್ಳಿರ್ದ ಮಧ್ಯಮನಾಯಕಿಯರ ನಿಕರದೊಳಂ; ಮತ್ತಮನುರಾಗಮೇಱೆ ಮನಂದಂದು ಬಂದ ವಿಟರ್ಗುನ್ನತಾಸನಮನಿತ್ತು ಮನ್ನಿಸಿ ಮಣಿದು ಸಜ್ಜೆವನೆಗುಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ ರಾಗದಿಂ ವೇಳಯಿಸಿ ಮಂದೆವಾಳಂ ಮೆಯ್ಸಂದೊಂದೆರಳ್ಬಂಧದನುಭವದೊಳ್ ಮಂದಯಿಪ ಸುಖಮನಿತ್ತು ನೆತ್ತದೊಳ್ ಬಿತ್ತರಂಬಡೆದು ಚದುರಂಗದೊಳ್ ಚಾತುರ್ಯಮನಿತ್ತು ಓದಿನೊಳ್ ಮಾಧುರ್ಯಂಬಡೆದು ಪಾಡಿನೊಳ್ ಪರಿವಡೆದು ನುಡಿಯೊಳ್ ನಯಂಬಡೆದು ವೀಣೆಯೊಳ್ ಜಾಣಂ ಮೆಱೆದು ಉಪಚಾರದೊಳೊಯ್ಯಾರಂ ಬಡೆದು ಇಚ್ಛೆಯೊಳ್ ಕೆಚ್ಚುಗಟ್ಟಿ ಸಿಂಗರದೊಳ್ ಸೊಬಗುವೆತ್ತು ವಿಳಾಸದೊಳ್ ವಿವೇಕಂಬಡೆದು ನಡೆದು ಬಂದರಮನೆಯಂ ಪುಗುವಾಗಳ್ ಮುಖಮಂಡಲಂ ಚಂದ್ರಮಂಡಲಮನಿಳಿಕೆಗೆಯ್ಯೆ ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ ಗಡೆಗಣ್ಣ ಕಾಂತಿ ಕುಸುಮಾಸ್ತ್ರಮಂ ಕೆದಱೆ ಕರ್ಣಾಭರಣಂ ರವಿಕಿರಣಮನನುಕರಿಸೆ ಉಟ್ಟ ಬಳಿದು ಬೆಳ್ದಿಂಗಳಂ ಬೀಱೆ ಪಿಡಿದ ಲೀಲಾಬ್ಜಂ ನೂತನಂಬಡೆಯೆ ನೇವುರದ ದನಿ ನೆಲನನುಗ್ಗಡಿಸೆ ಕಂಕಣಝಣತ್ಕಾರರವಂ ಅರಸುಮಕ್ಕಳಂ ಜಡಿಯೆ ವಿಳಾಸದಿಂ ಪೊಕ್ಕು ಮೆಯ್ಯೊಳ್ ಪೂಸಿದ ಸಿರಿಗಂಧದ ಕಕ್ಷದೊಳಳವಟ್ಟ ಸಾದಿನ ಕಿವಿಯೊಳ್ ಮಗಮಗಿಪ ಮೃಗಮದದ ಮುಡಿದ ಕದಂಬಪ್ರಸೂನದ ಬೆರಕೆಗಂಪಿಂಗುರವಣಿಸಿ ಮುಸುಱೆ ಮೊರೆದು ಮಂಡಳಿಸಿ ಮಾಳಿಚಳನದೊಳೇಳುತೆಱಗುವ ಮಧುಕರನಿಕರಂ ಸೌಭಾಗ್ಯಲಕ್ಷ್ಮಿಯರಿಕ್ಕುವ ನೀಲದ ಸೀಗುರಿಯಂತಿರೆ ತರದಿಂ ಕುಳ್ಳಿರ್ದ ವಿದಗ್ಧವನಿತಾಸಮೂಹದೊಳಂ; ಮತ್ತಂ ಸೊರ್ಕಿನ

೧. ದೊಂದೆರಡು ಚೆಂದದನುಭವದೊಳ್ (ಕಾ. ಬೆ. ಗೊ. ಗ.). ೨. ಚಾತುರ್ಯಂಗೊಟ್ಟು (ಕಾ. ಯು. ಬೆ.) ೩. ಸೌರಭ್ಯ (ಕಾ. ಕ. ಬೆ. ಯು.).

ಸೊವಡಿಂಗೆಱಗಿ ತುಱುಗಿದ ಪರಮೆಗಳ್ ಕರಿಮುರಿವೋಗಿ ಧರೆಯ ಮೇಲುದಿರಲಗ್ರಪಲ್ಲವದಿಂ [೧]ಬೀಸಿಕೊಳ್ವ ನೆಗೆದ[೧] ತುಂತುರ್ವನಿಗಳಂ ಮುಗಿಲ ಮೆಯ್ ಪುಗಳೇೞ ಪುಷ್ಕರದಿಂ ಫೂತ್ಕರಿಸುವ ಒಳಗುರ್ಕಿ ತೆರೆಮುಸಗುವ ಮದಸಮುದ್ರದೊಡನೆ ಕ್ರೋಧವಡಬಾನಳನಂ ಬೆರಸಿ ಸುರಿದಪ್ಪುದೆಂಬಂತೆ ನೆಗೆದ ಪೊಗೆವೆರಸಿ ಕೀಳ್ಮದಂಬಿಡುವ ಕಣ್ಗಂ ಕೋಡ ಮೊನೆಗನೇಕಕಾಲದೊಳ್ ಬಂದ ರೂಪಂ ಪ್ರತಿಮಾನದೊಳೊಟ್ಟಿಕೊಳ್ವ ಕಟ್ಟಣಕದ ದುಷ್ಟಗಜಮನಗ್ರಪಲ್ಲವಮಂ ಪಿಡಿದೇಱಿ ಭಂಗಿಸುತ್ತುಂ[೨]ಗುಟಕ್ಕೆಳ್ಕಾಡಿ ಬಿದುವನಪ್ಪಳಿಸಿ ಚಪ್ಪರಿಸುತ್ತಬ್ಬರಿಸುವ ಕೊರ್ಬುನುಡಿಯೆ ಕೂರಂಕುಸಮಾಗೆ ತೋಱಿ ತೊಟ್ಟು ಕೀಱಿ ಬಿಟ್ಟೆಕ್ಕುವ ಬಲ್ಪಿನ ಕಟ್ಟುಬ್ಬಟೆಯ ಬಿರುದಿನ ಹಾಹೆ ಕಾಲೊಳೊಳಲೆ ಕಡುಪಿಂ ಬಂದು ಪುರುಷಸಿಂಹಂಗಳಂತೆ ತರದಿಂ ಕುಳ್ಳಿರ್ದಗಜಾರೋಹಕರ ಗೊಂದಣದೊಳಂ; ಮತ್ತಂ ಮಂದುರದೊಳ್ ನಟ್ಟ ಕೆಚ್ಚಿನ ಮುಂಡಿಗೆ ಮುಱಿಯೆ ಪಾಳಾಸಂ ಪಱಿಯೆ ಪೊಱಮಟ್ಟು ನೆರವಿಯನುರವಣಿಸಿ ಪಾಯ್ದು ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ ನಿಕ್ಕೆಂದು ತರ್ಗಿ ನುರ್ಗಿ ಕರ್ಚಿಕೊಡಹುವ ನಚ್ಚಿನಗೋವಂ ದನಿದೋಱಿ ಕತ್ತರಿಮೊನೆಗೊಂಡ ಕಿವಿಯಿಂ ಕೆಕ್ಕಳಿಸುವ ದಿಟ್ಟಿಯಿಂ ಕಂಗನೆ ಕನಲ್ದು ಮುಂಗಾಲಿಂ ನೆಲನಂ ಪೊಯ್ದುಳ್ದು ಪರಿದೆಯ್ದುವ ಮುಂದೆ ಕಚ್ಚುವ ಹಿಂದೆ ಮೆಟ್ಟುವ ಕೆಲಕೆ ಚಿಮ್ಮುವ ದುಂಡಿಸಿ ನೆಗೆವ ಮಂಡಿಸಿ ನಿಲ್ವ ಮುರಿದಪ್ಪರಿಸುವ ತರಹರಿಸಿ ಪೊಣ್ಮುವ ಪೊಱಕಾಲೊಳ್ ನಡೆವ [೩]ಸುಕಳಾಶ್ವಮಂ ಜೇಗದಿಂ ಬೆಂಗೆವಾಯ್ದು ರಾಘೆಯೊಳಾಂಕಿ ವಾಘೆಯೊಳ್ ನಿಲಿಸಿ ಕೆಲಬಲಕ್ಕಿಕ್ಕಿ ಸರಸಬೀದಿಯೊಳೇಱಿ ತೋಱಿ ನಳನಂ ದತ್ತಿಳನನಿಳಿಕೆಗೆಯ್ವ ಬಿರುದಿನ ಬಿಂಕದಂಕಮಾಲೆ ಕೆಲಬಲದೊಳಂಕುರಿಸುತ್ತುಮಿರೆ ನಡೆತಂದು ಸಮುಚಿತಾಸನದೊಳ್ ಕ್ರಮದಿಂ ಕುಳ್ಳಿರ್ದ ಪಟ್ಟಸಹಣಿಯರ ಪರಿವಿಡಿಯೊಳಂ ಮತ್ತಂ ಮಲೆತು ನಿಂದು ಅಕ್ಕಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿ ಕೆಯ್ದೋಡಿಸಿದ ಮಲ್ಲನನುರ್ಬುತ್ತೊಯ್ಯನೊಳಪೊಕ್ಕು ಮಿಕ್ಕು ಪರಿದಿಕ್ಕಿ ಮುರಿವ ಅಡುಪಾಯದಳವಿಂಗೆ ಕಡಂಗುವ ಮಲ್ಲನನಡಸಿ ತಿವಿದು ಕಡುಪಿಂ ಕೆಡೆಪಿ ಕೊಪ್ಪರದೊಳ್ ಕುಮ್ಮಿ ಮುಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕೆಯದಾಸೆಗೆ ಪೊಕ್ಕ

೧–೧. ಬೀಸಿಕೊಳ್ವನ್ನೆಗಂ ನೆನೆವ (ದಾ.). ೨. ಗುಟಮನಲ್ಲಾಡಿ ( ಯ. ದಾ. ); ಗುಟಮೊಳ್ ಕೀಳ್ಕಾಡಿ( ಅ ). ೩. ವಿಕಳಾಶ್ವಮಂ (ಅ).

ಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಛಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ ನೂಂಕೆ ಪೋಗದೆ ನಿಂದ ಸೆಳೆಹನಂ ಸೆಳೆದು ಕೆಡೆಪಿ ಪಿಡಿದೆತ್ತಿಯೊತ್ತಿ ಕುಸುಬಿ ಕುಸುಕಿಱಿದು ಪೊಸೆದು ಪೂಳ್ವ ಸಾಹಸಿತನಕೆ ಬೆರಸಿದ ಮಲ್ಲನನೊರಸಿ ಬಿಡುವಲವಣಿ ಸಾರದೊಳ್ ನುಣ್ಚುವ ಮಲ್ಲನನೌಂಕಿ ಪಿಡಿದು ಸುತ್ತಿ ಮುತ್ತಿ ಸೆಳೆದಿಕ್ಕಿ ಸೀಸಕದೊಳ್ ಪೊಕ್ಕು ಭುಜದೊಳಣೆದುರದೊಳ್ ತೀದು ಉತ್ತಾನಕದೊಳ್ ನಿಂದು ಸಱಾಯರ್ ಝುಣಝುಣರೆನೆ ಬಳಸಿ ಭಂಜಿಸುವ ಐರಾವತಂ ಮಲ್ಲವೇಷದೊಳಿದಿರಾದೊಡಂ ತೋರಹತ್ತದೊಳಂ ತಿವಿದು ತಿರುಪುವ ಸಂಚಳಿಸುವ ಮುಂಚಿ ಮೇಳವಿಸಿ ಚೊಕ್ಕೆಯದನುಮಾನದೊಳ್ ಡೊಕ್ಕರಿಸಿ ಪಿಡಿವರಿಬಿರುದಿನ ಕಲ್ಲ ಮಾನಸರಂತಿರ್ಪ ಮಲ್ಲರ ನೆರವಿಗಳೊಳಂ; ಮತ್ತಂ ಕಳನೇಱಿದಂಕಮಂ [೧]ಗೆಳೆಯೊಡ್ಡ[೧]ದ ಮುನ್ನಂ ಕುತ್ತಿ ಕೆಡೆಪುವ ತಳ್ತು ಗಂಟಿಕ್ಕಿ ಟೆಂಟಣಿಸುವಂಕಮಂ ಸೆಳೆದು ಕೆಡೆಪುವ ಮುಳಿದು ಮೆಟ್ಟುವ ಸುಳಿದು ಸುತ್ತಿ ಬಳಸಿ ಮೊನೆದೋಱುವ ಬಿರುದಿನಂಕಮನುರವಣಿಸಿ ಪತ್ತಿ ಪೊರಳ್ಚಿಕೊಳ್ವ ಬಿನ್ನಣಂದೋರ್ಪ ಗನ್ನದಂಕಮಂ ಬಿಡಿಸಿ ಬೆಂಬತ್ತಿ ಕುತ್ತಿ [೨]ಸುರುಳ್ಚುವುಬ್ಬಟೆಯ ಬಿರುದಿನುಪ್ಪರವಟ್ಟದುಭಯ[೩]ಸತ್ತಿಗೆಯ ಪಗಲ ಕೆಯ್ದಾವಿಗೆಯ ಕಾಲ ಹಾಹೆಯ ಮೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತಣದೊಳಂ; ಮತ್ತಂ ವಕ್ರೋಕ್ತಿ ಸ್ವಭಾವೋಕ್ತಿ ಪಾಕಲಾಲಿತ್ಯ ಗುಂಪು ಇಂಪು ರೀತಿ ನೂತನಮಾಗೆ ಗದ್ಯಪದ್ಯಕಾವ್ಯಕಳಾಪ್ರೌಢಿ ರೂಢಿವಡೆಯ ಮೆಱೆದಿರ್ದ ಸರಸಕವಿಗಳ ಸಂದಣಿಯೊಳಂ; ಮತ್ತಮಾರಭಟಿಯೊಳ್ ದೆಖ್ಖಾಳಂ ಮಿಕ್ಕು ಸಾತ್ವತಿಯೊಳ್ ಪಜ್ಜಳಂಬೆತ್ತು ಭಾರತಿಯೊಳ್ ಕಾಂತಿ ಕೆಯ್ಗಣ್ಮೆ ಆಸ್ಥಾನಮಂ ಕೌತುಕರಸದೊಳ್ ಕರುವಿಟ್ಟಂತಿರಿಸುವ ಸಾಮರ್ಥ್ಯಮನೊಳಕೊಂಡು ಕುಳ್ಳಿರ್ಪ ಗಮಕಿಗಳ ತಂಡದೊಳಂ; ಮತ್ತಂ ಶಬ್ದ ಖಂಡನಮರ್ಥಖಂಡನಮನುಮಾನಖಂಡನಮೆಂಬ ತರ್ಕತಂತ್ರಕೋವಿದರಪ್ಪ ವಾದಿಗಳೊಳಂ; ಮತ್ತಂ ಮಧುರರಸಮೊಸರ್ವ ಪೊಸನುಡಿಗಳಂ ಕೇಳ್ವ ಸಭೆಗೆ ಕರ್ಣರಸಾಯನಮನೀವ ಮಾಧುರ್ಯಗುಣಂ ಮೆಯ್ಯಿಕ್ಕಿರ್ದ ವಾಗ್ಮಿಗಳೊಳಂ; ಮುತ್ತ ವಳಿವಕ್ರತೆಯನೀವ ವಹಣಿ ತರಂಗಿಸುವ ತಿರುಪು ಸುಳಿಗೊಳ್ವ ಹೆಂಪು [೪]ಇಂಪಂ ಕಱೆವ ಸುಧಾರಸಗಾನಂ ನಾನಾರಸದ

---

೧. ಗಳೆಯೋಸರಿಸದ (ಕಾ. ಕ.); ಗಳದೆಗೆದೊಡ್ಡದ (ಕೊ. ಬ.). ೨. ಉರುಳ್ಚು (ಕಾ. ಬೆ.). ೩. ಛತ್ರದ (ಕಾ. ಕ.). ೪. ಸೊಂಪು (ದಾ).

ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ; ಮತ್ತಂ ಸುಗತಿಗಳಂ ಸೂಸುವ ಮದ್ದಳಿಗರಿಂ ರೂಪುರೇಖೆ ರಸಂಬಡೆವ ನೃತ್ಯನಾಯಕಿರಿಂ ನವೀನಗತಿಯಂ ನೀಡುವ ನರ್ತಕರಿಂ ಭಾವರಸಮನೀವ ಚಿತ್ರಕರಿಂ ಇಂತು ಗಿರಿರಾಜನೊಡ್ಡೋಲಗಮನಂತ ಗಂಭೀರಮನತುಳಪ್ರತಾಪಮನುರತರಸೌಂದರ್ಯಮನೂರ್ಜಿತವಿಳಾಸಮನನುಪಮೌದಾರ್ಯವನೊಳಕೊಂಡಿರ್ದುದಾ ಪ್ರಸ್ತಾವದೊಳ್

ಚಂಪಕ.

ನುಡಿಯದಿರಂಧ್ರ ಕೆಯ್ಮುಗಿ ಕಳಿಂಗ ಕುಸುಂಗೆಲೆ ವಂಗ ಕೇರಳಂ-
ಗೆಡೆಗುಡು ಚೋಳ ಲಾಳ ಪೆಜಸಾರ್ ಪುಗದಿರ್ ಮಗಧೇಶ ಕಾಣ್ಮೆಯಂ
ಪಿಡಿದಿರು ಪಾಂಡ್ಯ ಬಿನ್ನವಿಸು ಮಾಳವ ಗೌಳನೆ ಪಿಂಗೆನುತ್ತಣಂ
ಜಡಿವರಿಳೇಶರಂ ಪಡಿಯಜರ್ ಗಿರಿರಾಜಸಭಾಂತರಾಳದೊಳ್ ೧೦೬

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೦೭

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯ-ಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕ-ರಂದಮಧುಕರಾಯಮಾಣಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ಗಿರಿರಾಜದೇಶಪುರಾಸ್ಥಾನವರ್ಣನಂ ದ್ವಿತೀಯಾಶ್ವಾಸಂ.

---

೧. ನರ್ತನನಾಯಕಿಯರಿಂ (ಕಾ. ಕ.).

# ತೃತೀಯಾಶ್ವಾಸಂ

## ಹೈಮವತೀ ಶೈಶವವರ್ಣನಂ

ಶ್ರೀಗೌರೀಕುಚಯುಗಳಪ-
ರಾಗಯುತಾನರ್ಘ್ಯರತ್ನವಿಳಸದ್ವಕ್ಷೋ-
ಭಾಗಂ ಸದ್ಭಕ್ತಿಯನೆಮ-
ಗೀಗೆ ದಯಾವಾರ್ಧಿ ಹಂಪೆಯ ವಿರೂಪಾಕ್ಷಂ ೧

ಸ್ರಗ್ಧರೆ.

ಅಂತಿರ್ಪಾಸ್ಥಾನದೊಳ್ [೧]ಭೂಭುಜನಿಕರಕಿರೀಟಪ್ರರತ್ನಪ್ರಭೂತಾ-
ನಂತಪ್ರದ್ಯೋತನೂತ್ನೋದಕಜನಿತಪದಾಂಭೋಜನುದ್ಯದ್ಧರಿತ್ರೀ-
ಕಾಂತಾವಕ್ಷಃಸ್ಥಲಾಲಿಂಗನ[೨]ಭರನಿಜದೋರ್ದಂಡಚಂಡಾಸಿಧಾರಾ
ಶ್ರಾಂತಂ ಪ್ರಾತರ್ಕ್ಯವೈರಿವ್ರಜ[೩]ಧರನೆನಿಸಿರ್ದಂ ಗಿರಿವ್ರಾತನಾಥಂ ೨

ಇರೆ [೪]ಮಾಧ್ಯಂದಿನಡಿಂಡಿಮ-
ವರನಾದಂ ಕೇಳಲಾಗೆ ಗಿರಿಕುಲರಾಜಂ
ತರದಿಂ ನೆರೆದೋಲಗಮಂ
ಪರೆಯಲ್ವೇಳ್ಕೆಂದು [೫]ಪೇಳ್ದ ಸಮನಂತರದೊಳ್ ೩

ಮಹಾಸ್ರಗ್ಧರೆ.

ಕ್ವಣಿತಾನೇಕಪ್ರಧಾನಾಭರಣ[೬]ಚರಮಹಾಮಾತ್ಯಸಾಮಂತಯೂಥಂ
ಗಣಿಕಾಸಂತಾನನಾನಾನವಮಣಿಗಣವಿಸ್ತೀರ್ಣಮಂಜೀರಮುದ್ರಾ-
ರಣಿತಂ ತದ್ವೇತ್ರಹಸ್ತಪ್ರತಿಮುಖಮುಖರಪ್ರೋದ್ಗತಾಭೀಳಘೋಷಂ
[೭]ಪ್ರಣತಾಸಕ್ತಾವನೀಶ [೮]ಪ್ರಕಟಮಕುಟಯುಕ್ತಂ ಸಭಾವಾಸವಕ್ತ್ರಂ ೪

---

೧. ಭೂಪತಿ (ಡ). ೨. ನಿಜಭರ (ಕ). ೩. ಹರ (ಯ). ೪. ಮಧ್ಯಂದಿನ (ಕಾ. ಬೆ. ಕ. ಬ. ಮ); ಮಧ್ಯಾಹ್ನದಿ (ಒ). ೫. ನುಡಿದ (ಕಾ. ಕ.). ೬. ಭರ (ಕಾ. ಬೆ. ಯ. ವಾ. ಅ. ಗೊ. ಹ. ಗ. ಸೆ.). ೭. ಪ್ರಣುತಾ (ಬ). ೮. ಪ್ರಕರ (ಯ. ಕೊ.).

ಅಂತಿರ್ದಾಸ್ಥಾನಂ ಪರೆಯೆ,

ಮಹಾಸ್ರಗ್ಧರೆ.

ಗಿರಿರಾಜಂ ಸಿಂಹಪೀಠೋತ್ಥಿತಕರಭರನಾಗುತ್ತುಮೇಳ್ತಂದು ಸೌಖ್ಯಾ-
ಕರರೂಪಂ ಮಜ್ಜನಂ ಮಾಡುತೆ ಭಸಿತಲಲಾಟಂ ಸರುದ್ರಾಕ್ಷಕಂಠಂ
ಸ್ಥಿರಚಿತ್ತಂ ಲಿಂಗಪೂಜಾವಿರಚನಪರಿತುಷ್ಟಂ ಪ್ರಸಾದಪ್ರಮೋದಂ
ಸ್ಮರಬಾಣವ್ರಾತಮಂ ಲೆಕ್ಕಿಸದತಿಸುಖದಿಂ ಮೇನೆಯುಂ ತಾನುಮಿರ್ದರ್ ೫

ಇಂತು ವಿಮಳಮನದಿಂ ಸಮಸುಖದೊಳಿರ್ಪಲ್ಲಿ,

ಭರದಿಂ ಬಹುಸಂತಾನಾ-
ತುರೆ ಸಾಧು ಸುಶೀಲೆ ಲೀಲೆ ಮಿಕ್ಕಾದರದಿಂ
ಗಿರಿರಾಜಂಗೆ ವಿರಾಜಿಸ
ವರಜೀವಸಮಾನೆ ಮೇನೆ ನಯದಿಂ ನುಡಿದಳ್ ೬

ಚಂಪಕ.

ಮೊಲೆಯುಣತಳ್ಕಜಂ ನಗುವ ನಿಂದಿರುತಪ್ಪುವ ಪೊಂಗಿ ಹಿಗ್ಗುತುಂ
ಸುಲಿವ ಮರಳ್ವ ಕಣ್ಗಳನಲರ್ಚುವ ಮುಚ್ಚುವ ನೋಡುತಾಡುತುಂ
ನಲಿನಲಿದುರ್ಬುತಂತೊಲೆಯುತಿಂತೊಲೆವಳ್ತಿಯ ಮುದ್ದಿನೊಪ್ಪದೊಳ್
ನೆಲಸಿದ ಪುತ್ರಿಯಂ ಬಯಸುತಿರ್ದಪುದೆನ್ನ ಮನಂ ಮನಃಪ್ರಿಯಾ ೭

ಉಗ್ರತಪದಿಂದೆಯತುಳಸ-
ಮಗ್ರಿಯನಭವಂಗೆ ವಧುವೆನಿಪ್ಪಳನಾನ-
ನ್ಯಗ್ರದೆ ಪಡೆವೆಂ ಕುಧರಾ-
ಪ್ರಾಗ್ರನೆ ಕಳಿಪೆಂದು ಮೇನೆ ನುಡಿವವಸರದೊಳ್ ೮

---

೧. ಪೀಠಸ್ಥಿತ (ಶಾ. ಅ. ಜಾ). ೨. ವಿರಚಿತ (ಡ). ೩. ಮುದದಿಂ (ಯು); ಭರದಿಂ (ಕ). ೪. ವಿರಾಜಿತ (ಬ. ಮ.). ೫. ಪೊಂಗಿ ಹಿಗ್ಗುತುಂ (ಮ); ಹಿಂಗಿ ಪೊಂಗುತುಂ (ಬ). ೬. ನೋಡುತುಂ ಕರಂ (ಮ. ಓ). ೭. ವಂ (ಮ). ೮. ದಿಂದಲತು (ಯ).

ಗಿರಿರಾಜನೊಡಂಬಟ್ಟಾ-
ದರದಿಂದಂ ಪುಳಕಿಸುತ್ತೆ ಪುಟವೇಳುತ್ತುಂ
ಪರಿಚಾರಪಟುಗಳೆನಿಸುವ
ತರುಣಿಯರಂ ಕೂಡಿಕೊಟ್ಟು ಸಂತಸದಿಂದಂ ೯

ಮತ್ತೇಭ.

ವರಪುತ್ರೀಸ್ಥಿರಭಾವಕಾಮ್ಯವಿಲಸತ್‌ಸನ್ಮಾನ್ಯೆಯಂ ಯಾನೆಯಂ
ತರುಣೀಕುಂತಳಮಲ್ಲಿಕಾಮಧುಕರೀಸಂತಾನೆಯಂ ಜ್ಞಾನೆಯಂ
ಪರಮಾನಂದತಪೋಭರೋತ್ಥಿತಮನಃಪ್ರಾರ್ಥಿನೆಯಂ ಸ್ಥಾನೆಯಂ
ಗಿರಿರಾಜಂ ಕಳಿಪುತ್ತುಮಿರ್ದನತಿಯೋಗಧ್ಯಾನೆಯಂ ಮೇನೆಯಂ ೧೦

ಕಳಿಪೆ ನಡೆತಂದು ರಮ್ಯ-
ಸ್ಥಳದೊಳ್ ನಿಂದೇಕಪಾದದಿಂದಂ ಮೇನಾ-
ಲಳನೆ ಮಹಾದೇವಿಯ ನಿ-
ರ್ಮಳರೂಪಂ ಹೃದಯಕಮಲದೊಳ್ ತಳೆದಿರ್ದಳ್ ೧೧

ಮುಗಿದುವು ನಯನಸರೋಜಂ
ಮಿಗೆಯಲರ್ದುದು ಚಿತ್ತಕೈರವಂ ಮಿಕ್ಕೇಱು-
ತ್ತು ಗಭೀರತಪೋವಾರಧಿ
ಬಗೆಯೊಳಗಾ ಧ್ಯಾನಚಂದ್ರನುದಯಿಸಿವಾಗಳ್ ೧೨

ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱಯಹಂಕಾರದೊಳಂಕುರಿಸಿ ಬುದ್ಧಿಯೊಳ್ ಪಲ್ಲವಿಸಿ ಮನದೊಳ್ ನಿಮಿರ್ದು ನಿಷ್ಠೆಯೊಳ್ ಕುಡಿವರಿದು ಪರಿದು ಪರ್ವಿ ಪುರಹರನರಸಿಯ ಮೆಲ್ಲಡಿಗಳ್ಗೆ ನಿಲ್ಲದೆ ಥೀಂಕಿಡೆ ಭವಾನಿ ಭೋಂಕ-

---

೧. ಪುಳಕಿಸುತ್ತಲತಿ ಮುದದಿಂದಂ (ಯ). ೨. ಪರಿಚರ್ಯ ( ಬ. ಮ. ಯ. ಅ. ಗ. ಸ. ). ೩. ಭವ್ಯ (ಯ). ೪. ಸನ್ಮೇನೆಯಂ ಮಾನೆಯಂ (ದಾ); ಸನ್ಮಾನೆಯು ಮೇನೆಯಂ ( ಅ. ಸ. ) ೫. ಸಂಕುಳ (ಗೊ). ೬. ಮಾಲಿಕಾ (ಮ. ಯ. ಅ. ಗೊ). ೭. ಗಾನೆಯಂ (ಅ). ೮. ಭರಾರ್ಥಿತ (ಅ). ೯. ಪ್ರಾರ್ಥನೆ (ಮ). ೧೦. ಶರನಿಧಿ ( ಮ. ದಾ. ); ನೀರಧಿ (ಬ. ಯ.). ೧೧. ಸಿದಾಗಳ್ (ದಾ. ಸ).

ನಱುದು ಮೇನೆಯ ತಪಕ್ಕೆ ಮಿಗೆ ಮಚ್ಚಿ ಕರುಣಿಸಿ ಹರನಂ ಬೀಳ್ಕೊಂಡು ತಂದೆ ಮಾಡುವ ಯಾಗಮಂ ನೋಳ್ಪ ನೆವದಿಂ ಕೈಲಾಸಮಂ ಪೊಱಮಟ್ಟು ದಕ್ಷನಪುರಕ್ಕಭಿಮುಖಿಯಾಗಿ,

ತ್ರಿಣಯನ ವಿರಹಿತಯಾಗ-
ಕ್ಕಣಿಯರದಿಂ ಪೋಗಿ ಮುಂದೆ ನಿಲೆ ದಕ್ಷಂ ನಿ-
ರ್ಗುಣನಂ ನಿಂದಿಸೆ ದಾಕ್ಷಾ-
ಯಣಿ ಕೇಳದೆ ವಿಮುಳಯೋಗದಿಂ ನಡೆತಂದಳ್ ೧೩

ಸುರತರುವಿಂ ಬೀಜಂ ದಿ-
ವ್ಯರತ್ನದಿಂ ಕಾಂತಿ ಪೂರ್ಣಶಶಿಯಿಂ ಕಿರಣಂ
ವರ ಸುಧೆಯಿಂ ಮಧುರತೆ ಬಂ-
ಧುರಕುಸುಮದೆ ಕಂಪು ಬರ್ಪ ತೆಱದಿಂ ಬಂದಳ್ ೧೪

ಬಂದು ನಿಜತಪದ ಮೇನೆಯ-
ನಂದೀಕ್ಷಿಸಿ ಶಾಂತರವಿನಿಕಾಯಮರೀಚೀ-
ವೃಂದನಿಭಕಮಳವಿಮಳಾ-
ನಂದವಿಕಾಶಪ್ರಕಾಶನಿಧಿ ನಿಂದಿರ್ದಳ್ ೧೫

ಅಂತು ನಿಂದು,

ಉತ್ಕಟದ ತಪೋನಿಷ್ಠೆಗೆ
ಸತ್ಕರುಣಮನಾಂತು ನಿನ್ನ ಬಸಿಱೊಳ್ ಬರ್ಪೆಂ
ಸತ್ಕುಲಜೆಯೆನುತೆ ಮೇನೆಯ
ಹೃತ್ಕಮಲದ ಬೆಳಗಿನೊಳಗೆ ಬೆಳಗಾಗಿರ್ದಳ್ ‡೧೬

೧–೧. ನೋಡುವ ಭರದಿಂ (ಗೊ. ಕೊ). ೨. ನಿ|ರ್ಗುಣದಿಂ (ಕ). ೩–೩. ಸುರು|ಚಿರ ರತ್ನದೆ (ಅ). ೪. ನಡೆತಂದಳ್ (ಅ). ೫. ತ (ಕಾ. ಬೆ. ದಾ. ಗೊ.). ‡ ೧೬ ಪದ್ಯವು ೬. ಪ್ರತಿಯಲ್ಲಿಲ್ಲ.

ಇರೆ ಮೇನೆಯಱಿದು ಹರ್ಷದ
ಶರನಿಧಿಯೊಳ್ ಪೊಕ್ಕು ಲೀಲೆ ಮಿಕ್ಕೊರ್ಮೇಲಾಡು-
ತ್ತರಲುತ್ತೀ[1]ಸಾಡುತ್ತುಂ
ಪೊರೆಯೇಱುತೆ ಜಪದ ವಿಪುಳ ತಪಮಂ ಬಿಟ್ಟಳ್ ೧೭

ಮತ್ತೇಭ.

ನಡೆತಂದಳ್ ಗಿರಿರಾಜವಲ್ಲಭೆ ಭವಾನೀಪ್ರೇಮದಿಂ [2]ರಾಗದಿಂ
ಬಿಡದುದ್ಯತ್ಕಲಶಪ್ರಬದ್ಧಲಲನಾಸಂತಾನದಿಂ ಗಾನದಿಂ
ಕಡುಪಿಂ ಪೊಣ್ಮುವ ವಾದ್ಯವಿಪ್ರವದನಪ್ರೋನ್ನಾದದಿಂ ವೇದದಿಂ
ಗುಡಿಗಟ್ಟುತ್ತಿದಿರ್ಗೊಳ್ವ ಪೌರಜನತಾಸಂತೋಷದಿಂ ಘೋಷದಿಂ ೧೮

ಉತ್ಪಲ

ಬಂದಗರಾಜರಾಜಗೃಹಮಂ ಪುಗುತುಂ ಪರಮಪ್ರದೀಪೆ ಸಾ-
ನಂದೆ ಸರೋಜನೇತ್ರೆ ವರವಕ್ತ್ರೆ ಮನೋಹರೆ ಮಾನ್ಯೆ ಮೇನೆ ಸಾ-
ರ್ತಂದು ನಿಜೇಶನಂ ಪ್ರಿಯದೊಳ[3]ಪ್ಪಿ ಮನೋರಥಸಿದ್ಧಿಯಾದುದಂ
ನಿಂದುಸಿರ್ದಂತರಂಗಬಹಿರಂಗಸುಖಾನ್ವಿತೆಯಾಗುತೊಪ್ಪಿದಳ್ ೧೯

ಇಂತು ತನ್ನ ಬಸಿಱೊಳ್ ಭವಾನಿ ಬರ್ಪ ವರಮಂ ಪಡೆದು ಮೇನಾದೇವಿ ನಾನಾಸುಖದೊಳೊಪ್ಪಿರ್ದು,

ಮುಂದಾ ಸ್ತ್ರೀರತ್ನಮನೊಲ-
ವಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂ
ತೊಂದೆರಡು ದಿನದೊಳತ್ಯಾ-
ನಂದದೆ ಕಡುಜಾಣೆ ಮಾಣಿಕಂಗಂಡಿರ್ದಳ್ ೨೦

೧. ತ್ರಸೆ (ಅ). ೨. ಕಾಸುದಿಂ (ಕಾ. ಬೆ. ದಾ. ಅ. ಕ. ಗೊ. ಡ. ಸ.). ೩. ಸಂಖೋನ್ನತೆ (ದಾ. ಯು.).

ಆ ಸಮಯದೊಳ್,

ಎಸೆವ ಬಳಲ್ಕೆಗಮುಷ್ಣಮ-
ನುಸಿರ್ವುಸಿರನುರಾಗವೇೞುವಕ್ಷಿದ್ವಿತಯಂ
ಪೊಸಕಂಪನುಗುಳ್ವ ಕಕ್ಷಂ
ನಸುಕರಗುವ ತನು ಮನೋಹರಂ ಮಾನಿನಿಯಾ ೨೧

ಸೆಡೆವ ನಡೆ ತೊಡೆಯ ತಡೆಗಾಲ್
ನಡುವಿಂಗತಿಗಾಢದುಡಿಗೆ ಬಡತನು ಸೊಂಕಿಂ-
ಗೆಡೆಗುಡದ ಮನಂ ಮಾತಂ
ಮಡಗುವ ಪರಿ ಸೊಗಯಿಸಿತ್ತು ಪಂಕಜಮುಖಿಯೊಳ್ ೨೨

ಮಾನಿನಿಯೀ ತೆಱದಿಂ ಸಂ-
ದಾ ನಾಲ್ಕುಂ ದಿವಸಮಿರ್ದು ಬಳಿಯಿಂ ಶುದ್ಧ-
ಸ್ನಾನಾಂಗೀಕೃತವಿಮಳ
ಶ್ರೀನಿಧಿ ಮೇನಾಲತಾಂಗಿ ಕಣ್ಗೆಸೆದಿರ್ದಳ್ ೨೩

ಬೆಳಗಿದ ಮಣಿಮುಕುರದವೋಲ್
ಜಳದಂಗಳಗಲ್ದ ಚಂದ್ರಕಳೆವೋಲ್ ಪುಟವಿ-
ಟ್ಟಳವಟ್ಟ ಮಿಸುನಿವೋಲ್ ಮಂ-
ಗಳನಿರ್ಮಳರುಚಿರರೂಪೆಯೊಪ್ಪುತ್ತಿರ್ದಳ್ ೨೪

---

೧. ಕೊರಗುವ (ಬ. ಯ. ಬಿ. ಕೊ.). ೨. ಮೇನಕೆಯಾ (ಬ. ಯ. ಬಿ. ದಾ. ಅ. ಗೊ. ಗ. ಸೆ). ೩. ಜಡ (ಯ. ದಾ. ಸೆ.). ೪. ಮುಡು (ಕಾ). ೫. ನುಡಿ (ಬಿ. ಬ. ಗೊ. ಗ. ಸೆ.); ಮುಡಿ (ಅ). ೬. ಬಳಿಕಂ (ದಾ. ಅ. ಸೆ.). ೭. ಯೊಪ್ಪುತ್ತಿರ್ದಳ್ (ಬ. ದಾ. ಅ. ಬಿ. ಅ. ಗೊ. ಗ). ೮. ಜಳದಂಗಳನಗಲ್ದ (ಕಾ. ದಾ. ಬಿ. ಸೆ.). ೯. ಕಣ್ಗೆಸೆದಿರ್ದಳ್ (ಕಾ. ಕ. ಅ. ಗೊ. ಡ. ಗ. ಸೆ.).

ಮಹಾಸ್ರಗ್ಧರೆ.

ಸುಲಿಪಲ್ ಬಿಂಬಾಧರಂ ರಾಜಿಪ ನಯನಯುಗಂ ಚಂಪಕಾಮೋದಿತಂ ನಿ-
ರ್ಮಲವಕ್ತ್ರಂ ಶ್ರೀಲಲಾಮಂ ಸುರುಚಿರವರವಕ್ಷೋಜಯುಕ್ತಾಂಗರಾಗಂ
ವಿಲಸತ್ಕಕ್ಷಾಂತದೊಳ್ ಪೂಸಿದ ಮೃಗಮದಮುದ್ಯದ್ದುಕೂಲಂ ಪ್ರಸೂನೋ-
ಜ್ಜ್ವಲಧಮ್ಮಿಲ್ಲಂ ಸರಾಗಂ ಮೆಱೆಯೆ ನಿಜಪತಿಧ್ಯಾನದೊಳ್ ಮೇನೆಯಿರ್ದಳ್ ೨೫

ಇರೆ ಕುಸುಮಮಾಲೆಯಲ್ಲಿಗೆ
ವರಮಧುಕರನೆಯ್ದೆ ಬರ್ಪ ತೆಱದಿಂ ಬಂದಂ
ಗಿರಿರಾಜಂ ಸ್ಮರರಾಗಾ-
ತುರಭರಭರಿತಂ ರತಾರ್ಥಿ ಮೂರ್ತಿವಿಳಾಸಂ ೨೬

ಅಂತು ಬಂದು ಸಜ್ಜನಸ್ನೇಹದಿಂ ಸಜ್ಜೆವನೆಯಂ ಪೊಕ್ಕು ಹಂಸತೂಳತಳ್ಪದ ಮೇಲೆ ಮೇನೆಯುಂ ತಾನುಂ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿವರಿದು ನಿಮಿರೆ ಸುಖದ ಸೊಂಕು ವಿಕಾಸಮನೆಯ್ದೆ ಸಹಜಾಮೋದಂ ಸೊಗಸನೀಯೆ ನೀಡಾಗದೆ ಗಾಢಾಲಿಂಗನಕ್ಕಾತುರಿಸುವಲ್ಲಿ

ಲವಲವಿಸುವ ನೋಟಂ ಕೆ-
ತ್ತುವ ತೋಳ್ ಕಂಪಿಸುವ ಹಸ್ತಮೊಗೆವ ಬೆಮರ್ ಪೊ-
ಣ್ಮುವ ಪುಳಕಮುಣ್ಮುವಶ್ರುಗ-
ಳವತರಿಸುವ ಗದ್ಗದಂ ಮನೋಹರಮಾಗಳ್ ೨೭

ಚಂಪಕ.

ಬರೆತೆಗೆದಪ್ಪಿಯಪ್ಪಿ ಮುದದಿಂ ಮೊಗದೊಳ್ ಮೊಗಮಿಕ್ಕಿಯಿಕ್ಕಿ ಸು-
ಯ್ಯೆರಲೆಡೆಯಾಡೆ ಜಿಹ್ವೆ ನಲಿದಾಡೆ ಸುಖಂ ಸುಳಿದಾಡೆ ಲೀಲೆ ನೋ-
ಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ ಕಂಪನಂ ಕೊನ-
ರ್ತಿರೆ ಪುಳಕಂಗಳೆಳ್ದಿರೆ ಪರಸ್ಪರಮಾರ್ತದೊಳೊಲ್ದು ಕೂಡಿದರ್ ೨೮

೧. ನಾಸಿಕಂ ( ದಾ. ಶಾ. ಅ. ಕ. ಗ. ಸ. ). ೨-೨. ರಾಗಾ।ತುರತರಭರಿತಾಂತರಾರ್ತಿ (ಶಾ. ಯ.).
೩. ಪೊಕ್ಕಿಲಿಕ್ಕಿ ( ಬ. ಮ. ).

ಪ್ರಿಯದಿಂದೆ ಮನಂ ಮನದೊಳ್
ನಯನಂ ನಯನಂಗಳೊಳ್ ಮುಖಂ ಮುಖದೊಳಗಾ
ಸುಯಿ ಸುಯ್ಯೊಳ್ ಕೆಯ್ ಕೆಯ್ಯೊಳ್
ಮೆಯಿ ಮೆಯ್ಯೊಳ್ ಬೆರಸೆ ಬೆರಸಿದರ್ ದಂಪತಿಗಳ್ ೨೯

ಅರಲುತಿರೆ ನಯನಕುಮುದಂ
ಪೊರೆಯೇಱುತ್ತಿರೆ ತನುಪ್ರಭಾಕೌಮುದಿ ಕಾ-
ಮರಸಾಬ್ಧಿ ಮಿಕ್ಕು ಮೀಱು-
ತ್ತಿರೆ ನೆರೆದರ್ ಭರಿತಸುರತಚಂದ್ರೋದಯದೊಳ್ ೩೦

ಸುರತಸುಖಂ ತವಿಲಱಿಯದೆ
ಭರದಿಂದಮುರ್ದಪ್ಪಿದಪ್ಪು ಸಡಿಲದೆ ತಮ್ಮೊಳ್
ಬೆರಸಿದ ಸುಯ್ ಬಿರ್ಚದೆ ಜೇ-
ರ್ವರಿದ ಮನಂ ಜೇಱಿ ಪರಿಯದಿರೆ ನೆರೆದಿರ್ದರ್ ೩೧

ಇಂತು ಸಮಾಸರಾಗಭೋಗಭರಿತಪರಮಸುಖದಿಂ ಸಂತುಷ್ಟಪುಷ್ಟಹೃದಯರಾಗಿ,

ತಿಳಿದು ಸುರತಾಂತದೊಳ್ ಕ-
ಣ್ಗೊಳಿಸುವ ಗಿರಿಪತಿಯುಮೆಸೆವ ಮೇನಾಸತಿಯುಂ
ಕಳೆಯೋಡಿದಿಂದು ಬೆಳ್ದಿಂ-
ಗಳನಾಂತ ಚಕೋರಿಯೆಂಬಿನಂ ಮೆಱೆದಿರ್ದರ್ ೩೨

ಆ ಸಮಯದೊಳ್,

ಪದೆಪಿಂ ಮೇನೆಯ ಹೃತ್ಕಮ-
ಲದ ಬೆಳಗಿಳಿತಂದು ಮಿಕ್ಕ ಶಕ್ತಿಸುಖದ ಸಂ-
ಗದೊಳೊಂದಿ ಬಳೆಯುತಿರ್ದುದು
ಸದಮಳರೂಪಿಂ ಭವಾನಿಯುಜ್ವಳತೇಜಂ ೩೩

---

೧. ಬೆರೆದು (ಕಾ.). ೨. ಭರದೆ (ಕಾ). ೩. ಬೆರೆ ಪರಿಯದೆ ನೆರೆ ನೆರೆದಿರ್ದರ್ ( ಓ ); ಜೇಱಿ ಸೆಸೆಯದಿರೆ ನೆರೆದಿರ್ದರ್ ( ಬ. ಯ ). ೪. ಕಳೆಗೂಡಿ (ಕಾ. ಬೆ); ಕಳೆನೂಡಿ (ಅ). ೫. ಮಂರತಸುಖದ (ಯ); ಸುಖಶಕ್ತಿಯ (ಅ).

ಚಂಪಕ.

ತೊಳಪ ಸರೋಜಗರ್ಭದೊಳಗೊಪ್ಪುವ ಬಾಲಮರಾಳಪಿಂಡದಂ-
ತಳವಡೆ ಶಾರದಾಭ್ರದೊಳಗಿರ್ಪ ಲಸಚ್ಛಶಿಲೇಖೆಯಂತೆಯು-
ಜ್ವಳಿಸುವ ಬೀಜದೊಳ್ ಪೊಳೆವ ಪುಣ್ಯಸುಧಾಲತೆಯಂತೆ ನಾಡೆ ಕರ್ಣ್-
ಗೊಳಿಸಿತು ಪುಣ್ಯಗರ್ಭಮತಿಶೈವಸುಖೋದರದಲ್ಲಿ ಮೇನೆಯಾ ೩೪

ಇಂತೊಪ್ಪುತ್ತುಮಿರ್ದು,

ಒಂದೆರಡು ಮೂಱು ನಾಲ್ಕು-
ಯ್ದೆಂದಾಱೇಳೆಂಬ ಮಾಸಮಾಗಿರೆ ಗರ್ಭಂ
ಚೆಂದಂಬಡೆದೊಳಗೆಸೆದಾ-
ನಂದದೆ ಬಳೆಯಿತ್ತಗಣ್ಯಪುಣ್ಯೋದರದೊಳ್ ೩೫

ಅಱಿವಿನ ಕಣಿ ಮುಕ್ತಿಯ ಮಣಿ
ಹೆಱೆಸೂಡಿದನಚ್ಚಸೊಗದ ನೊಳೆ ಬೆಳೆಯುತ್ತುಂ
ತೆಱಪುಗೊಳುತ್ತಿರೆ ಮೇನೆಯ
ಹೊಱಗೊಗೆದುದು ಗರ್ಭಸೂಚನಾಸೌಂದರ್ಯಂ ೩೬

ಅದೆಂತೆಂದೊಡೆ,

ತಿವಳಿಯವಿಳತ್ತಮಾದುವು
ನವನಾಭಿ ನಿವಾರಿಸಿತ್ತು ಗುಣ್ಪಂ ಕುಚವಾಂ-
ತುವು ಕುಡಿಗರ್ಪಂ ನೋಟಂ
ತವೆ ತಳೆದುವು ನಸುಬಳಲ್ಕೆಯಂ ಮೇನಕೆಯಾ ೩೭

೧. ಕರ್ಣಿಕೆಯೊಳೊಪ್ಪುವ (ಬ. ಯು. ಅ). ೨. ಬೆಳೆವಪೂರ್ವ (ಅ). ೩. ಗರ್ಭಮೂರ್ಜಿತ-ವಿಶಾಲಸುಖೋದರದಲ್ಲಿ (ಬೆ. ಬ. ಸೆ. ಯು. ದಾ. ಅ. ಗೊ). ಪುಣ್ಯಗರ್ಭಮತಿಶೈವಸುಖೋದಯವಲ್ಲಿ (ಕಾ). ೪. ದಾಱೇಳ್ ಮಾಮಾಸಗೆ ತಳ್ತು ಗರ್ಭಂ (ದಾ). ೫. ಬೆಳೆ (ಒ). ೬. ಗೊಳುತ್ತುಂ (ಕಾ. ಡ. ಬೆ.). ೭. ತಿವಳಿಯುಂ ಪಿನದ್ಧ (ಕಾ). ೮. ತುಡಿ (ಕಾ). ೯. ನಾಯಕಿಯಾ (ಪ. ಯು.); ಮಾನಿನಿಯಾ (ಕ. ಡ. ಬ.).

ನಡೆ ನಾಡೆ ಮಾಂದ್ಯದೊಳ್ ಪುಗೆ
ಮ್ಮುಡಿ ಮೊಡೆ ಕವಲ್ತು ಕದಪು ಕಾಂತಿಯನುಗೆ ಮೆಲ್-
ನುಡಿ ನೀಡೆ ಮೃದುಮಧುರಮಂ
ನಡು ನೀಡುಂ ಪೊಂಗೆ ಮೇನೆಗೆಸೆದುದು ಗರ್ಭಂ ೩೮

ಮಿಗೆ ಬಾಸೆ ಬಣ್ಣವೇಱತು
ಸೊಗಯಿಸಿದುದು ಮೊಗರಸಂ ತುಳುಂಕಾಡುತೆ ಮೆಳ್-
ನಗೆ ಸೂಸಿತ್ತು ಬಳಲ್ಕೆಯ-
ನೊಗೆದುವು ನವನವಮನೋರಥಂ ಮೇನಕೆಯಾ ೩೯

ಇಂತು ತೀವಿದ ಗರ್ಭದಿಂ ಭಾವಭರಿತಪರಮಹರ್ಷಂ ನೆಲೆಗೊಂಡು ನಿಂದು ನಾನಾ ಸುಖದೊಳಿರ್ಪ ಮೇನಾದೇವಿಯಿರವನಂತಃಪುರದೊಳ್ ಕಳಾಪ್ರೌಢೆಯರಪ್ಪ ವಿಳಾಸಿನಿಯರ್ ಗಿರಿರಾಜಂಗೆ ತೋಱುತ್ತುಮಿರ್ದರದೆಂತೆಂದೊಡೆ,

ಚಂಪಕ.

ಮುಡಿಯ ಭರಕ್ಕುರೋಜದ ಭರಕ್ಕೆ ನಿತಂಬಭರಕ್ಕೆ ನಾಡೆ ನು-
ಲ್ಲಡಿಯಿಡಲೆತ್ತಲಾಜದಿವೆ ಮತ್ತಮದಲ್ಲದೆ ಪುಣ್ಯಗರ್ಭದಿಂ
ಕಡುಪಿರಿದಾದ ಭಾರದೊಳದೆಂತಡಿಯಿಟ್ಟಪಳೆಂತು ನಿಂದಪಳ್
ನುಡಿದಪಳೆಂತು ನೋಡುವಳದೆಂತು ಗಿರೀಶ್ವರ ನೋಡು ಮೇನೆಯಂ ೪೦

ಎಂದು ಬಿನ್ನವಿಸುತ್ತಿರೆ ಕೆಲವುಂ ದಿನದೊಳ್,

ಅದುದು ನವಮಾಸಂ ಪು-
ಣ್ಯೋದರದೊಳ್ ಪಕ್ವಸಮಯಮಲರ್ದುದು ಸುಪಥಂ
ವೇದಿಸಿದುದು ಸುಮುಹೂರ್ತಂ
ಕಾದಿರ್ದುವು ಭರದೊಳೆನುಗೆ ತಮಗೆನುತಾಗಳ್ ೪೧

---

೧. ಕೂಡೆ (ದಾ). ೨. ಪೊಸಪೊಸ (ದಾ. ಬಿ. ಕೊ.). ೩. ಮೇನಕೆಯೊಳ್ (ಗ). ೪. ಮೇನೆಯಾ ( ದಾ. ಬಿ. ).

ಆ ಸಮಯದೊಳ್,

ಚಂಪಕ

ಅಲರ್ದ ಸರೋಜದಿಂದಮೊಗೆತರ್ಪ ಲಸತ್ಕಳಹಂಸಿಯಂತೆ ನಿ-
ರ್ಮಲತರಮೇರುವಿಂದೆ ಪೊಱಪೊಣ್ಮುವ ತನ್ಮಣಿಮಾಲೆಯಂತೆ ನಿ-
ಶ್ಚಲಪುರುಹೂತದಿಙ್ಮುಖದಿನೇಳ್ತರುತಿರ್ಪ ಮೃಗಾಂಕಬಿಂಬದಂ-
ತೆಳವಡೆ ಗೌರಿ ಗರ್ಭದೊಳಗಿಂ ಬರುತೊಪ್ಪಿದಳಂದು ಮೇನೆಯಾ ೪೨

ಇಂದಿರೆ ಬಂದಿರೆ ಕೆಲದೊಳ್
ನಿಂದಿರೆಯನಸೂಯೆ ಸಪ್ತಮಾತೃಕೆಯರ್ ತಾ-
ವೊಂದಿರೆ ರೋಹಿಣಿ ತಣ್ಪಂ
ತಂದಿರೆ ಗಿರಿಜಾತೆಯೋತು ಪೊಱಮಡುತಿರ್ದಳ್ ೪೩

ತೆರೆಮಸಗೆ ಕಾಂತಿ ನಾಭೀ-
ಸರೋಜಮಲ್ಲಾಡೆ ಜೀವಹಂಸಿ ಬೆದಱೆ ಬಂ-
ಧುರಕುಚಚಕ್ರಂ ನಡುಗು-
ತ್ತಿರೆ ಮೇನೆಯ ಗರ್ಭಸರಸಿಯಂ ಪೊಱಮಟ್ಟಳ್ ೪೪

ರತಿ ನೆಲನುಗ್ಗಡಿಸೆಯರುಂ-
ಧತಿ ಕೆಯ್ಗುಡೆ ಸುಖಮನೆಯ್ದೆ ಸಾವಿತ್ರಿ ಸರ-
ಸ್ವತಿ ಪೊಗಳೆ ಶಚಿ ನಲಿಯೆ ಪಾ-
ರ್ವತಿ ಮೇನೆಯ ಗರ್ಭನಿಳಯಮಂ[1] ಪೊಱಮಟ್ಟಳ್ ೪೫

ಇಳೆಯೊಳ್ ಪಾರ್ವತಿಯುದಯಿಸೆ[2]
ಕಳೆಯೇಱಿದನಿಂದು ಜೊನ್ನಮಲರ್ದುದು ಕಾಮಂ
ತಳೆದಂ ನಿಜಭುಜಬಲಮಂ
ಪುಳಕಿತಮಾಯ್ತಿಂದುಧರನ ವರವಾಮಾಂಗಂ[3] ೪೬

---

೧. ದಿಂ (ಯ. ಕೊ.). ೨. ಜನಿಯಿಸೆ (ಕಾ. ಕ.). ೩. ನಿಜ (ಡ).

ಚಂಪಕ.

ಮದನನ ಕರ್ಪೂರವಿಲ್ಗೆ ಮದವೇಱೆ ವಸಂತನ ಸರ್ವಭಾಗ್ಯಸಂ-
ಪದದೆಳವೇಱೆ ಲೋಕನಯನೋತ್ಪಳರಾಜಿ ವಿಕಾಸವೇಱೆ ಪೆ-
ರ್ಚಿದವಿದ ಮೇನೆ ತತ್ಪತಿಗಳುತ್ಸವವಾರಿಧಿಯೇಱೆ ಗೌರಿ ತಾ-
ನುದಯಿಸಿದಳ್ ಸುಧಾಂಶುಕಳೆ ಪಶ್ಚಿಮಭಾಗದೆ ಪುಟ್ಟಿದಂದದಿಂ ೪೭

ಜಡೆಮುಡಿ ಇಂದು ಬಾಹುಬಳೆ ಭಾಳವಿಲೋಚನಮಕ್ಷಮಾಲೆಯೊ-
ಳ್ಪುಡೆ ನವಕಾಂತಿ ಹಸ್ತಕಟಕಂ ಮೆಱೆಯುತ್ತಿರೆ ಪುಣ್ಯದಂತೆ ಕಂ-
ಪಿಡಿದ ಸುರದ್ರುಮಪ್ರಸವದಂತೆ ಪರಾಪರಮುಕ್ತಿಯಂತೆ ಸಂ-
ಗಡಿಸಿದ ಕಾಮಧೇನುವಿನವೋಲ್ ಗಿರಿರಾಜತನೂಜೆಯೊಪ್ಪಿದಳ್ ೪೮

ಇಂತೊಪ್ಪುತ್ತುಮಿರ್ದು,

ಶಿವಲಿಂಗೇಕ್ಷಣಲೋಲುಪೆ
ಶಿವಪ್ರಸಾದಾತ್ತಚಿತ್ತೆ ಶಿವಭಕ್ತೆ ಶಿವೋ-
ತ್ಸವೆ ಶಿವಪುಣ್ಯಾಂಭೋನಿಧಿ
ಶಿವನಂ ನೆಱೆ ನಚ್ಚಿ ಮಚ್ಚಿ ಕಣ್ಮುಚ್ಚಿರ್ದಳ್ ೪೯

ಇರೆ ಮೇನಾಮಾನಿನಿಯುಂ
ಗಿರಿರಾಜನುಮುಱಿಯದಂಜಿ ಗುರುಶೈವಾಚಾ-
ರ್ಯರನೆಂದು ಕೇಳೆ ಶಿವಶಿವ
ಪರಮಶಿವಜ್ಞಾನದಿಂದಮವರಿಂತೆಂದರ್ ೫೦

೧. ಪಳ (ಅ. ಗೊ.). ೨. ವಿಾರೆ (ಕಾ. ಕ). ೩. ಪ್ರಸರ (ಯು). ೪. ಗಿರಿಜಾಪಥುವಾಗಳೊಪ್ಪಿ-
ದಳ್ (ಕ. ಡ.). ೫. ಪ್ರಸಾದಾದ್ರ್ರ (ಯು). ೬. ಶಕ್ತೆ (ಕಾ. ಕ). ೭. ನಂಜಿ ನಚ್ಚಿ (ದಾ. ಗೊ).
೮. ಇರುತಿರೆ ಮೇನಾಸತಿಯುಂ (ದಾ. ಕೊ); ಇರೆಯಿರೆ ಮೇನಾಸತಿಯುಂ (ಜಿ.). ೯. ನಲ್ಲೆ (ಯು);
ಕರೆದು (ಕಾ. ಕ.). ೧೦. ಮಱದನರೆಂದರ್ (ಅ).

ಚಂಪಕ

ಅನುನಯದಿಂದೆ ಮುನ್ನಮವನೀತಳದೊಳ್ ಮಿಗೆ ಬಾಣನೆಂಬವಂ
ಜನಿಯಿಸಿ ಕಣ್ಗಳಂ ತೆಱೆಯದಿರ್ದೊಡೆ ಲಿಂಗಮನಂದು ತೋಱೆ ಭೋಂ-
ಕನೆ ನಯನಂಗಳಂ ತೆಱೆದು ಕಂಡೊಲವಿಂ ಮೊಲೆಯುಂಡನಂತೆ ಸ-
ಜ್ಜನೆ ಗಿರಿಜಾತೆ ಕಣ್ದೆಱೆಯದಿರ್ಪುದು ತಪ್ಪದಿ[1]ದುತ್ತರೋತ್ತರಂ ೫೧

ಎನೆ ಗಿರಿರಾಜಂ ದೇವಾ-
ರ್ಚನಾನಿಕೇತನಕೆ ಬಂದು ಶಶಿರವಿಶಿಖಿಲೋ-
ಚನಶಿವಲಿಂಗಮನುತ್ಸವ-
ಜನಿತಮನಂ ತಂದು ಮುಂದೆ ನಿಂದೊಲವಿಂದಂ ೫೨

ಅನುಮ ಪಯೋವಾರ್ಧಿಗೆ ಚಂ-
ದ್ರಮನಂ ಪುಣ್ಯಕ್ಕೆ ಮುಕ್ತಿಯಂ ತೋರ್ಪಂತಾ
ವಿಮಳೆಗೆ ಗಿರಿಜೆಗೆ ಶಿವಲಿಂ-
ಗಮನಧಿಕಮನಃಪ್ರಮೋದದಿಂ ತೋಱುವುದುಂ ೫೩

[2]ತೋಱಲೊಡಂ ಕಣ್ದೆಱೆದಳ್
ಪೇಱಿದಳೆರಡುಂ ಕರಂಗಳಂ ನೊಸಲೊಳ್ ಸೊಂ-
ಪೇಱಿದಳಭವನೊಳಗೆ ಬೇ-
ರೂಱಿದಳಂಕುರಿಸಿ ಪಲ್ಲವಿಸಿ ಫಲವಾದಳ್ ೫೪

ಆಕೆಯ್ಯೊಳ್ ಮೊಲೆಯುಂಡಳ್
[3]ಸಾಕಾರೆ ಶಿವಪ್ರಸಾದನವನೀತಮುಮಂ
ಕೆಯ್ಕೊಂಡಳ್ [4]ಗಿರಿಜಾವಧು
ಲೋಕೈಕಾರಾಧ್ಯೆ ಮೇನೆಯೊಡನೊಪ್ಪಿರ್ದಳ್ ೫೫

---

೧. ದುತ್ತಮೋತ್ತಮಂ (ದಾ). ೨. ತೋಱಲ್ ಮುಸುಂಕ ತೆಱೆದಳ್ (ಕ). ೩. ಸಾಕಾರ (ಕಾ).
೪. ಗಿರಿಪತಿಸುತೆ ( ದಾ. ಸೆ. ಕೊ. ).

ಆ ಸಮಯದೊಳ್,

ಉತ್ಪಲ.

ಮೂಡಿದ ಶೀತದೀಧಿತಿಗೆ ಕಾಲಪಿತಂ ಪ್ರಸವೋತ್ಸವಂಗಳಂ
೧ಮಾಡುವ ಮಾಳ್ಕೆಯಿಂ೨ದಮರಭೂರುಹದಿಂ ನೆಗೆದಂಕುರಕ್ಕೆ ಕೊಂ-
ಡಾಡಿ ವಸಂತಕಂ ಜನನಕರ್ಮವನೊಪ್ಪಿರೆ ಮಾಡುವಂದದಿಂ
ಮಾಡಿದನಳ್ಕುಱಿಂದೆ ಗಿರಿರಾಜನಜಾತೆಗೆ ಜಾತಕರ್ಮಮಂ ೫೬

ಅಂತು ಮಾಡೆ,

ಬೆಳಗುವ ನಯನದ್ಯುತಿಯಿಂ
ಬೆಳಗುವ ಗಂಡಸ್ಥಳಂಗಳಿಂ ಬೆಳಗುವ ಕೋ-
ಮಳತನುರುಚಿಯಿಂದಂ ತೊಳ-
ತೊಳಗುತೆ ನಳನಳಿಸಿ ಪೊಳೆಯುತಂಬಿಕೆಯೆಸೆದಳ್ ೫೭

ಮಂಗಳಮುಖಿ ಮಾನಿನಿ ಶಿವ-
ಲಿಂಗದ ಸು೩ಖಲತೆ ಸಮಸ್ತಲಕ್ಷಣಯುತೆ ತಾ-
ನಂಗೆಯ್ಯ ಪದ್ಮದಿಂ ಚರ-
ಣಂಗಳ ಪದ್ಮಂಗಳಿಂದೆ ಗಿರಿಸುತೆಯೆಸೆದಳ್ ೫೮

ಆ ೪ಪ್ರಸ್ತಾವದೊಳ್,

೫ಜಯಜಯಜಯಜಯತು ಶುಭೋ೫-
೬ದಯೆ ವರನಿಧಿ ಮಾಯೆ ದೇವಿ೬ ಶರ್ವಾಣಿ ಶಿವ-
ಪ್ರಿಯೆ ಶಾಶ್ವತೆ ಶಾಂತೆ ಜಗ-
ತ್ರಯಹಿತೆ ಶರಣೆನುತುಮಿರ್ದುದಬಳಾನೀ೭ಕಂ ೫೯

೧. ಕೂಡುವ (ಮ.). ೨. ದೆ ಸುರ (ಕ. ಶಾ.). ೩. ನಿಜಸುಖ (ಸ). ೪. ಸಮಯದೊಳ್ (ಶಾ. ಕ.). ೫–೫. ಜಯಜಯಜಯತು ಶುಭೋದಯೆ (ಶಾ. ಬೆ. ಅ. ಸ. ಓ. ಯ. ಗೊ. ದಾ.). ೬–೬. ಜಯವರದೆಯೆ ಮಾಯೆ ದೇವಿ (ಓ); ಜಯತು ಮಹಾಮಾಯೆ ಜಯತು (ಶಾ. ಬೆ. ಸ. ಅ.). ೭. ನಿಕರಂ (ಓ).

ಎಂಬ ಪುಣ್ಯಕೀರ್ತಿಯಂ ತಳೆದಿರ್ಪ ಸಮಯದೊಳ್ ಸಕಳವಾದ್ಯಂಗಳ ಮಂಗಳಧ್ವನಿಗಳುಂ ಪಿಂಗದೆ ಸುರಿವ ಸುರಕುಜದ ಸುಮನೋವೃಷ್ಟಿಯುಂ ಪುಟ್ಟಿದು-ದದೆಂತೆಂದೊಡೆ:

ವರಶಂಖರವಂ ಕಹಳೆಗ-
ಳ ರವಂ ಡಿಂಡಿಮರವಂಗಳಾನಕದ ರವಂ
ಕರಡೆಗಳ ರವಂ ನಿಸ್ಸಾ-
ಳರವಂ ಭೇರೀರವಂ ಮೃದಂಗರವಂಗಳ್ ೬೦

ಎಳನನೆಗಳ ಮೆಲ್ಸರಿ ನನೆ-
ಗಳ ಬಲ್ಸರಿ ಮುಗುಳ ತಂದಲಾ ಮೊಗ್ಗೆಯ ಪೆ-
ರ್ಮಳೆಯಲರ್ಗಳ ಬಿಱುವಳೆ ಎಸ-
ಳ್ಗಳ ಸೋನೆ ಪರಾಗಪರಿಮಳದ ತುಂತುಱುಗಳ್ ೬೧

ಅಂತು ಪುಟ್ಟಿದ ವಾದ್ಯಧ್ವನಿಗಳುಮಂ ಪೂಮಳೆಗಳುಮಂ ಗಿರಿರಾಜಂ ಕಂಡು ಮನಂಗೊಂಡು,

ಚಂಪಕ

ಇಳೆಗತಿಶೀತಳಂ ಮಿಗೆ ಗಿರೀಶ್ವರನುತ್ಸವದಿಂದೆ ತುಪ್ಪದೋ-
ಕುಳಿ ನವದುಗ್ಧದೋಕುಳಿ ಹಿಮವ್ರಜದೋಕುಳಿ ಜೇನತುಪ್ಪದೋ-
ಕುಳಿ ದಧಿಯೋಕುಳಿ ಪ್ರಸವದೋಕುಳಿ ಕತ್ತುರಿಚಂದನಂಗಳೋ-
ಕುಳಿ ಪನಿನೀರ್ಗಳೋಕುಳಿಯನಾಡಿದನುಬ್ಬಿದನೊಕ್ಕಲಿಕ್ಕಿದಂ ೬೨

ಅಂತೋಕುಳಿಯನಾಡಿ ನವೀನಶೃಂಗಾರಮಂ ಮಾಡಿ

ಆದರದಿಂ ಗೋದಾನಂ
ಸ್ತ್ರೀದಾನಂ ವಸ್ತ್ರದಾನಮಿಭಕುಲದಾನಂ
ಭೂದಾನಂ ಧನದಾನಂ
ಶ್ರೀದಾನಂಗುಡುತುಮೊಪ್ಪಿದಂ ಗಿರಿರಾಜಂ ೬೩

೧. ತಂಡದಾ ( ಯು. ಓ. ಕೊ. ). ೨. ಕುಂಕುಮಪ್ರಸರ (ಅ).

ಗುಡಿಗಟ್ಟಿತು ನೆಱೆ ಪುರದೊಳ್
ಮುಡುಗಟ್ಟಿತ್ತಚಲನಾಥಸಂತೋಷರಸಂ
[೧]ಕುಡಿಯಿಟ್ಟುದು ಧೀಂಕಿಟ್ಟುದು
ಗಡಿಗೆಟ್ಟುದು ಪುಣ್ಯ[೧]ಕೀರ್ತಿಲತೆ ಧಾರಿಣಿಯೊಳ್ ೬೪

ಎಂಬ [೨]ಯಶಸ್ಸಿಂಗೆ ತಾವೆ ಭಾಜನರಾಗಿ ಗಿರಿರಾಜನುಂ ಮೇನಾದೇವಿಯುಂ ಪರಿಜನಮುಂ ಪುರಜನಮುಂ ಧರಾವಳಯಮುಂ ಪರಮಸುಖದಿಂದಿರ್ಪಲ್ಲಿ,

ಚಂಪಕ

ತೊಗಲದ ಪುಣ್ಯವಾರಿಧಿಗಗಣ್ಯಮರೀಚಿಗೆ ಲೀಲೆಯಿಂದೆ ಬ-
ದಿಳೆಯೊಳೆ ಪುಟ್ಟಿದಪ್ರತಿಮೆಗಾನತಲೋಕೆಗೆ ಶರ್ವನಾಮೆಗು-
ಜ್ಜ್ವಳಿಪ ನಿಜಕ್ಕೆ ನಾಮಕರಣಂ ಗಿರಿಜಾತೆಯೆನಿಪ್ಪುದಾಗೆ ತೊ-
ಟ್ಟಿಲೊಳಿಡುತಿರ್ದರೊಪ್ಪುವ ಸುವಾಸಿನಿಯರ್ ಮುದದುತ್ಸವಂಗಳಿಂ ೬೫

ದಿಟದಿಂ ಜಗಕ್ಕೆ ತನ್ನುಂ-
ಗುಟುಮೆ ತಾಯ್ದೊಟ್ಟಿಲಾದ ಗಿರಿಸುತೆಯನತಿ-
ಸ್ಫುಟಮಣಿಗಣಪ್ರಭಾಸಂ-
ಪುಟಮೆನಿಸುವ ರನ್ನದೊಟ್ಟಿಲೊಳಗಿರಿಸುತ್ತುಂ ೬೬

ರಾಗಂ ಮಿಗೆ ಸಪ್ತರ್ಷಿ-
ಸ್ತ್ರೀಗಣಮೊಲವಿಂದೆ ಲಳಿತೆ ಬಂಗಾಳಂ ಶ್ರೀ-
ರಾಗಂಗಳೊಗೆಯೆ ಪಾಡುತೆ
ತೂಗಿದರಖಿಳಪ್ರಪಂಚವಾಡಿಸ ಶಿಶುವಂ ೬೭

೧–೧. ಕುಡಿಯಿಟ್ಟುದು ಧೀಂಕಿಟ್ಟ। ತ್ತಡಿಯಿಟ್ಟತ್ತಾತ (ಕಾ); ಅಡಿಯಿಟ್ಟುಂ ಧೀಂಕಿಟ್ಟುದು। ಗಡಿಗೆಟ್ಟುದು ಪುಣ್ಯ ( ಯ. ಗೊ ). ಅಡಿಯಿಟ್ಟುದು ಧೀಂಕಿಟ್ಟುದು । ಗಡಿಗೆಟ್ಟುದು ಪುಣ್ಯ ( ಅ ). ೨. ಪುಣ್ಯಪರತೆಗೆ (ಕಾ. ಕ.); ಪುಣ್ಯಯಶಸ್ಸಿಂಗೆ ( ಗೊ. ಕೊ. ).

ಜೋ ಸಕಳತತ್ತ್ವಮಯೆ ಜೋ-
ಜೋ ಸತ್ತ್ವಾದಿಗುಣರಹಿತೆ ಜೋ ನಿರ್ಮಳೆ ಜೋ-
ಜೋ ಸದ್ಗುಣೆ ಜೋ ಶಾಶ್ವತೆ
ಜೋ ಸಂಪದೆ ಜೋ ವಿಶಾಲೆ ಜೋ ಶಿವೆ ಜೋಜೋ ೬೮

ಶಾರ್ದೂಲ.

ಜೋಜೋ ಶಂಕರನರ್ಧನಂ ಕವರ್ದುಕೊಳ್ವತ್ಯಂತರೂಪಾನ್ವಿತೇ
ಜೋಜೋ ಸರ್ವಜಗಚ್ಛಿಶುಪ್ರಕರಮಂ ರಕ್ಷಿಪ್ಪ ಮಾತಾಮಹೇ
ಜೋಜೋ ಶೈವಸಮುದ್ರವರ್ಧನಕರಪ್ರಖ್ಯಾತಚಂದ್ರಾನನೇ
ಜೋಜೋ ರಕ್ಷಿಸೆನುತ್ತೆ ತೂಗಿ ನಲಿದರ್ ಶರ್ವಾಣಿಯಂ ಜಾಣೆಯರ್ ೬೯

ಅಂತು ತೂಗುವ ಜೋಗುಳದ ರಾಗದೊಳಂ, ನೊಲೆಯೂಡುವ ಮೇನೆಯ ಮಗ್ಗುಲೊಳಂ, ಸಾಗಿಸುವ ಸಾವಿತ್ರಿಯ ಸೋಗಿಲೊಳಂ, ಎತ್ತುವನಸೂಯೆಯ ಹಸ್ತದೊಳಂ, ಅಪ್ಪುವರುಂಧತಿಯುರದೊಳಂ, ನೆಗೆಪುವ ಗಾಯತ್ರಿಯ ಸೊಗಸಿನೊಳಂ, ಮುಟ್ಟುವ ರೋಹಿಣಿಯ ತಣ್ಪಿನೊಳಂ, ಸೊಂಕುವ ಕಮಳೆಯ ಸಂಪದದೊಳಂ, ಮುದ್ದಾಡಿಸುವ ಸರಸ್ವತಿಯ ಮಧುರವಾಣಿಯೊಳಂ, ನೋಡುವ ಶಚಿಯ ಸಂತೋಷದೊಳಂ, ಪರಸುವ ಸಪ್ತಮಾತೃಕೆಯರ ಪರಕೆಯೊಳಂ, ಮಿಕ್ಕುನಲಿವಚಲಪತಿಯಕ್ಕರೊಳಂ, ಸಾಮರ್ಥ್ಯದ ಬಿತ್ತಿನಂತೆ, ಸೌಂದರ್ಯದಂಕುರದಂತೆ, ಸೌಕುಮಾರ್ಯದ ಪಲ್ಲವದಂತೆ, ಸಾಹಿತ್ಯದ ಕುಸುಮದಂತೆ, ಸತ್ಯದ ಫಲದಂತೆ, ಭೂಮಿಯ ಬಿಣ್ಪಿನಂತೆ, ಸಲಿಲದ ತಣ್ಪಿನಂತೆ, ಗಗನದ ಪೆಂಪಿನಂತೆ, ಪಯೋನಿಧಿಯ ಗುಣ್ಪಿನಂತೆ, ಪವಮಾನನುಸಿರಿನಂತೆ, ಪಾವಕನ ತೇಜದಂತೆ, ಚಂದ್ರನ ಬಲದಂತೆ, ದಿವಸೇಂದ್ರನ ಕಿರಣದಂತೆ, ಪರಮಾತ್ಮನ ಪರಿಣಾಮದಂತೆ, ಲೋಕದಾಲೋಕದಂತೆ, ಸಲ್ಲಕ್ಷಣದ ಲಾವಣ್ಯದಂತೆ, ಬೆಳ್ದಿಂಗಳ ಬಣ್ಣದಂತೆ, ವಸಂತನ

---

೧-೧. ಜೋ ಶಾಶ್ವತೆ ಸಂಪದೆ। ಜೋ ಶಿವೆ ಶರ್ವಾಣಿಯಾರ್ಯೆ ಮಂಗಳೆ (ದಾ); ಜೋ ಸೌಭಾಗ್ಯತೆ ಶಾಶ್ವತೆ। ಜೋ ಸಂಪದೆ ಜೋ ವಿಶಾಲೆ ಜೋ ಶಿವೆ (ಯ. ಗೊ.); ಜೋ ಶಾಶ್ವತೆ ಜೋಜೋ ತೇ। ಜೋಸಂಪದೆ ಜೋ ವಿಶಾಲೆ ಶಿವೆ ಜೋ (ಅ). ೨. ರಾಣಿ (ಬೆ. ಕೊ. ಸೆ. ಡ. ಗ. ಓ. ದಾ.). ೩. ವಾಕ್ಯದೊಳಂ (ಯ.). ೪. ಹೆಂಪಿನಂತೆ (ಯ).

ಪಶ್ಯದಂತೆ, ಮಲಯಾನಿಲನ ಮಹಿಮೆಯಂತೆ, ಮಕರಧ್ವಜನ ಮದದಂತೆ, ಕುಸುಮಬಾಣದ [೧]ಕುಶಲದಂತೆ, ಪುಣ್ಯದ ಜೀವದಂತೆ, ಶಿವಜ್ಞಾನದ ದೇಹದಂತೆ, ಸಾಲೋಕ್ಯದ ಸವಿಯಂತೆ, ಸಾಮೀಪ್ಯದ ಸೀಮೆಯಂತೆ, ಸಾರೂಪ್ಯದ ಸುಧೆಯಂತೆ, ಸಾಯುಜ್ಯದ ನಿಲವಿನಂತೆ, ಶಿವನ ಸುಖದಂತೆ, ಮುಕ್ತಿಯ ಮುಖದಂತೆ, ಕಾಂತಿಯ ಲತೆಯಂತೆ, ನಿರುಪಾಧಿಕ ಜ್ಯೋತಿಯಂತೆ, ಸಕಲಜಗನ್ಮಾತೆಯಪ್ಪ ಗಿರಿಜಾತೆ ಶೈಶವಲೀಲೆಯನೊಳಕೊಂಡು ತೊಳತೊಳಗಿ ಬೆಳಬೆಳಗಿ ನಳನಳಿಸಿ ಬಳೆಯುತಿರ್ದಳಂತುಮಲ್ಲದೆಯುಂ;

ಸರಸಿಜಕುಟ್ಮಳಮಲರ್ವಂ-
ತಿರೆ ಕರುಣಾನಿಳಯಮೃದುಕವಾಟಂದೆಗೆವಂ-
ತಿರೆ ನಗೆ ಮೊಗಮಂ ಸವಿವಂ-
ತಿರೆ ಗಿರಿಸುತೆ ಕಲ್ತಳಮರ್ದಿನಗೆಯಂ ನಗೆಯಂ ೭೦

ಘನರಜತಗಿರಿಯ ಸಿಂಹಾ-
ಸನದೊಳ್ ನಲಿದಿರ್ಪ ಪರಿಯನಭವನ ತೊಡೆಯೊಳ್
ಮನದೊಲವಿಂ ಕುಳ್ಳಿರ್ಪುದ-
ನನುಕರಿಸುವ ತೆಜದೊಳಗಜೆ ಕುಳ್ಳಿರೆ ಕಲ್ತಳ್ †೭೧

ತ್ರ್ಯಂಬಕನಂ ಬಲವರಲೆರ-
ಡೆಂಬೀ ಪದವೆಯ್ದವೆಂದು ನಾಲ್ಕುಂ ಕಾಲಿಂ-
ದಂ ಬಲವಂದಪಳೆಂಬಂ-
ತಂಬಿಕೆಯಂಬಳಿಕಿಯಾಡುವಳ್ ಶೈಶವದೊಳ್ ೭೨

೧. ಹೊಗರಿನಂತೆ (ಸ). † ೭೧ ನೆಯ ಪದ್ಯವಾದ ಮೇಲೆ ಡ. ಪ್ರತಿಯಲ್ಲಿ— ಅವನೀಸಿಂಹಾಸನ-ನೊಳ್। ತವೆ ಕುಳ್ಳಿರ್ಪಂತೆ ಶಿವನ ತೊಡೆಯೊಳ್ ಸುಖದಿಂ ॥ ದವೆ ಕುಳ್ಳಿರ್ಪಂತಾ ತ್ರೈ। ಶನದೊಳ್ ಗಿರಿಜಾತೆಯೋತು ಕುಳ್ಳಿರೆ ಕಲ್ತಳ್ ॥ ಎಂಬ ಪದ್ಯವಿದೆ.

ಬೇರ್ಪಡದೆ ಕೂಡೆ ತಾನೆಯ-
ದರ್ಪಖಿಳಕ್ಕೆಂಬ ನೈಜಮಂ ಮೆಱೆಯಿಸುತಂ-
ದಾರ್ಪಿಂ ಭಿತ್ತಿಗಳಂ ನೆ-
ಮ್ಮಿರ್ಪಳ್ ನಿಂದಗಜೆ ಬಾಲ್ಯಮಂ ನಟಯಿಸುತುಂ ೭೩

ಅಡಿಗಳ ಕೋಮಲತೆಗೆ ಧರೆ
ಬಿಡಲಾಱವೆ ಪೊಡಮುಡುತ್ತೆ ಬಿಡದಿರೆ ನಯದಿಂ
ಬಿಡಿಸಿಕೊಳುತ್ತುಂ ಮೆಲ್ಲನೆ
ನಡೆದಪಳೆನೆ ಮೆಱೆದುವಗಜೆಯೊಳ್ ದಟ್ಟಡಿಗಳ್ ೭೪

ಒಡನೆಯ ಸತಿಯರ್ ನೆಲನು-
ಗ್ಗಡಿಸೆ ಧರಾಕಾಂತೆ ಮೆಲ್ಲಡಿಗೆ ಮೃದುವಾಗು-
ತ್ತಿಡೆಗುಡುತುಂ ಪುಳಕಿಸುತಿರೆ
ನಡೆಗಲ್ತಳ್ ಗಿಂಜೆ ಪೆರ್ಮನರಮನೆಯತ್ತಲ್ ೭೫

ರಸನೆಯ ಸುಧೆಯಂ ಮಿಗೆ ಸವಿ-
ದು ಸವಿದು ಮಗ್ನತೆಯನೆಯ್ದಿ ಮಧುರಾಕ್ಷರನು-
ಬ್ಬಸದಿಂ ಪೊರಳುತ್ತುರುಳು-
ತ್ತೊಸರ್ದಪುದೆನೆ ಗಿಂಜೆಯೊಳ್ ತೊದಳ್ನುಡಿಯೆಸೆಗುಂ ೭೬

ಮನದೊಳಗೆ ಪುಟ್ಟಿ ಕಂಠದೊ-
ಳನುನಯದಿಂ ಬಳೆದು ಜಿಹ್ವೆಯೊಳ್ ದಟ್ಟಡಿಯಿ-
ಟ್ಟಿನಸುಂ ಸುಳಿಗೊಳುತುಂ ಗಿರಿ-
ತನಯಳ ಮುಖದೊಳ್ ತೊದಳ್ನುಡಿಗಳೆಸೆದಿರ್ದುವ್ ೭೭

ಅಂತುಮಲ್ಲದೆಯುಂ,

---

೧. ಪಿ ಬಂ (ಅ). ೨. ಒಡನೆ ರಮಾಸತಿ (ಅ). ೩. ಗಿರಿಶ (ಬಿ. ಮ. ಬ. ಕೊ, ಸ, ದಾ, ಯ.)
೪. ಸಂಚಾಕ್ಷರನು (ಅ); ಸಂಚಾಕ್ಷರಿಯು (ಗೊ.) ೫. ತನಯಾ (ಅ).

ಮಂಗಳಮುಖಿಯರ್ ಸಖಿಯರ್
ಸಂಗಡದಿಂ ಕೊಂಡುಕೊನೆಯುತಾಡಿಸುವೆಡೆಯೊಳ್
ಪಿಂಗದೆ ಭುಜಲತೆ ಶಿವನಾ-
ಲಿಂಗನಮಂ ಪೇಳೆ ಬಾಲೆ ತೋಳಾಡಿಸುವಳ್ ‡೭೮

ಉಣ್ಮೆ ಶಶಿಧರನ ಬಗೆ ಮಿಗೆ.
ಪೊಣ್ಮುವ ಪುಳಕಂಗಳಿಂದೆಯಂತಃಸ್ಥದೊಳೊ-
ಲ್ದಾಣ್ಮನನೀಕ್ಷಿಪ ತೆಜದಿಂ
ಕಣ್ಮುಚ್ಚುವಳಮಳೆ ವಿಮಳಕಮಳಾಕೃತಿಯಿಂ ೭೯

ಗಿರಿಸುತೆ ಹರನಂಘ್ರಿಯನಂ-
ತರಂಗದೊಳ್ ಮುಚ್ಚಿ ಪೊಱಗೆ ನೋಳ್ಪಾಸೆಯೊಳಾ
ಚರಣಾರುಣೋದಯಕೆ ತಾ-
ವರೆಯುಲರ್ದಪೊಲಂದು ಮುಂದೆ ಕಣ್ದೆಱೆದಿರ್ದಳ್ ೮೦

ಮತ್ತಮಾ ಶೈಶವವಲ್ಲಿ,

ವರಭಾಳಾಕ್ಷದ ಮೇಲೊಂ-
ದಱುತರನಿಟಿಲಾಕ್ಷನೊಗೆದುದೆಂಬಂತಿರೆ ಶಾಂ-
ಕರಿಗೆಸೆದುದು ಮುಂದಲೆಯೊಳ-
ಗರಳೆಲೆ ಬಹುರತ್ನಸೂತ್ನಕಾಂತಿಪ್ರಕರಂ ೮೧

ನೋಡಭವವಲ್ಲಭೆಯ ಕಿವಿ-
ಗೂಡಿದೆವತಿಸಫಲವಾದವೆನುತುಂ ಕುಣಿವಂ-
ತಾಡುವ ಗಿರಿಜೆಯ ಮೊಗದೊಡ-
ನಾಡುವ ಹೊನ್ನೋಲೆವಿಡಿದು ಪೊಸಮಾಗಾಯ್ತುಗ್ಗಳ್ ೮೨

೧. ಳಬಳೆ (ದಾ. ಯ. ಕೊ.) ೨. ಯೊಳ್ (ಓ.) ೩. ಮುಚ್ಚಿ (ಕಾ. ಜಿ.) ೪. ಭಾಳಾಕ್ಷಿಯ (ಕಾ. ಜಿ.); ತರಳಾಕ್ಷದ (ಓ.) ೫. ವಿಮಳಾಕ್ಷಿಯೊ (ಕಾ. ಕ. ಬ. ಜಿ ಯ. ಅ. ಗೊ. ಡ. ಗ.) ೬. ಪ್ರಸರಂ (ಯ. ಅ. ಗೊ.); ಗಳಿಂದಂ (ಕಾ. ಕ. ಡ.)

ಶಿವನಂ ಬಿಡದಪ್ಪುವ ತೋ-
ಳಿವನಪ್ಪಿ ಕೃತಾರ್ಥರಪ್ಪೆವೆಂಬಂದದೊಳಾ-
ನವರತ್ನದ ರವೆಯದ ಬಂ-
ದಿ ವಿರಾಜಿಸು[೧]ತಿರ್ಪುದಪ್ಪಿಯಗಜೆಯ ತೋಳಂ ೮೩

ಒದವಿರ್ದ ಸಕಲಲಾವ-
ಣ್ಯದ ಸಿರಿ ಕೆಯ್ಸಾರ್ದುದರ್ಕೆ ಕಂಕಣವುಂ ಕ-
ಟ್ಟಿದವೋಲ್ ಮೆಱೆದುವು ವರ ಹ-
ಸ್ತದೊಳೆಸೆವಂಬಿಕೆಯ ಸುಕರಮಣಿಮಯಕಟಕಂ ೮೪

ಪುರಮಥನನ ವರಕೀರ್ತ್ಯಂ-
ಕುರವಿಾ ಗಿರಿಸುತೆಯ ವದನದೊಳ್ನೊಳೆತುದು ಸಾ-
ದರದಿಂ ತಾನೆಂಬಂತಿರೆ
ಕರಮೆಸೆದುದು ವಿಮಳಮೌಕ್ತಿಕಂ ನಾಸಿಕದೊಳ್ ೮೫

ಅನವಧಿಗುಣನಿಧಿ ಪಾರ್ವತಿ
ಜನಿಯಿಸೆ ತಾನಱಿದು ಬಂದು ಚಂದ್ರಾಭರಣಂ
ಮನವೊಸೆದು ತಾಳಿಗಟ್ಟಿದ-
ನೆನೆ ಮೆಱೆದುದು ಕೊರಲೊಳೇಕಮುಖರುದ್ರಾಕ್ಷಂ ೮೬

ಈ ಶಶಿಮುಖಿ ದಿಟದಿಂ ವ್ಯಾ-
ಘ್ರಾಸುರಹರನರಸಿಯೆಂಬುದರ್ಕಿದೆ ಕುಱುಪೆಂ-
ಬಾ ಸೈಪನಱಿಪುವಂತಿರೆ
ಭಾಸುರಮಾಯ್ತುರದೆ ಪುಲಿಯುಗುರ್ ನಗಸುತೆಯೊಳ್ ೮೭

---

೧. ತಿರ್ಪುವಲ್ಲಿ ಗಿರಿಜೆಯ ತೋಳೊಳ್ ( ಕ. ಶಾ. ಸೆ. ); ತಿರ್ಪುವಪ್ಪ ಗಿರಿಜೆಯತೋಳಂ ( ಯ ).
೨. ಸುಂದರಿ ( ಕ ).

ಹೆಱೆ ಸೂಡಿದನ ಮನವನೀ
ತೆಱದಿಂದಂ ಸುತ್ತುವಳ್ ಭವಾನಿಯೆನಿಪ್ಪಾ
ತೆಱನಂ ತೋಱುವ ತೆಱದಿಂ
ಮೆಱೆವುಡಿಗೆಯ ಮೇಲೆ ಸುತ್ತಿದುಡೆವಣಿ ತೋರ್ಕುಂ ೭೮

ಬಿಡೆವಿನ್ನೀ ಗಿರಿಜೆಯ ಮೆ-
ಲ್ಲಡಿಗಳನೆಂದವಿಳವೇದಮುಲಿವಂತೆ ವಲಂ
ನಡೆವೆಡೆಯೊಳಗುರ್ಬಿಂ ಬೋ-
ಬ್ಬಿಡುವಂದುಗೆ ಗೆಜ್ಜೆ ಸಜ್ಜನಗೆ ಸೊಗಯಿಸುಗುಂ ೭೯

ಇಂತು ಸಕಲಸೌಂದರ್ಯಮಂ ಬೀಱುವ ಬಾಲದುಡಿಗೆವೆರಸು ಲೀಲೆ ಮಿಕ್ಕು,

ತರದಿಂ ಗೆಜ್ಜೆಗಳುಲಿಯು-
ತ್ತಿರೆ ಮಾಂಗಾಯಲುಗೆ ಮೂಡೆ ಮೆಲ್ಲಗೆ ನಲವಿಂ
ಪರಿಪರಿದು ಪೋಗಿ ಗಿರಿಸುತೆ
ಹರಿಸಂ ಮಿಗೆ ಹರನ ನಿಳಯದೊಳ್ ನೆಲೆಸಿರ್ಪಳ್ ೮೦

ನಲಿವಳ್ ನಗುವಳ್ ರಾಗಿಪ-
ಳುಲಿವಳ್ ಮುದ್ದಿಸುವಳಳುವಳಪ್ಪುವಳಂತಿಂ-
ತೊಲೆವಳ್ ನಿಲ್ವಳ್ ಮೇನೆಯ
ಮೊಲೆಯಂ ಮಱೆದಭವನಾಟದೊಳ್ ಸಂದಿರ್ಪಳ್ ೮೧

ಇಂತಾರುಮಂ ಬಗೆಯದೆ ನೆರಮಂ ಪಾರವೆ ಪೋಗಿ ಪರಮಪ್ರೀತಿಯಿಂ ಹರ-ನಾಲಯದೊಳ್ ಗಿರಿಜಾತೆಯಿರ್ಪುದುಂ ಗಿರಿರಾಜಂ ಕಂಡು ಮನಂಗೊಂಡು ಜಡೆ ಮುಡಿಯ ಜಾಣೆಗೆ ಭಾಳತಳದ ಭಾಮಿನಿಗೆ ತ್ರಿಲೋಚನದ ಲಲನೆಗೆ ಕರ್ಣಪಾಲಿ-ಕೆಯ ಕಾಮಿನಿಗೆ ಕಪೋಳ ವಿಪುಳೆಗೆ ನಗೆಗಣ್ಣಗಳ ನಲ್ಲೆಗೆ ನಾಸಿಕದ ನೀಱೆಗೆ

೧. ಯಿಸೆಗುಂ (ಕಾ. ಬಿ. ಅ. ಓ.). ೨. ಸಲೆ ತಾ ( ಕ. ಡ. ). ೩-೩. ಭಾಳನೇತ್ರನ ಸ್ಥಳದ ಭಾಮಿನಿಗೆ (ದಾ); ಭಾಳಸ್ಥಳದ ಭಾಮಿನಿನಿಗೆ (ಕ. ಕಾ.); ಭಾಳತಳಭಸಿತವ ಭವಾನಿಗೆ (ಅ) ೪. ನಲವಿಂಗೆ ( ಅ )

ಬೆಳರ್ವಾಯ ಭಾಗ್ಯನಿಧಿಗೆ ಸಿರಿಮೊಗದರಸಿಗೆ ತೊದಳ್ನುಡಿಯ ಸದಮಳೆಗೆ
ಕಂಬುಗ್ರೀವದ ಕಲ್ಯಾಣಿಗೆ ಪೇರುರದ ಪಾರಿಜಾತಕ್ಕೆ ನಳಿತೋಳ ನಿಜಕ್ಕೆ ಹಸ್ತ-
ಕಡಗದ ಹರಿಣಾಕ್ಷಿಗೆ ಬಡನಡುವಿನ ಬಾಲೆಗೆ ಸುಳಿನಾಭಿಯೆಳಯಳ್ಗೆ ಎಸೆವುಡಿ
ಗೆಯ ಪೊಸಚೆಲ್ವೆಗೆ ನುಣ್ದೊಡೆಯ ನೂತನೆಗೆ[೧]ಕಿಱುದೊಡೆಯ ಕಾಮಧೇನುಗೆ ಮೃದು
ತಳದ ಮಂದಯಾನೆಗೆ ಗೆಜ್ಜೆಗಳ ಸಜ್ಜನೆಗೆ ಅಂದುಗೆಯಾನಂದೆಗೆ ನೇವುರದ ಭಾವ-
ಕಿಗೆ, [೨]ಪಾಡಗದ ಪರುಷಕ್ಕೆ ಉಡಿಗೆಯ ಮೃಡಾಣಿಗೆ ಉಡೆವಣಿಯುತ್ಸಾಹಕ್ಕೆ ಕರ-
ವಲಯದ [೩]ಪರಬೊಮ್ಮಕ್ಕೆ ಹೊಂಗಡಗದ ಲಿಂಗವಂತೆಗೆ ತೋಳಬಂದಿಯ ಬಾಲಕಿಗೆ
ಪುಲಿಯುಗುರ ಸುಲಲಿತೆಗೆ [೪]ನೇವಳದ ನಾಯಕಿಗೆ ರನ್ನದಾಳಿಯ ರಾಜಹಂಸೆಗೆ ಮಾಗಾ
ಯ್ಗಳ ಮುಗ್ಧೆಗೆ ಹೊನ್ನೋಲೆಯ ಚೆನ್ನೆಗೆ ಮೂಗುತಿಯ ಮುಗುಳ್ಗೆ ಅಂಜನದ
ಮೃತಕ್ಕೆ ತಿಲಕದ ಲಲಿತೆಗೆ ಅರಳೆಲೆಯ ತರಳೆಗೆ ಸೂಸಕದ ಸುಮ್ಮಾನೆಗೆ ರುದ್ರಾ-
ಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ ಭಕ್ತಿಯ ಭಾವಕ್ಕೆ ಅಱಿವಿನವಯವಕ್ಕೆ
ಶಿವಜ್ಞಾನದ ಸೀಮೆಗೆ ವೈರಾಗ್ಯದ ಮೇರೆಗೆ ಪರಮೈಶ್ವರ್ಯದ ಪುಣ್ಯಕ್ಕೆ [೫]ಲೋಕದ
ಲೋಚನಕ್ಕೆ ಸಾಕಾರದ ಸುಧೆಗೆ ಪಶುಪತಿಯ ಪಟ್ಟದ ಮಹಾದೇವಿಗೆ ಸಕಳಜಗ-
ನ್ಮಾತೆಗೆ ಸಕಳಬ್ರಹ್ಮಾಂಡಮಂ ರಕ್ಷಿಸುವ ರುದ್ರಾಣಿಗೆ ರಕ್ಷಣಾರ್ಥಂ ತಂದೆ
ನಿಯಾಮಿಸಿ ಕೊಟ್ಟ ದಂಡಿಗೆಯ ಧವಳಛತ್ರದ ಅಂಗರಕ್ಷಕರ ಸಹವಾಸಿಗಳ ದಾದಿ
ಯರ ಪಡಿಯಜತಿಯರ ಚಾಮರದ ಸೀಗುರಿಯ ಹಡಪದ ಮಡಿವರ್ಗದ ಅಂಜನದ
ಕನ್ನಡಿಯ [೬]ಕಳಶದ ಸಿರಿಮುಡಿಯ ಸಿಂಗರದ ಸಾದಿನ [೭]ಕುಸುಮಕುಳದ ಕತ್ತುರಿಯ
ಕರ್ಪೂರದ ಶ್ರೀಖಂಡದ ರಾಜಶುಕಪಠಣದ ಹಂಸರ[೮]ಕ್ಷಣದ ಮಯೂರನರ್ತನದ
ಲೀಲಾಂಬುಜದ ರತ್ನಕಂತುಕದ ವಿಳಾಸಿನಿಯರ ಹರಿದ್ರಾಭರಣದ ಚರಣಪ್ರಕ್ಷಾ
ಳನದ ಕದಂಬಫಲಭಾರದ ಮಂಗಳಾರತಿಯ ಮಾನಿನಿಯರಾದಿಯಾದ ಪುಣ್ಯಾಗಣ್ಯ
ಲಾವಣ್ಯಾಮಯಸಮ್ರಾಜ್ಯಪರಿಚರ್ಯಪಟುಗಳೆನಿಸಿದ ಷೋಡಶಸಹಸ್ರವಿಳಾಸಿನಿಯ
ರ್ವೆರಸು ನಡೆತಂದಪೂರ್ವಸರ್ವವಿದ್ಯೆಗಳನಭ್ಯಾಸಂ ಮಾಡದೊಡಂ ಮುನ್ನಿನಂತೆ
ಸಹಜಮಾಗಿ ನೆಲಸಿ ನಿಲೆ ವಿಹಿತನವೀನಕ್ರೀಡೆ ಬಾಲ್ಯಮಂ ಸವಿದಪುದನೆ ಸಲ್ಲೀಲೆಯಿಂ
[೯]ಶೈಲಾತ್ಮಜೆ ಕೇಳೀವನಂಗಳಂ ಪುಗುತಂದು,

---

೧. ಪದದ ( ಕಾ. ಕ. ). ೨. ಸೂಡಗ ( ಕಾ. ಕ. ಯ. ಗೊ ). ೩. ಬ್ರಹ್ಮಕ್ಕೆ ( ಕಾ ). ೪. ನೇವಣದ ( ಕಾ ). ೫. ಲೋಕದಾಲೋಕನಕ್ಕೆ ( ಕಾ. ದಾ. ಬೆ. ಕ. ) ೬. ಕರಗದ ( ಮ. ಬ. ಗೊ. ಕೊ. ಅ. ದಾ. ಯ. ). ೭. ಪಟ್ಟಗಪುದದ ( ಕಾ. ಬೆ. ದಾ. ಕ. ಸೆ. ). ೮. ಯಾನದ (ಅ). ೯. ಶೈಲರಾಜಾ-ತ್ಮಜೆ ( ಯ ).

ಉತ್ಪಲ.

ಎಲ್ಲಿ ಸರೋಜಮೆಲ್ಲಿ ವಿಮಳೋತ್ಪಲಮೆಲ್ಲಿ ಲತಾವಿತಾನದೊ-
ಳ್ಪೆಲ್ಲಿ ವನಂಗಳೆಲ್ಲಿ ಕೃತಕಾಚಳಮೆಲ್ಲಿ ವಿಶಾಲಮಪ್ಪ ತ-
ಣ್ಪೆಲ್ಲಿ ತಟಾಕಮೆಲ್ಲಿ ಪುಳಿನಸ್ಥಳಮೆಲ್ಲಿ ನದೀನದಾಳಿ ತಾ-
ನಲ್ಲಿ ಭವಾನಿ ಭಕ್ತಿ ಮಿಗೆ ಭಾವಿಸಿ ಭರ್ಗನನೊಲ್ದು ಪೂಜಿಪಳ್ ೯೨

ಕಣ್ಮಲರಿಂದಶ್ರುಜಲಂ
ಪೂಣ್ಮುತ್ತಿರೆ ತನುವಿನಲ್ಲಿ ಪುಳಕಂ ಸಾಲ್ಗೊಂ-
ಡುಣ್ಮುತ್ತಿರೆ ಗಿರಿಪತಿಸುತೆ
ಸುಣ್ಮಳಲಿಂ ದಿವ್ಯಲಿಂಗಮಂ ವಿರಚಿಸುವಳ್ ೯೩

ವಿರಚಿಸುವ ಲಿಂಗದೊಳ್ ಮೃದು-
ಕರಾಂಗುಲಿಸ್ಪರ್ಶಸುಖಮನೆಳಸುತೆ ಶರ್ವಂ
ಪರಿತಂದು ನಿಲ್ವನೆಂದೊಡೆ
ಗಿರಿಜೆಯ ಸೌಭಾಗ್ಯದಿರವನಾರ್ ಬಣ್ಣಿಸುವರ್ ೯೪

ಇಂತು ಸೌಕುಮಾರ್ಯಶೃಂಗಾರಮನಾಂತು,

ಹಿಮಕರಕಿರಣಾವಳಿಗಳ್
ಕುಮುದದ ಸೊಂಕಿಂದೆ ಕಂಪನಪ್ಪಿದುವೆನೆ ವಿ-
ಭ್ರಮಮಲ್ಲಿಕಾನಿಕಾಯದೆ
ಕಮಳಾನನೆ ವಿಮಳಲಿಂಗಮಂ ಪೂಜಿಸುವಳ್ ೯೫

ತರಣಿಯ ತರುಣಕಿರಣಮಂ
ಬುರುಹಪರಿಷ್ವಂಗದಿಂದೆ ಪರಿಮಳಮಂ ಪೊ-
ತ್ತಿರಲ್ದುಪುವೆನಿಸುವ ಸಂಪಗೆ
ಯಲರಿಂದಂ ಗಿರಿಜೆ ಹರನನೊಲ್ದರ್ಚಿಸುವಳ್ ೯೬

೧. ಸಿಲ್ವನೆನೆ ವರ (ಕಾ. ಕ. ದಾ.). ೨-೨. ನೆನಿಪುತ್ತುವು (ಕಾ. ಕ. ಬಿ. ದಾ. ಅ. ಡ.). ೩. ಪರಿಸ್ಪಂದದಿಂಬೆ (ದಾ. ದ). ೪. ಪೆ (ಕಾ).

ತರಣಿಯ ಮಧುಕರನಿಕರದ
ಮರುತನ ಕಾಲ್ದುಳಿಯಿವೆಂದು ಪೂವಂ ಬಿಟ್ಟಾ
ಗಿರಿಸುತೆ ಮನಃಕುಸುಮದಿಂ
ಪರಮನನೇಕಾಂತಭೂಮಿಯೊಳ್ ಪೂಜಿಸುವಳ್ ೯೭

ಅಂತುಮಲ್ಲದೆ,

ವನರುಹನಾಳಂ ದೆಂಡಂ
ವನರುಹನವಪತ್ರವೊಂದೆ ಪೊಸಸೊರೆ ಮತ್ತಾ
ವನರುಹಸೂತ್ರಂ ತಂತ್ರಿಗ-
ಳಿನೆ ಶಿವನಂ ಜಾಣೆ ಬೀಣೆಯಂ ಕೇಳಿಸುವಳ್ ೯೮

ಇಂತು ಬಾಲಲೀಲೆ ಶಿವಲೀಲೆಯಾಗಿ ಕೆಲನರಿಯದೆ ಬಲನಱಿಯದೆ ಪಸಿವಱಿಯದೆ ತೃಷೆಯಱಿಯದೆ ದೆಸೆಯಱಿಯದಿರುಳ್ಪಗಲಱಿಯದೆ ಪರಿಜನಮಂ ಪರೀಕ್ಷಿಸಧೆ ಶಿವನಂ ಮರುಳ್ಗೊಂಡು ಭವಾನಿಯಿರೆ ಕಂಡು ಕೌತುಕಂಗೊಂಡು ಸಹಚರಿಯರ್ ತಮತಮಗಂಜಿ ಭಾರತಿಗೋರನ್ನಳಪ್ಪ ನಾರಿಯೊರ್ವಳಂ ಗಿರಿರಾಜನಲ್ಲಿಗೆಭರದಿಂ ಕಳುಪಿದೊಡಾ ತರುಣಿ ಭೀತಿಯಿಂ ಪರಿತಂದರಮನೆಯಂ ಪೊಕ್ಕೋಲಗಮೊಳ್ ನಿಂದು ನಗಾಧಿಪಂಗೆ ನಯಂ ಮಿಗೆ ಭಯಭಕ್ತಿಯಿಂ ಮೆಯ್ಯಿಕ್ಕಿ ಕೆಯ್ಮುಗಿದು ನಿಂದು,

ಉತ್ಪಲ.

ದೇವ ಕುಮಾರಿ ಬಾಲೆ ಸುಕುಮಾರಿ ಸಮರ್ಥೆಯತಿಸ್ವತಂತ್ರೆ ನಾ-
ನಾವಿಧಶೈಲರಾಜಿ ನವರಾಜಿ ಸರೋವರರಾಜಿ ಸಲ್ಲತಾಂ-
ತಾವಳಿ ಸೈಕತಾವಳಿ ಲತಾವಳಿಯೆಂಬಿವಱಲ್ಲಿ ಸಂತತಂ
ದೇವರ ದೇವನಂ ಶಿವನನರ್ಚಿಸುತಿರ್ದಪಳೊಲ್ಲಳೇನುಮಂ ೯೯

---

೧. ಕಮಲದಿಂ ( ಯ ). ೨. ದಂಡಿಗೆ ( ಕಾ. ಬೆ. ದಾ. ಅ. ಓ. ) ೩. ಯುಗದ ( ಯು ). ೪. ಸಹಚರಿಯರಪ್ಪ ಜಯವಿಜಯೆಗಳ್ ( ಅ. ಯು. ). ೫. ದೇ ( ಕಾ. ಓ. ).

ದೇವಿಯ ಮೊಲೆವಾಲಂ ಪರಿ-
ಭಾವಿಸಳಾರಯ್ಯಳಂಜಳಳ್ಕಳ್ ವನದೊಳ್
ಶ್ರೀವಿರ್ದ ಗುಲ್ಮಲತೆವೃ-
ಕ್ಷಾವಳಿಯೊಳ್ ಲಿಂಗಪೂಜೆಯೊಳ್ ಸಂದಿರ್ದಳ್ ೧೦೦

ಕಲ್ಲೆನ್ನಳ್ ಮುಳ್ಳೆನ್ನಳ್
ಮೆಲ್ಲಿತ್ತಿದು ಬೆಟ್ಟಿತೆನ್ನಳತಿಭಕ್ತಿಯೊಳಂ-
ತೆಲ್ಲಿ ಸುಖಸ್ಥಳಮುಂಟಾ-
ದಲ್ಲಿ ವಿರೂಪಾಕ್ಷಪೂಜೆಗೀಡಾಗಿರ್ದಳ್ ೧೦೧

ಬರೆದರೊ ಬೈತರೊ ಪೊಲ್ದರೊ
ಪೊರೆದಮೊ ಬೆಚ್ಚರೊ ಮುಗಳ್ಚಿ ಕಱುವಿಟ್ಟರೊ ಕಂ-
ಡರಸಿದರೊ ಕಡೆದರೋ ಎನೆ
ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ ೧೦೨

ಬೇಡೆಂದೊಡೆ ಮಾಣಳ್ ನಲಿ-
ದಾಡುವಳಪ್ಪುವಳಮುರ್ಚುವಳ್ ಪುಳಕಿಪ್ಪಳ್
ಮಾಡುವ ಲಿಂಗಾರ್ಚನೆಯೊಳ್
ನೋಡಳ್ ನುಡಿಯಳ್ ಭವಾನಿಯೇನೆಂದಱಿಯಳ್ ೧೦೩

ಎಂದು ಬಿನ್ನವಿಸೆ ಕೇಳ್ದು ಗಿರಿರಾಜಂ ನಿಜಾತ್ಮಜಾವಲೋಕನಹರ್ಷವದನಂ ಭದ್ರಾಸನದಿಂ ಭೋಂಕನೆಳ್ದು ಪೊಱಮಡುತ್ತೆ ಆರಾಧಿತಾರ್ಯಪ್ರಕರನುಂ, ದಾನಪ್ರಮೋದಿತನಾನಾದ್ವಿಜನುಂ, ತ್ಯಾಗಪರಿತೋಷಿತವಂದಿವ್ರಜನುಂ, ಅವಷ್ಟಂಭಿತಕುಂಭಿಕುಂಭಸ್ಥಳಪೂರ್ವಾಸನನುಂ, ಸಮಸ್ತಮುಕ್ತಾನೀತಮೌಕ್ತಿಕಾತಪತ್ರನುಂ, ಪಾರ್ಶ್ವಯುಗನರ್ತಿತಚಮರವಿಭ್ರಮನುಂ, ನವೀನನರ್ತಕೀನರ್ತನಲೀಲಾವಿಲಾಸೇಕ್ಷಣನುಂ, ಬಹಳಕಹಳಾರವಬಧಿರೀಕೃತದಿಙ್ಮಂಡಲನುಂ, ನಿಸ್ಸೀಮೋದ್ಧತನಿಸ್ಸಾಳ-

೧. ಪೂಜೆಯಿಂದೆಸೆದಿರ್ದಳ್ (ಯು. ದಾ. ಆ. ಗ.). ೨. ಪೂಜೆಯೊಳ್ ಸಂದಿರ್ದಳ್ (ಗೊ. ಯು); ಪೂಜೆಗೊಡಲಾಗಿರ್ದಳ್ (ಸ). ೩. ಪುಸಂ (ಕಾ); ಪರ್ಣಸಂ (ಯು. ದಾ. ಆ. ಕ. ಸ.). ೪. ಜನನುಂ (ಕಾ. ಯು. ದಾ.). ೫-೫. ಸಮುಚಿತಾನೇಕ (ದಾ. ಆ.).

ನಾದನುಂ, ಮಕರಾಯಮಾನದ್ವಿರದಕುಲತರಂಗಾಯಮಾನತುರಂಗೌಘಮೇಘಾಯಮಾನ ರಥಯುತಸೇನಾಸಮುದ್ರನುಮಾಗಿ ನಡೆತರುತ್ತುಂ ಮುಂದೆ ನಿಂದು ಬಹಿರ್ವನದೊಳಗಣ ಬಾಲಚೂತಾಂಕುರಮಂ ಬಲವಂದು ಭಾವಿಸಿ ನೋಡಿ ತೀವಿದ ನೇಹದಿಂದೋವಿಯೋವಿ ನಸು ಕರ್ದುಂಕಿ ನವರಸಮಂ ಸವಿಸವಿದು ಸೊರ್ಕಿ ಪಕ್ಕಮಂ ಬಿರ್ಚಿ ಮಿಕ್ಕು ನೆಗೆದೆಳದಳಿರ ಬಳಗದೊಳ್ ಪೊರಳ್ದು ಪಾರ್ದು ನಲಿನಲಿದು ನೋಡಿ ನೋಡಿ ಮಲೆತು ನಿಂದು ಮೇಲಣ ತರುಶಾಖಮನೇಱಿ ವಿರಹಿಗಳಿತ್ತಲ್ ಬರಲಾಗ ಕಾಮದೇವನ ತೋಟಬೇಡೆಂದು ಬಿರುದೆತ್ತಿ ಕರೆವ ಕಂದರ್ಪನ ಕಹಳೆಗಳೆಂಬಂತೆ ತಂಡತಂಡದಿಂ ಕೂಗುವ ಗಂಡುಗೋಗಿಲೆಗಳಂ, ಮತ್ತಮಲರ್ದಿರದೆ ಮುಕುಳಿತಮಾಗಮುಳ್ಳಲರ್ದ ಬಿರಿಮುಗುಳೊಳ್ ಭರದಿಂ ಪೊಕ್ಕು ಪೊಸಕಂಪನೆಸೆಯೆ ಪೀರ್ದು ತಣಿತಣಿದಣಿಯರದಿಂದುರ್ಕಿ ಸೊರ್ಕಿ ಮೊರೆದು ನೆರೆದು ಮೇಗಣ್ಗೆ ನೆಗೆದು ಸಾಲ್ಗೊಂಡೇಱಿ ವನಲಕ್ಷ್ಮಿ ಪಾರ್ವತಿಗೆ ಲೀಲೆಯಿಂದೋಲಗಿಸಲೆಂದೆತ್ತಿದ ನೀಲದ ಮಾಲೆಯಂತೆ ನೆರೆಮೆಱೆವ ಮಧುಕರಪ್ರಕರಮಂ, ಮತ್ತಂ ಸೆಳೆಗೊಂಬಿನ ತನಿವಣ್ಣಂ ತವಕದೊಳಪ್ಪಿ ರಸದೊಱತೆಯ ಸೆಱೆಯಂತಿರ್ದ ಪಣ್ಣ ಸೆರೆಯಂ ಕಂಡು ಕಣ್ಗೊಳಾಲಿಂಗಿಸುವಂತೆ ಸವಿಸವಿದು ನೋಡಿ ಚಂಚುಪುಟದೊಳೀಡಿಱಿದೆಚ್ಚು ಪಾಯ್ವ ರಸಧಾರೆಗೆ ನಾಲಗೆಯನೊಡ್ಡಿ ನಲಿನಲಿದೀಂಟಿ ತಣಿದು ತೂಗಿ ತೊಂಡುಗೆಡೆದು ವಸಂತರಾಜನ ಪಡಿಯಱರಂತೆ ವಿರಹಿಗಳಂ, ಚಪ್ಪರಿಪ ರಾಜಕೀರಂಗಳಂ, ಮತ್ತಮುಗಲ್ದ ಪೆಣ್ಣಂಚೆಯಂ ಪುಳಿನಸ್ಥಳದ ಕುಸುಮರಜದ ಪೊಸಸಜ್ಜೆವಿಡಿದಱಿಸಿ ಪೋಗಿ ಕೊಳನಂ ಪೊಕ್ಕು ಘಳಿಲನೆ ಕಂಡಮುರ್ದಪ್ಪಿ ಕಮಲವನದೆಲೆದುಱುಗಲಿಱುಂಬಿನೊಳನುರಾಗದಿಂ ನೆರೆವ ರಾಜಹಂಸಮಿಥುನಂಗಳಂ, ಮತ್ತಂ ಕಳ್ತಲಿಪ ತಮಾಲವನದೊಳ್ ವಿರಹಿಗಳನಱಸಲೆಂದು ಕಾಮದೇವನೆತ್ತಿಸಿದ ಕೈಯ್ದೀವಿಗೆಗಳಂತೆ ಪಲ್ಲವರಾಗದಿಂ ಪಲ್ಲವಿಸಿ ತೋರ್ಪಶೋಕದ್ರುಮಂಗಳಂ, ನಿಂದ ಲತೆಗಳನಲ್ಲಾಡಿಪ ಮಂದಾನಿಳನಂ, ಅಗ-

೧. ಪೊರಳ್ದು ( ಕಾ. ಬೆ. ). ಪೊರ್ದು ( ಅ. ಕೊ. ). ೨. ಬರಲಾಗದು ( ಕಾ. ಡ. ); ಬರಲಾಗವಂ ( ಬಾ ); ಬರಲಾಗದೆಲೆಲೇ ( ಅ. ಸೆ. ). ೩–೩. ಮೊಗವಿಟ್ಟು ಪೊಕ್ಕು ಕರ್ಣಿಕೆಯ ನಲಿದು ಕೇಸರವಂ ಕೆದಱಿ ಪರಾಗದೊಳ್ ಪೊರಳ್ದು ಪರಿಮಳಮಂ ಸರಸದಿನೀಂಟಿ ತಣಿದು ಸೊಕ್ಕಿ ಜೇನುಗಿ ಜೇವಿಸಿ ತುಱುಗಿ ದೆಸಳೋಳ್ ತಿರುಗಿ ಬಂದು ಸರಃಶ್ರೀಯಂಕೇಳಿಸುವ ಗಾನರಂತೆ ನೆರೆನೆರೆದು ಝುಂಕರಿಪ ಮಧುಕರಪ್ರಕರದಿಂ ( ಯ ). ೪. ರಜದೊಳ್ (ಯ).

ಲ್ದರಂ ನಗುವಂತೆ ನಸುವಿರಿದ ದಾಡಿಮಂಗಳಂ, ಸುಳಿವ ವಿದ್ಯಾಧರಿಯರಂ, ಕುಣಿವ ನವಿಲ್ಗಳಂ ಕರೆವ ಕೋಳರ್ವಕ್ಕಿಗಳಂ, ನೆರೆವ ಚಕ್ರಮಿಥುನಂಗಳಂ, ಕಂಡು ಗಿರಿರಾಜಂ ಕೊಂಡಾಡುತುಂ, ಬಂದು ಮುಂದೆ ಪುಂಡರೀಕಪ್ರಕರಪರಿಮಳಾಸಕ್ತಭ್ರಮರಕುಲ ವಿಲಸಿತಮಾದ ಕಾಸಾರತಟದೊಳ್ ಮಂದಾನಿಳನಿಂ ಪರೆದ ಪರಾಗದ ಪೀಠದ ಮೇಲಣ ನುಣ್ಮಣಲ ಶಿವಲಿಂಗಮನಗಣಿತಪ್ರೇಮದಿಂ ಸೊಗಸುವಿಕ್ಕು ಮಿಗೆ ಪೂಜಿಸುತ್ತಿರ್ದ ಮಗಳಂ ಕಂಡು,

ಬಿಡದೇಳ್ವ ಪುಳಕತತಿಯೊಡ-
ನೊಡನಾನಂದಾಶ್ರುವೊಗೆಯೆ ಬಗೆನೆರ್ಚುತ್ತಿ-
ರ್ಮಡಿ ಮೂವಡಿ ನಾಲ್ವಡಿಯ-
ಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ ೧೦೪[1]

ಶಾರ್ದೂಲ.

ಬಾರೆನ್ನಾಯುವೆ ಬಾರ ಪುಣ್ಯತತಿಯೇ ಬಾರೆನ್ನ ಸೌಂದರ್ಯವೇ
ಬಾರೆನ್ನಾದಿಯೆ ಬಾರ ಕೈವಸಿಧಿಯೇ ಬಾರೆನ್ನಯ ಪ್ರಾಣವೇ
ಬಾರೆನ್ನೊಲ್ಮೆಯೆ ಬಾರೆ ತತ್ವಸುಖಮೆ ಬಾರೆನ್ನಮಾತಾಮಹೇ
ಬಾರೆನ್ನಾಳ್ದಳೆನುತ್ತುಮೊಲ್ದು ಕರೆದಂ ಶರ್ವಾಣಿಯಂ ಶೈಳಪಂ ೧೦೫

ಇಂತು ಕರೆದ ನಿಜಜನಕಜನಿತಸ್ನೇಹರಸಾರ್ದ್ರಮಧುರಾಕ್ಷರಸಮ್ಮಿಳಿತ ಸಾತ್ವಿಕ ಸರಮಂ ಕೇಳ್ದು ಪುತ್ರೀಭಾವಮಂ ನಟಿಸಲೆಂದು ಶಿವಲಿಂಗಮಂ ಬೀಳ್ಕೊಂಡು ತಿರುಗಿ ನೋಡಿ,

ನಿಂದಿರ್ದು ನಗುತೆ ನಲಿಯು-
ತ್ತಂದುಗೆ ಪೊಂಗೆಜ್ಜೆಯುಲಿಪು ನೆಲನುಗ್ಗಡಿಸು-
ತ್ತಂದೆಸೆಯೆ ಮಂದಯಾನದೊ-
ಳಿಂದುಪ್ರಭೆ ಮುಂದೆ ಮುಂದೆ ನಡೆತರುತಿರ್ದಳ್ ೧೦೬

---

೧. ಬಾರ (ಶಾ. ಬಿ.). ೨. ಮುಕ್ತ (ಅ); ಪುಣ್ಯ (ಓ). ೩. ನೀರೆಜು (ವು. ಯು. ಬಿ. ಅ. ಸ).

ಅರಳೆಲೆ ಭಾಳದೊಳಾಡು-
ತ್ತಿರೆ ಮಾಂಗಾಯ್ಗಂಡಯುಗಳಮಂ ಮುಂಡಾಡು-
ತ್ತಿರೆ ಕುರುಳ್ಗಳ್ ಕುಣಿದಾಡು-
ತ್ತಿರೆ ಸತಿಯರ ನಡುವೆ ಗಿರಿಜೆ ನಡೆತರುತಿರ್ದಳ್ ‡ ೧೦೭

ನವಿಲಾಟಂ ಹಂಸೆಯ ನಡೆ
ತವೆ ಮಂದಾನಿಳನ ಸುಗತಿ ಮದಗಜಗಮನಂ
ತವತವಗಡಂಗುತಿರ್ದುವು
ನವೀನಬಾಲಕಿಯ ಮಧುರಮೃದುಪದಗತಿಯೊಳ್ ೧೦೮

ಎಂದೆನಿಪ ವಿಳಾಸಂ ಮಿಗೆ
ಮುಂದಾಡುತೆ ತೊಳಪ ಬೆಳಪ ಬೆಳತಿಗೆಗಣ್ಗಳ್
ಮಂದೈಪ ಮೆಲ್ನಗೆಯನುಗೆ
ಬಂದಪ್ಪಿದಳಗಜೆ ಸೊಗಯಿಸುತ್ತಿರೆ ಪಿತನಂ ೧೦೯

ಅಂತು ಬಂದಪ್ಪಿದಾಗಳ್

ಮಾಣಿಕನೆ ಮೌಕ್ತಿಕವೆ ಮತ್-
ಪ್ರಾಣವೆ ಪೊನ್ನೊರೆಯೆ ಪರುಷವೇ ಮುಕ್ತಿಯ ನಿ-
ರ್ಮಾಣವೆ ಎನುತುಂ ಮೂರ್ಧ್ನಾ-
ಘ್ರಾಣಂ ಬೆರಸಗಲದಪ್ಪಿದಂ ಗಿರಿರಾಜಂ ೧೧೦

ಸುತ್ತಿದ ಪರಮಸ್ನೇಹದೆ
ಮತ್ತಂ ಮತ್ತಪ್ಪಿ ಪುಳಕಿಸುತ್ತುಂ ಪುಟವೇ-
ಱುತ್ತುಂ ಪೊಣ್ಮುತ್ತುಂ ನಲಿ-
ಯುತ್ತೆ ಗಜಾರೂಢನಾಗುತುಂ ಗಿರಿರಾಜಂ ೧೧೧

‡ ೧೦೭ ನೆಯ ಪದ್ಯವು ಗ. ಪ್ರತಿಯಲ್ಲಿಲ್ಲ. ೧. ಮೂರ್ಧ್ನಿ ( ಮ. ಯ. ದಾ. ಅ. ಕ. )

ಪೂರ್ವಾಸನದೊಳ್ ಸದೆಸಿಂ
ಪಾರ್ವತಿಯಂ ಹರ್ಷಮೇಱಿ ಬಿಜಯಂಗೆಯ್ಸು-
ತ್ತುರ್ವುತೆ ಕೊರ್ವುತೆ ಪೆರ್ವುತೆ
ಪರ್ವತರಾಜಂ ಪುರಕ್ಕೆ ತಿರುಗಿದನಾಗಳ್ ೧೧೨

ಮಹಾಸ್ರಗ್ಧರೆ

ಒಸೆದೆತ್ತಲ್ ತನ್ನ ಬೆನ್ನೊಳ್ ಬರುತಿರೆ ಚತುರಂಗಂ ಮಹಾದೇವಿ ಶರ್ವಾ-
ಣಿ ಸಮಸ್ತಾಧಿಕ್ಯ ಪೂರ್ವಾಸನದೊಳಿರೆ ಬರುತ್ತೊಪ್ಪಿದಂ ಶೈಳಪಂ ಸಂ-
ತಸದಿಂ ಭೂಭಾಗಮಂ ಸೋಁಕೆ ಪ್ರತಿಭರವಶದಿಂ ಪೂರ್ವಗೋತ್ರಾಗ್ರದೊಳ್ ತಾಂ
ಶಶಿಯಂ ಮುಂತಿಟ್ಟು ಬರ್ಪುಜ್ಜ್ವಳವಿಮಳವಸಂತಂಬೊಲಾನಂದದಿಂದಂ ೧೧೩

ಚಂಪಕ.

ಬರುತಿರೆ ಮುಂದೆ ಪಟ್ಟಣದೆರಕ್ಕಿದೆ ಸಿಯೊಪ್ಪುವ ರಾಜವೀಧಿಯೊಳ್
ನೆರೆದ ಶಶಾಂಕವಕ್ತ್ರೆಯರ ಕಣ್ಗಳ ಕಾಂತಿ ಶರೀರಕಾಂತಿಯಾ-
ಭರಣದ ಕಾಂತಿ ರತ್ನಕುಲಕಾಂತಿ ದರಸ್ಮಿತಕಾಂತಿಯೆಂಬ ವಿ-
ಸ್ತರಿತಸುಖಾಬ್ಧಿಯಂ ಸುಖದೊಳೀಸುತೆ ಬಂದನಗೇಂದ್ರವಲ್ಲಭಂ ೧೧೪

ಅಂತು ಬಂದು ಸಕಲರಾಜಲೋಕಂ ಬೆರಸು ಗಿರಿರಾಜಂ ರಾಜಧಾನಿತಿಳಕಮೆನಿಪ ರಾಜಮಂದಿರದ ಮುಂದೆ ನಿಂದು,

ಪೊಳೆವ ಗಜದಿಂದಮವನೀ-
ತಳಕ್ಕೆ ನಿಜತನುಜೆವೆರಸು ಬಿಜಯಂಗೆಯ್ದು-
ಗ್ಗಳಿಪ ಶಶಿಸೂರ್ಯವಂಶೋ-
ಜ್ಜ್ವಳರಂ ಕಳಿಪುತ್ತೆ ಬಂದನಗಕುಲರಾಜಂ ೧೧೫

೧. ನಲವಿಂ (ಅ.) ೨. ಒಸೆದೆತ್ತಂ (ಕಾ. ಅ.); ಒಸೆದಿತ್ತಂ (ಬೆ.) ೩. ಮುಂದಿಟ್ಟು (ಕಾ. ಬೆ.) ೪. ಪತ್ತನ (ಕಾ.) ೫. ವಿ। ಸ್ತರದ (ಕಾ. ಕ.) ೬. ಸುಧಾಬ್ಧಿಯುಂ (ಅ. ಪಾ.) ೭. ನಗಾಧಿನಾಯಕಂ (ಅ) ೮. ವಂಶೋ। ದ್ಭವರಂ (ದಾ.)

ಪರಿಜನನೊಡನೊಡನೊಲ್ದೊ-
ಪ್ಪಿರೆ ಕೆಲಬಲ [1] ಪಡಿತಳಾವಧಾರುಯೆನುತ್ತುಂ
ಬರುತಿರೆ ತನೂಜೆ ಸಹಿತಂ
ಗಿರಿರಾಜಂ ಸಿಂಹವಿಷ್ಟರಸ್ಥಿತನಾದಂ ೧೧೬

ಉತ್ಪಲ

ಹಾರಮರೀಚಿ ತತ್ಕುಚಮರೀಚಿ ಕಪೋಳಮರೀಚಿಯಾನನ-
ಸ್ಮೇರಮರೀಚಿ ಲೋಚನಮರೀಚಿ ಲಲಾಟಮರೀಚಿ ದಂತವಿ-
ಸ್ತಾರಮರೀಚಿಗಳ್ ತೊಳಗುವಾರತಿಗಾರತಿಗೆತ್ತು ಸುತ್ತಿ ನಿಂ-
ದ್ದಾರತಿಯೆತ್ತಿದರ್ ಗಿರಿಜೆಗಂ ಜನಕಂಗಮನಂತಕಾಂತೆಯರ್ ೧೧೭

ಅಂತೆತ್ತುವಾರತಿಗಳಂ ಕೆಯ್ಕೊಂಡು ಗಿರಿರಾಜಂ ನಾನಾಹರ್ಷದಿಂ ಮೇನಾ-
ದೇವಿಯಂ ಕರೆಯಿಸೆ ಬರುತಿರ್ದಳದೆಂತೆಂದೊಡೆ,

ಚಂಪಕ.

ಎಡಬಲವಂಕದೊಳ್ ನೆಲನನುಗ್ಗಡಿಪಾಳಿಯರಿಂ ವಿಳಾಸದಿಂ-
ದಡಿಯಿಡುವಲ್ಲಿ ನೇವುರದ ಸುಣ್ದನಿಗಾಡುವ ಹಂಸೆವಿಂಡಿನಿಂ
ಬೆಡದೆ ಮುಖಾಬ್ಜಸೌರಭಮನುಣ್ಬ ಮದಾಳಿಗಳಿಂ ವಿನೂತನಂ
ಬಡೆದತಿಮಾನಿ ಮೇನೆ ನಡೆತಂದು ನಿರೀಕ್ಷಿಸುತುಂ ಭವಾನಿಯಂ ೧೧೮

ಶಾರ್ದೂಲ.

ಏನೆನ್ನಾಯುವೆ ಎನ್ನಪಾರಸುಖಮೇ ಏನೆನ್ನ ಪುಣ್ಯಾಬ್ಧಿಯೇ
ಏನೆನ್ನುತ್ಸವಮೇ ವಿಳಾಸನಿಧಿಯೇ ಏನೆನ್ನ ಸೌಂದರ್ಯಮೇ
ನಾನಾಪರ್ವತದೊಳ್ ವನಪ್ರಕರದೊಳ್ ಸಂಪೂರ್ಣಕಾಸಾರದೊಳ್
ನೀನೇಕಿಂತಿರಲೇಕೆ ತಾಯೆ ಎನುತುಂ ಬಂದಪ್ಪಿಕೊಂಡಪ್ಪಿದಳ್ ೧೧೯

---

೧. ಪವತಳಾವಧಾರುರೆಯೆನುತುಂ (ದಾ.) ೨. ಬಂ (ಓ) ೩. ಪೂರ್ಣೆ (ಅ.) ೪ ಪರೀಕ್ಷಿಸುತುಂ (ಅ.)

ಇಂತು ನೋಲೆಯೊಡನೆ ಕಣ್ ತೊಱೆಯೆ ಪುಳಕದೊಡನೆ ಗದ್ಗದಂ ಪೊಣ್ಮೆ ಸ್ವೇದದೊಡನೆ ಕಂಪನಂ ಕೊನರೆ ಸಿಂಹಪೀಠದ ಸಿಂಗರದ ಶಿಶುವಂ [1]ಮೊಗೆದಪ್ಪಿ ತೆಗೆದಪ್ಪಿ[1] ಮೂರ್ಧಾಘ್ರಾಣಮಂ ಮಾಡಿ ಮೊಲೆಯೂಡಿ ಮೇನೆಯುಂ ಗಿರಿರಾಜನುಂ ಕಣ್ ತೀವಿ ನೋಡಿ ಮೆಯ್ ತೀವಿಯಪ್ಪಿ ಮನಂ ತೀವಿ ನೆನೆಹಿನೊಳಿಟ್ಟು ಶಶಿಕಲೆಯಂ ಸಲಹುವಂತೆ ಸೌಕುಮಾರ್ಯಮಂ ಸುಯಿಧಾನಂ ಮಾಳ್ಪಂತೆ ಸೊಬಗಂ ಸಂವರಿಸುವಂತೆ ಬೆಳ್ದಿಂಗಳಂ ಬಣ್ಣವಿಡುವಂತೆ ಭೋಗಮಂ ಸಾಗಿಸುವಂತೆ ಚೆಲ್ವಂ ಚಮತ್ಕರಿಸುವಂತೆ ಸಾಹಿತ್ಯಮಂ ಸಯ್ತಿಡುವಂತೆ ಪ್ರಾಣಮಂ ಪರಿರಕ್ಷಿಪಂತೆ ಜ್ಞಾನಮಂ ಬಳೆಯಿಸುವಂತೆ ಶಾಂತಿಯಂ ಕಾಂತಿಯಿಡುವಂತೆ ಸತ್ಯಮಂ ಸಂತವಿಡುವಂತೆ ನಿತ್ಯಮಂ ಪ್ರತ್ಯಕ್ಷಮಂ ಮಾಳ್ಪಂತೆ ಪುಣ್ಯಮಂ ಪುಟವಿಡುವಂತೆ ಮುಕ್ತಿಯಂ ಮೂರ್ತಿಗೊಳಿಸುವಂತೆ ಪಾರ್ವತಿಯಂ ಸಲಹುತ್ತುಮಿರೆಯಿರೆ,

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೆ ಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೨೦

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ಹೈಮವತೀ ಶೈಶವವರ್ಣನಂ ತೃತೀಯಾಶ್ವಾಸಂ.



೧—೧. ಮೊಗೆದೆತ್ತಿ ತೆಗೆದಪ್ಪಿ ಜಗಿಯಪ್ಪಿ ( ಬಿ. )

# ಚತುರ್ಥಾಶ್ವಾಸಂ

## ಪಾರ್ವತೀಯೌವನ ರಾತ್ರಿವಿಹಾರವರ್ಣನಂ

ಶ್ರೀಸಕಳಸುರಮುನೀಶ್ವರ-
ವಾಸವಹರಿಕಮಲಪುತ್ರಪೂಜಿತಚರಣಂ
ಭಾಸುರತೇಜಂ ಭಕ್ತಿವಿ-
ಳಾಸಮನೆಮಗೀಗೆ ಹಂಪೆಯ ವಿರೂಪಾಕ್ಷಂ ೧

ಶಿವಶಿವ ನಳನಳಿಸುವ ಶೈ-
ಶವದೊಳ್ ಬಳೆಯುತ್ತುಮಿರ್ಪ ಗಿರಿಜೆಗೆ ರೂಪೋ-
ತ್ಸವದೊಡನೆ ಮೆಱೆವ ದಶಪ-
ರ್ವವದಾಯ್ತುಲರ್ಗಣೆಗೆ ಕೂರ್ಪು ಕೂಡುವ ತೇಜದಿಂ[1] ೨

ಇಂತಾಗೆ ಮೇನೆಯುಂತತ್-
ಕಾಂತನುಮತಿಹರ್ಷಪುಳಕಯುತರಾಗುತ್ತುಂ
ಮುಂತಿರ್ದ ತನುಜೆಯಂ ಮನ-
ದಿಂ ತೂಪಿಱಿಯುತ್ತೆ ತಮ್ಮೊಳೊಲ್ದಿಂತೆಂದರ್ ೩

ಅನವದ್ಯಂ[2] ಚರಿತಂ ಮು-
ನ್ನಿನ ಪರಿ ತಾನಲ್ಲ ಬಾಲ್ಯಮಿಾ ಪೋದುದೆ ಯೌ-
ವನಮಿಾ ಸಾರ್ದುದೆ ಬಣ್ಣಿಸು-
ವನ ಜಾಣ್ಮೆಗತರ್ಕ್ಯಮತುಳಮನುಪಮಮಧಿಕಂ ೪

ಚಂಪಕ.

ನಗೆ ನಸುಲಜ್ಜೆಯೊಳ್ ತೊಡರಲಿರ್ದುದೆ ಬೆಲ್ನಡೆ[3] ಮಾಂದ್ಯಭಾವದೊಳ್
ಪುಗಲಿದೆ ಬಾಸೆ ಸಾಲಱಿಪಲಿರ್ದುದೆ ಸೂಸುವ ನೋಟವಾಸೆಯೊಳ್
ಮಿಗಲಿದೆ ತತ್ಕುಚಂ ನಿಜದ ಸೀಮೆಗೆ ರೇಖೆಯನೊತ್ತಿ ಲಜ್ಜಿಸಲ್
ಬಗೆದಿಪೆ ಯೌವನೋದಯಮೊ ಬಾಲ್ಯವಿಮೋಚನಮೋ ಭವಾನಿಯಾ ೫

---

೧. ತೇಜದೊಳ್ (ಅ). ೨. ಅನವದ್ಯಚರಿತೆಯುಂ (ಅ.); ಅನವದ್ಯಚರಿತದಿಂ (ಸೆ. ಗ.). ೩. ಮೆಲ್ನಡೆ ( ಅ. ); ಬಲ್ನಗೆ ( ಮ. ).

ಅಳಕಂ ತೆಱಪುಗೊಡಲ್ಕಿವೆ
ತಿಳಕಕ್ಕೆ ತದಾಸ್ಯಬಿಂಬಮಾದರ್ಶದೊಳಂ
ಪೊಳೆಯಲಿದೆ ನಾಭಿಮಂಡಲ-
ಮೊಳೆವುಗಲಿದೆ ನೋಡು ಮೇನೆಯಂಬಿಕೆಯಿರವಂ ೬

ದಂತಂ ಮುಸುಂಕುಗಳೆಯ-
ಲ್ಕಾಂತಿವೆ ನಡು ತನುವನೆಳಸಲಿದೆ ನುಡಿ ಮೌನ-
ಪ್ರಾಂತಮನೊತ್ತುಗೊಳಲ್ಕಿದೆ
ಕಾಂತಿ ಶರೀರಮನಮರ್ಚಲಿದೆ ಪಾರ್ವತಿಯಾ ೭

ಎಂದಿಂತು ಮಗಳ ವಯಸ್ಸಂಧಿಯಂ ವಯಃಪರಿಣತರಪ್ಪ ಮಾತಾಪಿತೃಗಳ್[೧] ಬಣ್ಣಿಸುತಿರ್ಪಿನಮನುಕ್ರಮದಿಂ ಪಲಕೆಲವು ದಿನಕ್ಕೆ ಬನಮಂ ಸಹಕಾರಂ ಸಹಕಾರಮಂ ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪನಂ ನನೆಗೆಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ

ನವಕುಚಕಳಶಂಗಳಿನೊ-
ಪ್ಪುವ ಮುಖದರ್ಪಣದಿನಳಕತೋರಣದಿಂ ಪೊ-
ಣ್ಮುವ ಮುಡಿಗುಡಿಯಿಂದ ಮಿ-
ಕ್ಕುವಯುವದಿಂಗದಜೆ ಯೌವನಮನಿದಿಗೊಂಡಳ್ ೮

ಎಂಬಂತೆ ತೀವಿ ಪರ್ವಿದ
ಚುಂಬಿತಮುದಿತೋದಿತಪ್ರಕಾಶಿತಗಿರಿಶಾ-
ಲಂಬಿತಗಿರಿಜಾಯೌವನ-
ಮಂ ಬಣ್ಣಿಪೊಡುರಗಖಚರಭೂಚರರಳವೇ ೯

೧. ತಾಯ್ತಂದೆಗಳ್

ಶರ್ವಾಣಿಯ ಸೌಂದರ್ಯಮ-
ನೊರ್ವಂ ಬಣ್ಣಿಸುವೆನೆಂಬವಂ ಗಾಂಪಂ ಪ-
ನ್ನಿರ್ವರ್ ಭಾರತಿಯರ್ ಸಾ-
ಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ ೧೦

ಮತ್ತೇಭ.

ಮದಮುಂ ವಿಭ್ರಮುಮುಂ ವಿಲಾಸದೊದವಂ ಸೌಂದರ್ಯಮುಂ ಸೌಖ್ಯಮುಂ
ಸದಲಂಕಾರತೆಯಂ ಸಲಕ್ಷಣಮುನಾಂತಿರ್ದಂಬಿಕಾಯೌವನಂ
ಪದೆಪಿಂ ಪೇಳ್ವೊಡದತ್ಯನೂನಪದಮತ್ಯಾಶ್ಚರ್ಯಮತ್ಯುಜ್ವಲ-
ಪ್ರದಮತ್ಯೂರ್ಜಿತಮತ್ಯಸಾಧ್ಯಗುಣಮತ್ಯಾನಂದಮತ್ಯುನ್ನತಂ ೧೧

ಅತಿಮಧುರಮತಿಮನೋಹರ-
ಮತಿಮಂಗಳಮತಿವಿಚಿತ್ರಮತಿಬಂಧುರಮುಂ-
ತತಿಸಂಭ್ರಮಮತಿವಿಭ್ರಮ-
ಮತಿಯೌವನಮತಿವಿಲಾಸಮತಿ ಪಾರ್ವತಿಯಾ ೧೨

ಮತ್ತಮಾ ಪಾರ್ವತಿಯ ನವಯೌವನಂ ವಸಂತನಂತೆ ರಾಗೋದಯಂ ಮಕರಧ್ವಜನ ಮತ್ತಗಜದಂತೆ ಮಂದಯಾನಂ ಕಂದರ್ಪನ ಶಿಳೀಮುಖಕಳಾಪ-ದಂತೆ ಜಗನ್ಮೋಹನಂ ಝಷಕೇತನನಿಕೇತನತೋರಣರತ್ನಸ್ತಂಭಂಗಳಂತೆ ಕಾಂತಿ-ಮಯಂ ಶಶಿಕಾಂತಕೃತಕಾಚಳದಂತೆ ನಿರ್ಮಳೀಕೃತಂ ಕ್ಷೀರಾಬ್ಧಿಯ ತರಂಗದಂತುತ್ತ ರೋತ್ತರಂ ಕಮಲಾಕರದಂತೆ ಪ್ರಸನ್ನಗಭೀರಂ ಬಿಸಜನಾಳದಂತೆ ಭುವನಾಲಂಕಾರಂ ವನಲತೆಯಂತೆ ಸುಕೋಮಲಂ ಸುವರ್ಣಕಳಶದಂತೆ ರಮಣೀಯಂ ಸುರದ್ರುಮ-ಶಾಖೆಯಂತೆ ಸರ್ವವಾಂಛಿತಫಲಪ್ರದಂ ಕಂಬುವಿನಂತೆ ತ್ರಿರೇಖಾನ್ವಿತಂ ಪೂರ್ಣ-ಚಂದ್ರನಂತೆ ಕಲಾಭರಿತಂ ವ್ಯೋಮದಂತೆ ಘನಚಿತ್ರಮೆನಿಸಿರ್ದುದಂತುಮಲ್ಲದೆಯುಂ,

೧. ಬಣ್ಣಿಪ್ಪೆ (ಸಿ.) ೨-೨ ಗಾಂಪಂ ತಾ। ನಿರ್ವರ್ (ಕ. ಪು. ಗೊ.); ತಾಂ ಗಾಂಪಂ। ಗೀರ್ವರ (ಬಿ. ಕೊ.)

ತೀವಿದ ಜವ್ವನಮಂ ಪರಿ-
ಭಾವಿಸೆ ಮಾಧುರ್ಯಚರಿತಮೆಡೆಗೊಂಡುದು ಸದ್-
ಭಾವಂ ಚಂದ್ರಾಭರಣನ
ಜೀವಂ ಬಣ್ಣಿಪ್ಪನಾವನವನೇ ದೇವಂ ೧೩

ಅದೆಂತೆಂದೊಡೆ,

ಮನದಾಸೆ ವದನದೊಳ್ ಲೋ-
ಚನದೊಳ್ ನುಡಿ ನಗೆ ಕಪೋಲದೊಳ್ ಕೋಪಂ ಪು-
ರ್ಬಿನೊಳಱವು ಬುದ್ಧಿಯೊಳ್ ಭಾ-
ವನೆ ಚಿತ್ತದೊಳಮರ್ದುವಂಬಿಕೆಗೆ ಯೌವನದೊಳ್ ೧೪

ಮಹಾಸ್ರಗ್ಧರೆ. [ಸಾರ್ದುದೆಯ್ದೆ

ನುಡಿಯೊಳ್ ಜಾಣ್ ನೋಟದೊಳ್ ವಕ್ರತೆ ಪೊಸನಡೆಯೊಳ್ ವಿಭ್ರಮಂ
ತ್ತಡಿಯಿಟ್ಟತ್ತಾಹ ಕರ್ಣಾಮೃತಮತಿರುಚಿರಂ ಕಣ್ಣ ಪುಣ್ಯಂ ದಿಟಕ್ಕಿ-
ರ್ಮಡಿ ವಾಣೀದೇವಿಗಂ ನೂರ್ಮಡಿ ಕುಸುಮಶರಕ್ಕಂಜೆವಿಂಡಿಂಗೆ ಸಾಸಿ-
ರ್ಮಡಿ ಸಾಹಿತ್ಯಂ ವಿಳಾಸಂ ಗಮಕಮಮರ್ದುದಾರ್ಯಾಂಗದೊಳ್ ಕಣ್ಗೆ ಚಿತ್ರಂ ೧೫

ಇಂತೊಪ್ಪುವ ನವಯೌವನದೊಳ್ ಸಕಲಲೀಲಾವಿಲಾಸೆಯಪ್ಪ ಪಾರ್ವತೀದೇವಿ ನಲವಿಂ ಜಲಕ್ರೀಡೆಗೆಂದು ಷೋಡಶಸಹಸ್ರವಿಳಾಸಿನಿಯರ್ವೆರಸು ಕೇಳೀವನಮಂ ಪುಗುತರ್ಪಾಗಳ್

ಚಂಪಕ

ವಿದಳಿತಪದ್ಮಸೌರಭಕೆ ಸಂದಣಿಗೊಳ್ವ ಮಧುವ್ರತಪ್ರತಾ-
ನದಿನೆಸೆವುತ್ಪಳಪ್ರಕರದೊಳ್ ನೆರೆ ಸಿಲ್ಕಿ ಜಿನುಂಗುತಿರ್ಪ ಷ-
ಟ್ಪದಶಿಶುವೃಂದದಿಂ ಕಮಲತಂಡುಲಮಂ ಕೊಳುತಿರ್ಪ ಹಂಸೆಯಿಂ
ಮದನಸುಖಾಬ್ಧಿಯೊಳ್ ನೆರೆವ ಚಕ್ರದಿನೊಪ್ಪುವುದೊಂದು ಪೂಗೊಳಂ ೧೬

೧. ಭಂತ (ನಾ.)

ಮತ್ತೇಭ.

ಕೊಳನಂ ಕಂಡು ವಿಳಾಸಿನೀನಿಕರಮುದ್ಯಚ್ಚಂದನಂ ಕುಂಕುಮಂ
ವಿಳಸನ್ನೂತನಪುಷ್ಪರಾಜಿ ಮೃಗನಾಭಿವ್ರಾತಮಂ ತಂದು ನಿ-
ರ್ಮಳಕಾಸಾರದೊಳೊಂದುಗೂಡಿ ಶಿವೆ ಬಾ ಸರ್ವಜ್ಞೆ ಬಾ¹ ದೇವಿ ಬಾ
ಕಳನಾದಪ್ರಿಯೆ ಬಾರೆನುತ್ತೆ ಕರೆದರ್ ಶರ್ವಾಣಿಯಂ ಜಾಣೆಯರ್ ೧೭

ಅಂತು ಕರೆಯೆ,

ವನಲಕ್ಷ್ಮಿ ಕೆಯ್ಗುಡುತ್ತಿರೆ-
ಯನಸೂಯಾದೇವಿಯಾದಿಯಾದ²ಂಗನೆಯರ್
ಜನನಿ ಜಗಜ್ಜೀವನೆ ಮೆ-
ಲ್ಲನೆ ಪಾಯವಧಾರು ದೇವಿಯೆನೆ ನಡೆತಂದಳ್ ೧೮

ನೇವುರದ ಮುದ್ರಿಕೆಯ ಹಾ-
ರಾವಳಿಗಳ ಮಧುರನಾದಮಬ್ಜಾಕರಮಂ
ತೀವುತ್ತಿರೆ ಸಕಲಕ್ರೀ³-
ಡಾವಾರಿಧಿ ಎಳಸಿ ಬಳಸಿ ಕೊಳನಂ ಪೊಕ್ಕಳ್ ೧೯

ತೊಳಗುವ ವಿಮಳಾಕಾಶದೊ-
ಳೆಳವೆಱೆ ಪುಗುವಂತೆ ಮುಂತೆ ನಿ⁴ರ್ಮಳಶಶಿಮಂ-
ಡಳದಧಿದೇವತೆ ಜೆಲ್ದೀ-
ಗಳೊಳಗೆ ಪುಗುವಂತೆ ಪೊಕ್ಕಳಂಬಿಕೆ ಕೊ⁵ಳನೊಳ್ ೨೦

ಗಿರಿಜೆ ಶಶಿವದನೆ ಕೊ⁶ಳನಂ
ಭರದಿಂ ಪುಗೆ ನೆಯ್ದಿಲೆಯ್ದಿದುವು ವಿಕಸನಮಂ
ವಿರಹಮನಾಂತುವು ಕೋಕಂ
ಸರಸಿರುಹಂ ಮುಗಿದುವರರೆ ಪಗಲೊಳ್ ಚಿತ್ರಂ ೨೧

---

೧. ರಾಣಿಯರ್ ( ಮ. ಬ. ಸೆ. ಗ. ಓ. ಯು. ) ೨. ದಾ ಸ್ತ್ರೀಯರ್ ( ಬ. ದಾ. ಅ. ಗೊ. )
೩. ಬಂದು ( ಅ. ಯು. ಗೊ. ) ೪. ನಿಶ್ಚಳ ( ಬ. ) ೫. ಕೊಳನಂ ( ಕಾ. ಬೆ. ಅ. ಡ. )
೬. ಕೊಳನೊಳ್ ( ಯು ); ಕೊಳದೊಳ್ ( ಅ. ಡ. )

ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ[೧] ತಿಲಕದ ಲಲನೆಯರುಂ[೧] ಪೂದುಱುಂಬಿನ ಪುಣ್ಯವತಿಯರಂದುಗೆಯ ಭಂಗಿಯರುಂ[೧] ನಗೆಗಣ್ಣ ನೀರೆಯರುಂ[೧], ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ ನತಮುಖಿಯರ್ ಸನ್ನದ್ಧೆಯರಾಗಿ

ಬಗೆಮಿಗೆ ಸತಿಯರ್ ಜಲಕೇ-
ಳಿಗೆ ಚಿತ್ತಂಗೊಟ್ಟು ದೇವಿಯವಧಾರೆಸುತುಂ
ಪುಗುತುಂ ಮಿಗುತುಂ ನಗುತುಂ
ಸೊಗಯಿಸಿದರ್ ಸೆಣಸಿದರ್ ಸಮಂತಿದಿರಾದರ್ ೨೨

ಅಳಿಗಳಳಕಂಗಳೊಡನು-
ತ್ಪಳಮಕ್ಷಿಗಳೊಡನೆ ಕಮಳಮಾಸ್ಯದೊಡನೆ ನಿ-
ರ್ಮಳಚಕ್ರಂ ಕುಚದೊಡನ-
ಗ್ಗಳಿಸಿದುವಿದಿರಾದುವಮರ್ದುವರ್ಬಿದುವಾಗಳ್ ೨೩

ಮೃದುಕರತಳದಿಂದಬಲೆಯು-
ರುದಕಂಗಳನೆತ್ತಿ ಸುತ್ತಿ ಸೂಸುವ ಪದದೊಳ್
ಮುದದಿಂ ಕುಡುವಂತಿರ್ದುದು
ಮೊದಲೊಳ್ ಮದನಂಗೆ ಮೆಱೆವ ರತ್ನಾಂಜಲಿಯಂ ೨೪

ಓರೊರ್ವರೊಳೋರೊರ್ವರ್
ವಾರಿಗಳಂ ಚೆಲ್ಲುವಲ್ಲಿ ಜಲದೇವತೆಯರ್
ಕಾರೊಳಗಾಡುವೊಲಿರ್ದುದು[೨]
ಹಾರಯ್ಸುತೆ ನಲಿಯುತಾಲಿವರಲೋಕುಳಿಯಂ ೨೫

ಮುತ್ತಮಲ್ಲದೆ,

೧. ಯರ್ ( ಅ. ) ೨. ಕಾರೊಳಗಾಡುವವೊಲ್ಕೆ ( ವಾ ); ಕಾರೊಳಗಾಡುವೊಲಿರ್ದ್ ( ಪಿ. ಪ. ಕೊ. )

ಅಳಕಾಳಿಗಳಿಂ ನಯನೋ-
ತ್ಪಳದಿಂ ಮುಖಕಮಳದಿಂದೆ ಕುಚಚಕ್ರದಿನು-
ಜ್ಜ್ವಳಕಾಂತಿಸಲಿಲದಿಂದಾ
ಕೊಳನೊಳ್ ಕೊಳನಾಡುವಂತಿರೊಪ್ಪಿದರಾಗಳ್ ೨೬

ಅಲ್ಲದೆ ತಮ್ಮೊಳೆಱೆವಚ್ಚಿಕೊಂಡು ಮತ್ಸರಂಗೆಯ್ದು

ಕಮಳದಳಂಗಳೊಳಗೆ ಕುಂ-
ಕುಮಜಳಮಂ ತೀವಿ ಚಕ್ರಕುಚೆಯರ್ ಚೆಲದಿಂ
ವಿಮಳೇಂದುಮುಖಿಯರಂ ವಿ-
ಭ್ರಮದಿಂ ನೆಡೆದಿಟ್ಟು ಕೆಱೆದರೆಳವಿಸಿಲೊಳ್ಪಂ ೨೭

ಇಡೆ ಶಶಿಮುಖಿಯರ್ ಕಂಡಾ-
ಗಡೆ ಧವಳೋತ್ಪಳದ ನಡುವೆ ಚಂದನರಸಮಂ
ಬಿಡೆ ತೀವಿಕೊಂಡು ನಡೆನಡೆ-
ದೊಡನೊಡನಿಟ್ಟಿಟ್ಟು ಜೊನ್ನಮಂ ಪಸರಿಸಿದರ್ ೨೮

ಇಂತಾಡುವಲ್ಲಿ

ಅಂಬುವಿನೊಳಗೆ ನಿಜಪ್ರತಿ-
ಬಿಂಬಮನೀಕ್ಷಿಸುತೆ ತರುಣಿ ಪೋಗದಿರೆನುತುಂ
ಬೆಂಬತ್ತಿ ನಡೆದು ಕಾಣದೆ-
ಡಂಬಲನಂ ನೋಡಿ ಮುಗ್ಧೆ ನಗಿಸಿದಳಾಗಳ್ ೨೯

ಮಡದಿಯರಾಡುವ ಪದದೊಳ್
ಸಡಿಲ್ದ ಘನಕುಂತಳಾಳಿ ಪೋಲ್ತುದು ಚಲದಿಂ-
ದುಡುಪತಿಬಿಂಬಂಗಳ ಬೆಂ-
ಬಿಡದೆಯ್ದುವ ರಾಹುಮಂಡಲಂಗಳ ತೆಱನಂ ೩೦

೧. ಭರದಿಂ ( ಶಾ. ಕ. ದಾ. ಅ. ಗೊ. ಡ. ) ೨. ದಡಿಯಿಟ್ಟು ( ಯು. ) ೩. ಕಂಡರೆಳ (ಶಾ); ಕಸಿದರೆಳ ( ಕ. ) ೪. ತೆಜದಿಂ ( ಅ. ಗೊ. ಡ. ಗ. ಯು. )

ಉರವಣಿಸಿ ಚೆಲ್ಲಿ ಸತಿಯರ್
[1]ಕರಂಗಳಿಂ ವದನವೃಂದಮಂ ಮುಚ್ಚಿರೆ ತ-
ಳ್ತರವಿಂದಂ ಶಶಿಬಿಂಬೋ-
ತ್ಕರಮಂ ಮುತ್ತಿದುದೆನಿಪ್ಪ ತೆಱನಾಯ್ತಾಗಳ್ ೩೧

ನೋಡುವ ಪಾರ್ವತಿ ಮುದಮಂ
ಕೂಡುತ್ತಿರೆ ತುಂಬಿವಿಂಡು ಪಾಡುತ್ತಿರೆ ತು-
ಳ್ದಾಡಿದರಿಟ್ಟಾಡಿದರೀ-
ಸಾಡಿದರನುದ್ರಾಡಿದರ್ ಸರೋಜಾನನೆಯರ್ ೩೨

ಇಂತಾಡುವ [2]ಸತಿಯರ್ಗೆ[2] ಸಂತಸದಿಂ ಮುಯ್ಯಾಂತು

ಈ ತೆಱದಿಂ ಜಲಕೇಳಿಯೊ[3]-
ಳೋತು ಮನಂಗೂಡಿ ನೋಡಿಯಾಡುತ್ತೆ ಜಗ-
ನ್ಮಾತೆ ಗಿರಿಜಾತೆ ಸುಖಸಂ-
ಭೂತೆ ನುತಖ್ಯಾತೆ ಸರಸಿಯಂ ಪೊಱಮಟ್ಟಳ್ ೩೩

ಅಂತು ಪೊಱಮಟ್ಟು ನವ್ಯದುಕೂಲಮನುಟ್ಟು ದಿವ್ಯಾಭರಣಮಂ ತೊಟ್ಟು ಸಂತಸಮಂ ಮುಂತಿಟ್ಟು ಸಕಳಕಳೆಗಳನೊಚ್ಚತಂಗೊಂಡು ನಿಶ್ಚಲಿತಚಿತ್ತೆ-ಯುಚ್ಚಾಸನಮನೇಱಿ ವಿಲಾಸಿನಿಯರ್ ಕೆಲಬಲದೊಳ್ ನೆಲನುಗ್ಗಡಿಸೆ ಪುರಾಭಿ-ಮುಖಿಯಾಗಿ [4]ಬರುತ್ತುಮಿರೆ,

ಇತ್ತಲ್ ತಮ್ಮೊಳ್ ನುಡಿದರ್
ವೃತ್ತಸ್ತನೆ ಗಿರಿಜೆಗುತ್ತರೋತ್ತರರೂಪಂ-
ಬೆತ್ತ [5]ಘನಯೌವನಂ ಸಾ-
ರುತ್ತಿರ್ದಪುದೀ ವರಾಂಗನೆಗೆ [6]ವರನಾರೋ ೩೪

೧. ಕರಂಗಳೊಳ್ ( ಯ ); ಕರಕಂಜದೆ ( ಅ. ) ೨–೨. ಸಕಲಸ್ತ್ರೀಯರ್ಗೆ ( ದಾ. ಗೊ. ಗ. ) ೩. ಯ । ನೋತು ( ಅ. ) ೪. ಬರುತ್ತುವಿರೆಯಿರೆ ( ದಾ. ಅ. ಗೊ. ) ೫. ಬೀ ( ಅ. ) ೬. ನಾವಂ ( ಯ. ದಾ. ಅ. ಗೊ. )

ಈ ರೂಪಿಂಗೀ ಯೌವನ-
ಕೀ ರಮಣೀಯಾಂಗವೆತಿಗೆ ಮಿಗೆ ಸೌಂದರ್ಯ-
ಕ್ಕೀ ರಾಜಿಪ ಗಿರಿಜೆಯ ವಿ-
ಸ್ತಾರಕ್ಕಂ ವರನನಿಂದುಧರನೇ ಬಲ್ಲಂ ೩೫

ಎಂದಿಂತು ನುಡಿಯುತ್ತೆ ಶರ್ವಾಣಿಯ ರೂಪಾತಿಶಯಕ್ಕೆ ಬೆಱಗಾಗಿ ಮೇನೆಯ ತಪಕ್ಕೆ ದಾಕ್ಷಾಯಿಣಿ ಕರುಣಿಸಿ ಬಂದಳೆಂಬುದನೆತ್ಯಾಶ್ಚರ್ಯದಿಂ ಮಱೆದು,

ತಿಳಿಯದೆ ಮೇನಾಸತಿಯುಮ-
ಚಳಪತಿಯುಂ ಚಿಂತಿಸುತ್ತುಮಿರೆಯಿರೆ ತೋಱು-
ತ್ತ್ರುಳವಲ್ಲದೆ ನಳನಳಿಸುತೆ
ತಳತಳಿಸುತೆ ಪೊಳೆದು ಬಳೆವ ಬೆಳಗಾಗಸದೊಳ್ ೩೬

ಆ ಬೆಳಗಿನೊಳಗೆ,

ಚಂಪಕ

ಅಮೃತಮಯೂಖಮಂಡಲದಿನೇಳ್ತರುತಿರ್ಪ ಶಶಾಂಕಮೂರ್ತಿಯೋ
ಅಮರನದೀಪ್ರವಾಹದೊಳಗಿಂದೊಗೆತರ್ಪ ವಿಶಾಲಪುಣ್ಯಮೋ
ಪ್ರಮುದಿತಶೈವಕೀರ್ತಿ ಬರುತಿರ್ಪುದೋ ಎನೆ ಬಂದನಳ್ಕಱಿಂ
ವಿಮಳವಿಶಾರದಂ ಘನಶರದ್ಘನಸನ್ನಿಭನೊಲ್ದು ನಾರದಂ ೩೭

ಇಳಿವ ಜಡೆ ಬಳೆವ ವೀಣಾ-
ಕಳಸ್ವನಂ ಭಸಿತಗಾತ್ರಮುಜ್ವಳತೇಜಂ
ವಿಳಸನ್ಮಂಜುಳಮುಖಮಂ-
ಡಳಚಂದ್ರಿಕೆಯೊಪ್ಪೆ ನಾರದಂ ನಡೆತಂದಂ ೩೮

ಬರೆ ಗಿರಿಪತಿಯುಂ ಸತಿಯುಂ
ವರಮುನಿಗತಿವಿನತರಾಗಿ ಭದ್ರಾಸನದೊಳ್
ಭರದಿಂ ಕುಳ್ಳಿರಿಸುತ್ತುಂ
ಚರಣಂದೊಳೆಯುತ್ತೆ ತೀರ್ಥಜಳಮಂ ತಳೆದರ್ § ೩೯

೧. ರುಚಿಗೆ ( ಡಾ. ) ೨. ನತ್ಯೈಶ್ವರ್ಯದಿಂ ( ಯ. ) ೩. ನವಶರದ್ಘನ ( ಹ. ಗ. ಓ. ); ಬರದ ನೀರದ ( ಸೆ. ) ೪. ತೇಜೋ ( ಅ. ) § ೩೯ ನೆಯ ಪದ್ಯವು ಬ. ಪ್ರತಿಯಲ್ಲಿಲ್ಲ.

ಅಂತು ತಳೆದು,

ಗುರುಮೂರ್ತಿ ಶೈವನಿಧಿ ಶಂ-
ಕರಮೂರ್ತಿ ಕೃಪಾಪರೈಕವರಶಾಂತಿ ಸುಧಾ-
ಕರಮೂರ್ತಿ ದೇವ ನಿಮ್ಮಯಿ
ಒರವಿಂದೆ ಕೃತಾರ್ಥರಾದೆವೆಂದಿಂತೆಂದರ್ ೪೦

ಮತ್ತೇಭ.

ಬರವೆಂತಾದುದು ನಾಕಲೋಕಸುಖಮಂ ಬಿಟ್ಟೀ ಧರಾಮಂಡಲ-
ಕ್ಕೆರದಿಂದೆಮ್ಮಯೆ ಪುಣ್ಯವೆಮ್ಮ ಜನನಂ ಸಾಫಲ್ಯವೆಮ್ಮಿಂದೆ ವಿ-
ಸ್ತರಸೌಖ್ಯಾಕರರಾರೆನುತ್ತೆ ನಲವಿಂ ಬಿನ್ನಯ್ಸುತಿರ್ಪನ್ನೆಗಂ
ಬರುತಿರ್ದಳ್ ಗಿರಿಜಾತೆ ಷೋಡಶಸಹಸ್ರಸ್ತ್ರೀಪರಿಸ್ಪಂದದೊಳ್ ೪೧

ಮಹಾಸ್ರಗ್ಧರೆ.

ಇದು ವಿದ್ಯುನ್ಮಾಲೆಯೋ ಚಂದ್ರಮನ ಕಮನಪೀಯೂಷದೀಪ್ತಿಸ್ವರೂಪೋ
ಮದನಾಸ್ತ್ರವ್ರಾತಮೋ ನೂತನವನಲತಿಕಾನೀಕಮೋ ನಾಕಲೋಕಾ-
ಸ್ಪದನಾರೀಕ್ಷೀರವಾರಾಶಿಯೊ ಸುರುಚಿರ ಸೌಂದರ್ಯಸಂಘಾತಮೋ ನೋ-
ಡಿದು ತಾನೆಂಬಂತೆ ತೀವಿರ್ದಬಲೆಯರೊಳಗಿರ್ದಂಬಿಕಾಕಾಂತೆ ಬಂದಳ್ ೪೨

ಚಂಪಕ

ಸರಸಿಜನೇತ್ರೆ ಪುಣ್ಯಮಯಗಾತ್ರೆ ಸದಾಶಿವನಂಗಪಾತ್ರೆಯ-
ತ್ಯುರುತರದಾನಿ ನಿರ್ಮಲಭವಾನಿ ನಿರಂತರಮಾನಿ ನವ್ಯಸೌಂ-
ದರವರಮೂರ್ತಿ ಶರ್ವನ ಸುಕೀರ್ತಿ ಮಹೇಶ್ವರನರ್ತಿ ಬಂದಳೊ-
ಪ್ಪಿರೆ ಗಿರಿಜಾತೆ ಲೋಕಜಯಮಾತೆ ಜಗಕ್ಕೆ ವಿನೂತೆಯಳ್ಕಱಿಂ § ೪೩

ಇಂತು ಬಂದು ತಾರೆಗಳ ನಡುವಣ ತಾರಾಪತಿಯ ಕಳೆಯಂತೆ ಲತೆಗಳ ನಡುವಣ ಕಲ್ಪಲತೆಯಂತೆ ರತ್ನಂಗಳ ನಡುವಣ ಚಿಂತಾರತ್ನದಂತೆ ಧೇನುಗಳ ನಡುವಣ ಕಾಮಧೇನುವಿನಂತೆ ರುದ್ರಾಕ್ಷಿಗಳ ನಡುವಣೇಕಮುಖರುದ್ರಾಕ್ಷಿಯಂತೆ ಸಕಲಸ್ತ್ರೀಯರ ನಡುವೆ ಗಿರಿರಾಜತನೂಜೆ ವಿರಾಜಿಸುತಿರ್ದು, †

೧. ಪರಾಪರೈಕ (ಶಾ.ಕ.ಸ.) ೨. ದಿರವಂ (ಶಾ.) ೩. ಗೊಲ್ದಂಬಿಕಾ (ಶಾ.ಬ.) ೪. ಶಾಂತಿಗಳ (ಶಾ.ಬ.)
§ ಈ ಪದ್ಯವು ಬ. ಮ. ಕ. ಪ. ಗ. ಓ. ಪ್ರತಿಗಳಲ್ಲಿಲ್ಲ. † ಈ ವಚನವು ದಾ. ಪ್ರತಿಯಲ್ಲಿಲ್ಲ.

ಸುರುಚಿರಪೂರ್ವಾಚಳದೊಳ್
ಗುರುತರಪೂರ್ಣೇಂದುವುದಯಿಪಂತಿರೆ ರಾತ್ರೀ-
ಶ್ವರವದನೆ ಗಿರಿಜೆ ಭರದಿಂ
ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ ೪೪

ಆ ಸಮಯದೊಳ್,

ಸ್ರಗ್ಧರೆ.

ಕಂಡಷ್ಟಾಂಗಪ್ರಣಾಮಂಬೆರಸು ಹರಿಸದಿಂ ನಾರದಂ ಭೀತಿಯಂ ಕೆಯ್-
ಕೊಂಡಿಷ್ಟಾರ್ಥಪ್ರದೈಕಪ್ರಭೆಗೆ ವಿಭವದಿಂದಂ ನವಾಶ್ಚರ್ಯಪೂರ್ವಂ
ಪಿಂಡೇಳ್ವಾನಂದರೋಮಾಂಚದ ಪೊದಕೆಗಳಂ ತಾಳ್ದು ನಿಂದಿರ್ದು ತಾಯೇ
ಚಂಡಾಂಶುವ್ರಾತತೇಜೋನಿಧಿ ಶರಣೆನುತುಂ ಸ್ತೋತ್ರಮಂ ಮಾಡುತಿರ್ದಂ ೪೫

ಶ್ರೀನಿಧಿ ಶಾಂಕರಿ ಶೈವ-
ಜ್ಞಾನಿ ಸದಾವರದೆ ಭುವನಭರಿತೆ ಭವಾನೀ
ಮಾನಿನಿ ಮಾತೆ ಮಹೇಶ-
ಧ್ಯಾನಿ ಮಹಾದಾನಿ ನೀನೆ ಶರಣೆನುತಿರ್ದಂ ೪೬

ಇಂತಿಂತು ಬಣ್ಣಿಸುತ್ತುಂ
ಮುಂತಿರ್ದಗರಾಜಸುತೆಯನುಚ್ಚಾಸನದೊಳ್
ಸಂತಂ ಬಿಜಯಂಗೆಯ್ಸು-
ತ್ತುಂ ತಣಿಯದೆ ಮತ್ತೆ ನಾರದಂ ನುತಿಗೆಯ್ದಂ ೪೭

ತಾಯೇ ತವರೇ ತ್ರಿಭುವನ-
ದಾಯುವೆ ಜಗದುಸಿರೆ ಜಗದ ಕಣ್ಣೆ ಜಗನ್ನಿ-
ರ್ಮಾಯಾನಿಧಿಯೇ ಸುಧಿಯೇ
ಕಾಯೆನ್ನಂ ಕರುಣದಿಂದೆ ಸಲಹೆನುತಿರ್ದಂ ‡೪೮

---

೧. ದಿಂದಂ (ಅ). ೨. ವ್ರಾತೆ (ಅ). ೩. ವರಸು (ಕ). ೪. ಮಾನಿ (ಶಾ. ದಾ. ಬೆ.) ೫–೬. ಜಗದ ಕಣ್ಣೆ ಜಗದ ನಿ | ರ್ಮಾಯಾ (ಅ); ಜಗದಗಣ್ಯ ಜಗನ್ನಿ | ರ್ಮಾಯಾ (ಯ); ಜಗದ ಕಣ್ಣೇ ತ್ರಿಜಗ | ನ್ನಿರ್ಮಾ (ಕ); ಜಗದ ಕಣ್ಣೇ ತ್ರಿಜಗ ! ನ್ಮಾಯಾ (ಶಾ. ಡ.). ‡ ೪೮ ಪದ್ಯವು ಓ. ಪ್ರತಿಯಲ್ಲಿಲ್ಲ.

ಎಂದಿಂತಾರ್ತದಿಂ ಸ್ತೋತ್ರಂಗೆಯ್ಯೆ ಕೇಳ್ದು ಕೌತುಕಂದಾಳ್ದು ಗಿರಿರಾಜನುಂ ಮೇನೆಯುಮಿರ್ದಲೆಲೆ ಮುನೀಂದ್ರಾ ನಿಮ್ಮಡಿಗಳಸೊಚ್ಚತಂಗೊಂಡುಚ್ಚಾಸನದೊಳಿರಿಸಿ ಪಾದೋದಕಮನಾದರದಿಂ ಕೊಂಡು ಅತಿಹರ್ಷದಿಂ ಕೃತಾರ್ಥರಾದೆವಲ್ಲದೆಮ್ಮ ಮಗಳ್ಗೆ ನಿಮ್ಮಡಿಗಳ್ ವಂದನಗೆಯ್ವುದತ್ಯಾಶ್ಚರ್ಯವೆಂದಜ್ಞಾನದಿಂ ನುಡಿಯೆ ದಿವ್ಯಜ್ಞಾನಿ ನಾರದಂ ನಸುನಗುತ್ತುಮಿಂತೆಂದಂ

ಸುರರಜೀಯರಿಂದ್ರನಜೀಯುಂ
ಹರಿಕಮಲಜರಜೀಯರಖಿಲಮನುಗಳ್ ಮುನಿಗಳ್
ಕರಮಜೀಯರೆಂದೊಡಗಜೆಯ
ಚರಣಾಬ್ಜಕ್ಕೆಜಗಲಿಳೆಯೊಳಾನೆನಿತಜವಂ[1] ೪೯

ಮಹಾಸ್ರಗ್ಧರೆ.

ನೆವದಿಂದಂ ನಿಮ್ಮ ಪುಣ್ಯೋದರದೊಳೊಗೆದೊಡೀ ಬಾಲೆಯಂ ಪುತ್ರಿಯೆಂಬೊಂ-
ದವಿಚಾರಂ ಬೇಡ ನೀವೇ ಜನನಿಜನಕರಲ್ಲಲ್ಲದಂತಿರ್ಕೆ ತಾಯೇ
ನವರತ್ನಕ್ಕಬ್ಧಿ ಚಿಂತಾಮಣಿಗೆ ನೊರಡಿ ಮುತ್ತಿಂಗೆ ಸಿಂಪಿಂದುವಿಂಗಂ
ರವಿಗಂ ಪೂರ್ವಾಶೆ ಲಿಂಗಕ್ಕವನಿ ಸುಧೆಗೆ ದುಗ್ಧಾಬ್ಧಿ ಪದ್ಮಕ್ಕೆ ಪಂಕಂ ೫೦

ಮತ್ತಮಲ್ಲದೆ,

ಮೇನೆಯೆ ನಿನ್ನ ತಪಕ್ಕತಿ-
ಮಾನಿ ಮಹಾದೇವಿ ಕರುಣದಿಂ ನಿನ್ನುದರ-[2]
ಸ್ಥಾನದೊಳಂ ಜನಿಯಿಸೆ ಸು-[3]
ಜ್ಞಾನಿಯನೆಲೆ ಪುತ್ರಿಯೆಂಬರೇ ಧಾರಿಣಿಯೊಳ್ ೫೧

ಶಿವನ ಸುಧೆ ಶಿವನ ಜೀವಂ
ಶಿವನಾನಂದಂ ಸದಾಶಿವನ ಘನಪುಣ್ಯಂ
ಶಿವನ ಸುಖಂ ಶಿವನ ಮುಖಂ
ಶಿವನಾಯು ಗಿರೀಂದ್ರ ಗಿರಿಜೆಯಂ ಸುತೆಯೆಂಬಯ್ ೫೨

---

೧. ನೇತಜವಂ ( ಅ ). ೨. ನಿಮ್ಮುದರ ( ಬ. ಮ. ). ೩–೩. ಸ್ಥಾನದೊಳೊಗೆದಣೆ ದಿವ್ಯ (ಬ. ಯು. ಅ. ಕೊ. )

ದಕ್ಷನ ಶಿವನಿಂದೆಗೆ ಕನು-
ಲಾಕ್ಷಿ ಮಹಾದೇವಿ ಸೆಡೆದು ನಿಜಯೋಗದೊಳಿಂ-
ತಕ್ಷಯನಿಧಿ ಮೇನೆಗೆ ಕರು-
ಣೇಕ್ಷಣೆಯಾಗುತ್ತೆ ಬಂದುದಂ ಭಾವಿಸಿರೇ ೫೩

ಅದು ಕಾರಣದಿಂ ಮುನ್ನಮೆ
ಮೊದಲಿಂ ಹರನರಸಿ ಗಿರಿಶನರ್ಧಾಂಗಿ ವರ-
ಪ್ರದೆ ವಿರಸೀಶ್ವರನೀಕೆಗೆ
ಮುದದಿಂ ಶಿವನಲ್ಲಿಗಿರದೆ ಕಳಿಪುವುದುಚಿತಂ ೫೪

ಗಿರಿಸುತೆ ಬಳೆವನ್ನೆವರಂ
ಹರನಿರ್ದಪನೊಲ್ದು ಹೇಮಕೂಟಸ್ಥಳದೊಳ್
ಪರಿಪೂರ್ಣಪರಂಜ್ಯೋತಿಃ-
ಸ್ವರೂಪನಿಜಯೋಗಭೋಗರಾಗೋನ್ನತಿಯಿಂ ೫೫

ಎಂದಿಂತಕ್ರ್ಯಮುನಿ ಹಿತೋಪದೇಶಮಂ ಪೇಳ್ದು ಗಿರಿಜೆಯ ಪರಮಲಾವಣ್ಯಾ-
ವಯವಂಗಳಂ ಕಂಡು ನೋಡಲಣ್ಮದೆ ಪೊಡೆಮಡುತ್ತೆ ಮತ್ತಮಿಂತೆಂದಂ,

ಈ ಗಿರಿಜೆಯ ನವಯೌವನ-
ವಿೂ ಗಿರಿಜೆಯ ರೂಪವಿಭವಮಿೂ ಗಿರಿಜೆಯ ಸೌ-
ಭಾಗ್ಯಮಿವೀ ಗಿರಿಜೆಯ ನಿಜ-
ರಾಗಂ ಶಂಕರನ ಚಿತ್ತಮಂ ಚಿಗುರಿಸದೇ ೫೬

ಚಂಪಕ.

ಹರನ ಮನೋಹರಂ ಗಿರಿಜೆಯಾ ನಡೆಯಾ ನುಡಿಯಾ ವಿಳಾಸವೀ
ತರಳಕಟಾಕ್ಷವೀ ಪರಿಮಳಾಕೃತಿಯಾ ದರಹಾಸವೀ ಸುಖಾ-
ವರಣತೆಯಾ ಸಲಕ್ಷಣತೆಯಾ ಸೊಬಗೀ ಮಧುರಸ್ವಭಾವವೀ
ಸುರುಚಿರಕಾಂತಿಯಾ ಹರೆಯವೀ ಸುಕುಮಾರತೆಯಾ ಸುಧಾಮಯಂ ೫೭

೧-೧. ವರನೀಕೆಗೆ ನಿತ್ಯಂ ( ಶಾ ). ೨. ಸ್ಥಾಣುವಿನ ( ಶಾ. ಬಿ. ಅ. ಯ ).

ಮತ್ತೇಭ.

ಉರಮಿಂಬಿಲ್ಲ ಪಯೋಧರದ್ವಯದ ಕೊರ್ಬಿಂಗಾಸ್ಯಮಿಂಬಿಲ್ಲ ಭಾ-
ಸುರನೇತ್ರದ್ವಿತಯಪ್ರಚಾರತೆಗೆ ಬೆನ್ನಿಂಬಿಲ್ಲ ಧಮ್ಮಿಲ್ಲಬಂ-
ಧುರಸೀಮಾವಳಯಕ್ಕೆ ನೋಡ ನಡುವಿಂಬಿಲ್ಲೊಪ್ಪುವೀ ಬಾಸೆಗೀ
ಗಿರಿಜಾಯೌವನಸಂಪದಕ್ಕೆ ತನುವೆಂತಿಂಬಪ್ಪುದೋ ರುದ್ರನಾ ೫೮

ಇಂತೊಪ್ಪುವ ಜವ್ವನೆಯಂ
ಶಾಂತೆಯನಖಿಳೈಕಮಾತೆಯಂ ಶಂಕರನೇ-
ಕಾಂತದ ಸುಖಮಂ ಸ್ತ್ರೀಮಾ
ತ್ರಂ ತನುಜೆಯೆನಿಪ್ಪ ಬಗೆಯನುಳಿ ಗಿರಿರಾಜಾ ೫೯

ನಿನಗಱಿಪಲ್ ಬಂದೆಂ ಶ-
ರ್ವನ ವಧು ಶರ್ವಾಣಿಯೆಂದು ನಗಜೆಯ ನಗರಾ-
ಜನೆ ಕೇಳ್ ಭರದಿಂ ಕೈಲಾ-
ಸನಗಕ್ಕಾಂ ಪೋಪೆನೆಂದು ನಾರದನೆಂದಂ ೬೦

ಎನೆ ಕೇಳ್ದು ಶೈಳರಾಜಂ
ವಿನಯಂಬೆರಸಗಜೆಗಂದು ಕೆಯ್ಮುಗಿಯುತ್ತುಂ
ಮನದೊಳ್ ಬೆಱಗಾಗುತ್ತುಂ
ಘನಶೈವಾಂಬುಧಿಗೆ ನಾರದಂಗಿಂತೆಂದಂ ೬೧

ಶಾರ್ದೂಲ.

ನೀವೆಂದಂತೆ ಭವಾನಿಯಂ ಮಱೆದು ಪುತ್ರೀಭಾವಮಂ ತಾಳ್ದೆವಿ-
ನ್ನೇವೇಳ್ವೆಂ ಮರುಳಾಗುತಿರ್ದೆಮಗೆ ನಿಮ್ಮಾ ಬೋಧೆಯಿಂ ಜ್ಞಾನಸ-
ದ್ಭಾವಂ ಪುಟ್ಟಿದುದಿಂಪಿನಿಂ ಪರಸುತುಂ ಪಂಪಾವಿರೂಪಾಕ್ಷನಿ-
ರ್ವಾಸಕ್ಕಿರದುಯ್ದು ತೋಱಿದಪೆನೀ ಶರ್ವಾಣಿಯಂ ಜಾಣೆಯಂ ೬೨

---

೧. ನಗನಾ। ಘನೆ ( ಯು. ದಾ. ಅ. ಗೊ. ) ೨. ಬೆಱಗುಗೊಳುತ್ತುಂ ( ಅ)

ನೀವಿಂದೆಮ್ಮರಮನೆಯೊಳ್
ದೇವಾರ್ಚನಂ ಗೆಯ್ದು ನಾಳೆ ಪೋಪುದೆನುತ್ತುಂ
ತೀವಿರ್ದ ಮೃದುಮಧುರವಾ-
ಕ್ಯಾವಳಿಯಿಂ ನಾಡೆ ಬೇಡಿಕೊಂಡಂ ಭೂಪಂ ೬೩

ಇಂತು ಬೇಡಿಕೊಳುತ್ತುಮಿರೆ,

ಚಂಪಕ.

ನಗಪತಿಯೆಂದುದಂ ಸಲಿಸಿ ನಾರದನಾತನ ಕೂಡೆ ರುದ್ರನಂ
ಮೃಗಧರಚೂಡನಂ ಶಿವನನರ್ಚಿಸಿ ತತ್ಪರಮಪ್ರಸಾದದಿಂ
ಪೃಗೆ ತಣಿದಿರ್ವರುಂ ಕನಕಪೀಠದೊಳಿರ್ಪಿನಮಿತ್ತಲತ್ತಲಾ
ಖಗನ ತುರಂಗಮೆಯ್ದಲಣಮಿರ್ದುವು ಪಶ್ಚಿಮಪರ್ವತಾಗ್ರಮಂ ೬೪

ಆ ಸಮಯದೊಳ್,

ಅದು ಪೂರ್ವಾಂಗನೆ ಇಡೆ ನೆಗೆ-
ದೊದೆವುತೆ ಬೆಳಬೆಳಗುತೆಯ್ದಿ ಪಶ್ಚಿಮಶೈಲಾ-
ಗ್ರದ ಮೇಲೆ ಬಿಳ್ದ ಮಾಣಿ-
ಕ್ಯದ ಕಂತುಕದಂತಿರೆಸೆದುದರ್ಕನ ಬಿಂಬಂ ೬೫

ಆ ಸಮಯದೊಳ್,

ಚಂಪಕ.

ಅರೆಮುಗಿವಬ್ಜಮುಳ್ಳಲರ್ವ ಕೈರವಮಾಕುಲಿಪಾ ಮಧುವ್ರತಂ
ಕೊರಗುವ ಕೋಕಮುತ್ಸವಿಪ ಜಾರೆಯರೊಂದೆರಡೇಳ್ವ ಮಿಾನ್ಗಳಂ-
ಕುರಿಪ ತಮಂಧಮುಳ್ಳಜಿಗೊಳೆ ಪಕ್ಕೆಗೆ ಸಾರ್ವ ವಿಹಂಗವೀಧಿ ಚೇ
ತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ ೬೬

ಅತ್ತಿತ್ತಂ ಮಿಸುಕದೆ ಮೆ-
ಯ್ವೆತ್ತಿದ ಮನ್ಮಥಸುಖೋತ್ತಮಾಂಗದೊಳಿರುತುಂ
ಮುತ್ತಿನ ಕಾಂತಿಗೆ ಭಯಮಂ
ಪೊತ್ತಿನವಕ್ರಮನೆ ನೋಡಿ ಸುಯ್ದುದು ಕೋಕಂ ೬೭

ಕಾಲ್ಗೆಗೆಯೆ ಬಿಳ್ಪಿನಂ ಮಿಗೆ
ಸಾಲ್ದೆಗೆದುದು ವಿಹಗವೀಥಿ ಮುಗಿಯುತ್ತಬ್ಜಂ
ಜೋಲ್ದುವು ನೊಂದು ರಥಾಂಗಂ
ಕೀಲ್ಪೆಗೆವಪೊಲಗಲೆ ಸಾರ್ದು ಕೊರಗಿದುವಾಗಳ್ ೬೮

ಬಗೆಗುಂದಿ ಚಕ್ರಮಿಥುನಂ
ಮಿಗೆ ನೊಂದೊಂದೊಂದನಗಲಲಾಱದೆ ನೋಟಂ-
ದೆಗೆಯುತ್ತಳಲುತ್ತೊರಲು
ತ್ತಗಲ್ದುವು ಉಱೆ ಪಗಲನರಸಿ ತಿರುಗುವ ತೆಱದಿಂ ೬೯

ಮುಗಿವ ಸರಸಿರುಹಷಂಡಮ-
ನಗಲ್ವ ಚಕ್ರಪ್ರತಾನಮಂ ಕೋಟರದೊಳ್
ಪುಗುವ ವಿಹಂಗಗಳಂ ಮಿಗೆ
ನಗುವಂತಿರೆ ನೆಯ್ದಿಲೆಯ್ದಿದುವು ವಿಕಸನಮಂ ೭೦

ಇಂತು ಮುಗಿವ ಕಮಲಂಗಳನಗಲ್ವ ಚಕ್ರಮಿಥುನಂಗಳಂ ನೋಡಲಾಱದಿಳಿವಂತೆ ಜಳಜಸಖಂ ಪಶ್ಚಿಮಾಬ್ಧಿಯೊಳಿಳಿಯೆ ನಾನಾಶಿವಾಲಯಾಂತರಂಗಸಂಧ್ಯಾಸಮಯಸಮುದ್ಭೂತಮೃದುಮೃದಂಗಪಟಹಶಂಖಭೇರೀನಿನಾದಮಂ ವಾರನಾರೀಸಂಗೀತನೃತ್ಯಚಟುಳತರರವಭರಿತಪುರವಳಯವಿಳಸಿತಬಹುರತ್ನರಚಿತಸಹಸ್ರವೀಧೀಪ್ರತಿನಿಳಯಂಗಳೊಳ್ ಪತಂಗನ ಕಿರಣಂಗಳಂ ಕಳ್ತಲೆ ಸೆಱೆವಿಡಿದಂತೆ ಪೊತ್ತಿಸಿದದೀಪಿಕಾನಿಕಾಯಂ ನಾಡೆ ಮೆಱೆಯೆ, ಕಡುಗಳ್ತಲೆ ಕವಿತರ್ಪಾಗಳೊರ್ವ ಜಾರೆ ಮನೆಯವರ್ಗಂಜಿ ಮಹೋತ್ಸಾಹದಿಂ ಪುದಿದ ತನುವುಂ ಪದಿೞಿಂ ಪಾಡಿದಳದೆಂತೆಂದೊಡೆ.

೧. ಚಲಿಸದೆ (ಶಾ. ದಾ. ಅ. ಗೊ. ಯು. ಡ.) ೨. ಚಿತ್ರಜ (ಬೆ. ಬ. ಯು. ದಾ. ಅ.) ೩. ಮುತ್ತಿನ (ಅ). ೪. ನೆರೆ (ಶಾ. ದಾ. ಅ.). ೫. ಮನದುತ್ಸವದಿಂ (ಶಾ.); ಮನೋತ್ಸಾಹದಿಂ (ಯು. ಅ. ಬೆ.).

ಅಳಿಯಂ ಕತ್ತುರಿಯಂ ಕೋ-
ಕಿಳನಂ ಕಾಳಿಂದಿಯಂ ವಿನೀಳಾಂಬುದಮಂ
ಬಳನನುಜನನುಱೆ ಪಾಡಿದ
ಳಿಳವಟ್ಟತಿಜಾರೆ ಧೀರೆ ರಜನೀಮುಖದೊಳ್ ೭೧

ಮತ್ತಮಲ್ಲದೆ,

ಪರಸಿದುದಿರ್ಗೊಂಡರಲಂ-
ಕರಿಸಿದರಾದರಿಸಿದರ್ ಕರಂ ನುತಿಗೆಯ್ದರ್
ಬೆರಸಿದರೆಳಸಿದರಪ್ಪಿದ-
ರೆರೆದರ್ ನಲಿನಲಿದು ಜಾರೆಯರ್ ಕಳ್ತಲೆಯಂ[1] ೭೨

ಅಗಳಭಿಸಾರಿಕಾನಿಕಾಯದುತ್ಸವಂ ಪೆರ್ಚುವಂತೆ,

ನಸುಗಳ್ತಲೆಯರೆಗಳ್ತಲೆ
ಮುಸುಂಕುಗಳ್ತಲೆ ಪೊದಳ್ದ ಪೆರ್ಗಳ್ತಲೆ ನಾ-
ಲ್ದೆಸೆಗಳ್ತಲೆ ಪೊಸಗಳ್ತಲೆ
ರಸೆಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ ೭೩

ದಿವಸುಧೆಯಬ್ಧಿಯನೊಲವಿಂ
ತವೆ ಜನರಿಚ್ಛೆಯನೆ ಪಡೆಯಲೆಂದುಱೆ ಕಡೆಯಲ್
ಹವಣಿಸಿದ ವಿಷಮನನುಕರಿ-
ಸುವ ತೆಱದಿಂದುದಯಮುಳಿದು ತಳೆದುದು ತಮಮಂ ೭೪

ಅಱಿಯೆಂ ಪಿರಿದಂ ಪೊಗಳಲ್
ಪೆಱತೇಂ ಮುಚ್ಚಿದೊಡೆ ಮುಚ್ಚಿದಂತಲ್ಲದೆ[2] ಕಣ್-
ತೆಱೆದೊಡೆ ತೆಱೆದಂತಲ್ಲದೆ[3]
ಮಱೆದಂತೆವೆಯಿಕ್ಕಲೀಯದಿಡಿದ ತಮಂಥಂ ೭೫

---

೧. ಕಳ್ತಲೆಯೊಳ್ ( ಯ. ದಾ. ಓ. )   ೨. ಮುಚ್ಚಿರಲ್ಕಲ್ಲದೆ ( ಕಾ. ದಾ. ಬಿ. ಬ. )
೩. ತೆಱೆದಿರಲಲ್ಲದೆ ( ಬ. ಆ. ಕೊ. )

ಮತ್ತೇಭ.

ಉಗುರಿಂದಂಟೆ ಬೆಱಂಟೆಯಂಜನಮದಕ್ಕುಂ। ಚೌಕಮಂ ಕೀಱುತುಂ
ತೆಗೆದಾಚ್ಛಾದಿಸೆ ಕೇಳ ನೀಳಪಟಮಕ್ಕುಂ। ಬಟ್ಟಿತಂ ಮಾಡಿ ಸು-
ತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ ತಾನಿದೆಂಬಂತಿರೀ
ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆರೆದಟ್ಟಯ್ಸಿತ್ತನಿತ್ತಂ ತಮಂ ೭೬

ಇದು ಮಧುಕರಮಿದು ಮಲ್ಲಿಗೆ-
ಯಿದು ಕೋಕಿಳಮಿದು ಮರಾಳವಿದು ಮದಗಜಮಿಂ-
ತಿದು ಕಂಠೀರವಮಿದು ಕರಿ-
ದಿದು ಬಿಳಿದೆಂದಱಿಯಬಾರದುರ್ವಿದ ತಮದೊಳ್ ೭೭

ಮನದೊಳಗಂ ಪೊಱಗಂ ತೆ-
ಕ್ಕನೆ ತೀವಿದ ಮರ್ಬಿನಲ್ಲಿ ಮನಸುಂ ನೆನಸುಂ
ಕನಸುಂ ತಾನುಂ ಕತ್ತಲೆ-
ಯೆನಿಸಿರ್ದುದು ತಮದ ಘನಮನದನೇನೆಂಬೆಂ ೭೮

ನೆಲಸಿ ನೆಲೆಗೊಂಡ ಪೆರ್ಗ-
ತ್ತಲೆಯೊಳ್ ತೊಳತೊಳಗಿ ಬೆಳಗಿ ಮಿನಿಮಿನಿಸುತ್ತುಂ
ಪಲವುಂ ದೀವಿಗೆಗಳ್ ಕ-
ತ್ತಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ ‡ ೭೯

ಅಂತೊಪ್ಪುತ್ತುಮಿರೆಯಿರೆ,

೧. ಸೀರುತುಂ ( ಪೆ ); ಕೋರುತುಂ ( ಅ ); ಸೀಳುತುಂ ( ದಾ ). ೨. ಮೆ ( ಅ. ) ೩. ಮ ಆದಕ್ಕುಂ ( ಶಾ. ಯು. ) ೪. ತಾನಿದೆಂಬಂದದಿಂ ( ದಾ. ಗೊ. ಅ. ) ೫–೫. ಮನೆಯೊಳಗಂ ಪೊಱಗಂ ತೆ । ಕ್ಕನೆ ತೀವಿದ ಮರ್ಬಿನೊಳಗೆ ಸುಳಿವ ಜನಕ್ಕಂ ॥ ಮನಸುಂ ( ಬ. ) ೬. ನೊಳಗೆ ( ಶಾ. ಬಿ. ) ೭. ಘನಮನಾರ್ ಬಣ್ಣಿಸುವರ್ ( ಡ ) ೮–೮. ಒತ್ತಂಬಿಸಿ ಪರ್ವಿದ ಪೆ । ರ್ಗತ್ತಲೆಯೊಳ್ ಕೂಡೆ ನೋಡೆ ಮಿನಿಮಿನಿಸುತ್ತುಂ ॥ ಸುತ್ತುಂ ಬೆಳಗಿದ ದೀವಿಗೆ। ಕತ್ತಲೆ ಪೂತಂತಿರೊಪ್ಪಿದುವು ಮನೆಮನೆಯೊಳ್ ( ಬಿ. ಅ. ಗೊ. ) ‡ ಇಲ್ಲಿಂದ ಮುಂದೆ ೮೨ ನೆಯ ಪದ್ಯದ ಕೊನೆಯ ವರೆಗಿನ ಭಾಗವು ಡ ಪ್ರತಿಯಲ್ಲಿಲ್ಲ

ರಸೆಯಂ ನಭಃಸ್ಥಳಮನೆ-
ಣ್ದೆಸೆಯಂ ದಟ್ಟಯ್ಸುತಮರ್ದ ತಮದೊಳ್ ಜಾರ-
ಪ್ರಸರಂ ಪೊಱಮಟ್ಟುದು ಶಂ-
ಕಿಸದೊಲ್ದಲ್ಲಲ್ಲಿ ಕುಟಿಲಪಥಸಮತಳದೊಳ್ ೮೦

ಒದವಿದ ಕಳ್ತಲೆಯೊಳ್ ಸ-
ಮ್ಮದದಿಂ ಪೊಱಮಟ್ಟ ಜಾರಮಿಥುನಾಳಿಗೆ ಕಂ-
ಡುದೆ ಬರಪೆಳಸಿತೆ ಮನಮಿ-
ರ್ದುದೆ ಮನೆ ಪಟ್ಟಿದುದೆ ಪಾಸು ಮುಟ್ಟಿತೆ ಮರ್ಮಂ ೮೧

ದಾರಿಯೊಳಿಡುಕುಱಿೊಳೋಣಿಯೊ-
ಳಾರವೆಗಳ ತಳದೊಳಂಗಡಿಗಳೊಳ್ ಮನೆಯೊಳ್
ಕೇರಿಯೊಳಾವಿಗೆಗಳೊಳಂ
ಬೇರೂಱಿತು ಜಾರರನುಭವಂ ಕಳ್ತಲೆಯೊಳ್ ೮೨

ಅದೆಂತೆಂದೊಡೆ

ತಾಗದ ಚುಂಬನಮುಱಿ ಸೊ-
ಪ್ಪಾಗದ ಕರಘಾತಮುಗಲದಿರ್ಪನುಭವದೊಳ್
ಸಾಗಿಸುವ ಸರಭಸಂ ಮಿಗೆ
ರಾಗಿಸುವ ಮನಂ ಮನೋಹರಂ ಜಾರೆಯರೊಳ್ ೮೩

ಆರ್ರೈವ ಮನಂ ಸುಖದೊಳ್
ಪೂರ್ರೈಪ ಶರೀರಮುಸಿರದುಸಿರಿರ್ಪಡಕಂ-
ಸ್ಮೇರಾಸ್ಯಂ ಮೊಳೆನುಡಿ ಗೆಳ [illegible]
ಸೌರಂಭಂ ಸುರತಸಂಭ್ರಮಂ ಜಾರೆಯರೊ ೮೪

೧. ಸಮ್ಮತದೊಳ್ ( ವಾ ); ವನುಮತದೊಳ್ ( ಅ ); ಸಮ್ಮತದಿಂ ( ಕ. ಗ. ) ೨. ಸ। ಮ್ಮದದಿಂ ( ಕಾ. ) ೩. ಗತ ( ಕಾ. ಜೆ. ಯ. ಬ. ದಾ. ಓ. ) ೪. ರೊಳ್ ( ಯು. ದಾ. ಅ. ಗೊ. ಸೆ. ಗ. ಓ. )

ಪುಳಕಿಪ ತನು ಪೊಣ್ಮುವ ಸುಯಿ
ಬಳೆವ ರತಂ ಬೆಮರ್ವ ಗಂಡಮಿಳಿವಶ್ರು ಸುಖಂ-
ದಳೆವ ಮನಂ ಕಂಪಿಪ ಕೆಯ್
ಕಳವಳಿಸುವ ಗಳಮನೂನಮಸತೀಕುಳದೊಳ್ ೮೫

ಕಲ್ಲಿನ್ನದೆ ಮುಳ್ಳಿನ್ನದೆ
ಸಲ್ಲಲಿತಾಸ್ಥಾನಮೆನ್ನದಿರ್ದಿರ್ದೆಡೆಯೊಳ್
ಪಲ್ಲವಿಸಿತು ಪೂತುದು ಫಲ-
ವಲ್ಲರಿಯಂ ಪಡೆದುದರರೆ ಜಾರರ ಸುರತಂ ೮೬

ಒರ್ಬುಳಿಸಿದ ಸಮಸುಖದೊಳ-
ಗುರ್ಬಿಸುತಂತೊಲಿದು ನಲಿದು ಪಲತೆಱದಿಂ ನಿಂ-
ದುರ್ಬುತೆ ಕೊರ್ಬುತೆ ಪರ್ಬುತೆ
ಗರ್ಬಿಸಿತಭಿಸಾರಿಕಾನಿಕಾಯಂ ನಿಶಿಯೊಳ್ § ೮೭

ಮತ್ತಮಲ್ಲದೆ
ಚಂಪಕ

ಇಳೆಯನಮರ್ಚಿ ಮುಚ್ಚಿ ಮುಸುಕಿರ್ದ ತಮಂಧಮನಳ್ತಿಯಿಂದೆ ಕಂ-
ಡಳಿಕುಳಮೆಂದು ಕಾಳಿಮತರಂಗಿಣಿಯೆಂದು ವಿನೀಳಮೇಘಮೆಂ
ದಳಕದೊಳೊತ್ತುತುಂ ಸಲಿಲಕೇಳಿಯುಮಂ ನವಿಲಾಟದೇಳ್ಗೆಯಂ
ತಳೆದಭಿಸಾರಿಕಾನಿಕರಮೊಪ್ಪಿದುದಾತ್ತರತಾಂತಲೀಲೆಯೊಳ್ ೮೮

ಅಂತೊಪ್ಪುತ್ತುಮಿರ್ಪ ಸಮಯದೊಳ್

ಗಗನಂ ಪೂತುದೊ ತಮಮಂ
ಮಿಗೆ ನೋಡುವ ಭರದೊಳಂಬರಂ ತಾನಂತ-
ಕ್ಷಿಗಳಂ ಪಡೆದುದೊ ಪೇಳೆನೆ
ಸೊಗಯಿಸಿದುವು ತೊಳಗಿ ಬೆಳಗಿ ತಾರಗೆ ನಭದೊಳ್ ೮೯

---

೨. ದೆಲ್ಲಿ ( ಶಾ. ಬೆ. ಯ. ) ೨. ನಿಂ । ದಳ ( ಬ. ಮ ಗೊ. ಅ. ಗ. ಓ. ಖ. ) ೩. ನೆಱ-
ತಾನ ॥ ಕ್ಷಿಗಳಂ ( ದಾ. ) § ೮೭ ನೆಯ ಪದ್ಯವು ಓ ಪ್ರತಿಯಲ್ಲಿಲ್ಲ.

ದಿನಕರನೆಸೆವಾಕಾಶಾ-
ವನಿಯೊಳ್ ದಶಶತಕರಾನುಕೂಲಂ ಮನದೊಂ-
ದನುನಯದಿಂ ಬಿತ್ತಿದ ಬೆಳ-
ಗಿನ ಬೀಜಾಂಕುರಮಿವೆನಿಸಿದುವು ತಾರಗೆಗಳ್ *೬೦

ಅಂಬುಜನಿಜಸಖನಸ್ತಮ-
ಯಂಬರಮಂಬರದ ನಡುವೆ ಬಹುತರದಿಂ ನೆ-
ಯ್ದಂಬರದೊಳ್ ಕೆಯ್ಗೊಳಿಸಿದ
ಚುಂಬಿತರತ್ನಂಗಳಂತೆ ತಾರಗೆ ಮೆಱೆಗುಂ ೬೧

ನೆಟ್ಟನೆ ಬಂದಪನೆನ್ನಯೆ
ನಿಟ್ಟೆಯ ನಿಧಿ ಚಂದ್ರನೆಂದು ರಾತ್ರೀವಧು ತಾಂ
ಕಟ್ಟಿದ ಬಹುರತ್ನದ ಮೇ-
ಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ ೬೨

ಅದಂಬರಗಂಗೆಯ ಮುಳಿ-
ಸಿಂದಂ ಕಾಳಿಂದಿ ಕಲಕೆ ಕರ್ಪಾಗಲ್ಕಂ-
ಲ್ದೊಂದಿದ ಮುಕ್ತಾವಳಿಯೆಂ-
ಬಂದದಿ ತಾರಗೆಗಳೆಸೆದುವಾ ನಭದೆಡೆಯೊಳ್ ‡೬೩

ಅಂತೆಸೆವ ನಕ್ಷತ್ರೋದಯಸಮನಂತರದೊಳ್,

೧. ಮೆಯ್ಗೊಳಿಸಿದ ( ಕಾ ). ೨. ನಿಟ್ಟೆಯು ( ಕಾ ). ೩. ರಾತ್ರಿವನಿತೆ ( ಡ ); ರಜನೀವಧು (ಒ)
* ೬೦ ನೆಯ ಪದ್ಯವು ಕ. ಡ. ಪ್ರತಿಗಳಲ್ಲಿಲ್ಲ. ‡ ೬೩ನೆಯ ಪದ್ಯವು ಬ. ಮ. ಅ. ಕ. ಡ. ಗ. ಒ. ಪ್ರತಿಗಳಲ್ಲಿಲ್ಲ. ಮತ್ತು ಬೆ. ಯು. ದಾ. ಗ. ಸೆ. ಪ್ರತಿಗಳಲ್ಲಿ ಈ ಪದ್ಯವಲ್ಲದೆ ಇದರ ಮುಂದೆ–ಉದಯಸತಿ ತನ್ನನಲ್ಲಂ । ಉದಧಿಯೊಳೀಯಲ್ಕೆ ತನಗೆ ಮುತ್ತಯ್ದೆತನ ।। ಕ್ಕಿದು ಸಲ್ಲದೆನುತ್ತುಂ ಹಾ । ರದ ಮಣಿಯಂ ಕಿಳಲುಡಿರ್ವವೊಲುಡುಗಣಮೆಸೆಗುಂ ।। ಎಂಬ ಪದ್ಯವೂ ಇರುತ್ತದೆ.

ಮತ್ತೇಭ.

ಇದು ಸಂಕ್ರಂದನದಿಗ್ವಧೂನಿಟಿಲಸಿಂಧೂರಾಂಶುವೋ ನೋಡು ನೋ-
ಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತಮೋ ಪೇಳ್ವೊಡಿಂ-
ತಿದು ವಿಸ್ತಾರಿತಕಾಮಹೋಮಹುತಭುಕ್ಪ್ರಜ್ವಾಲೆಯೋ ಎಂಬ ಸಂ-
ಪದಮಂ ಬೀಱುದುದಿಂದ್ರದಿಗ್ವಿವರದೊಳ್ ಚಂದ್ರದ್ಯುತಿಪ್ರಾಭವಂ ೯೪

ಅಗಳ್,

ಚಂಪಕ.

ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ-
ತ್ಕರದ ವಿಪತ್ತು ತಾರೆಗಳ ತುತ್ತು ಸುಧಾಂಬುಧಿಯೊತ್ತು ಮತ್ತಮಂ-
ಬರದ ಪುಳಿಂದಿ ತಾಳ್ದಿಸೆವ ಮೂಗಿನ ಮುತ್ತು ಮಗುಳ್ದು ನೋಡಲ-
ಚ್ಚರಿಯೆನಿಸಿತ್ತು ಮೂಡವೆಸೆಯಿಂದೊಗೆತರ್ಪ ಹಿಮಾಂಶುಮಂಡಲಂ ‡೯೫

ಮಹಾಸ್ರಗ್ಧರೆ

ಮುದದಿಂ ತಂದಿರ್ಕೆ ಪೂರ್ವಾಂಗನೆ ಗಿರಿಶಿರದೊಳ್ ಪೀಠಮಂ ಸತ್ರಭಾಸಂ-
ಪದಮಂ ಕೆಯ್ಗೊಟ್ಟು ಚೈತ್ರಂ ನಡೆತರೆ ಮದನಂ ಪುಷ್ಪಬಾಣಂಗಳಂ ಹೂ-
ಡಿದ ಬಿಲ್ಲಂ ಪೊತ್ತು ಪಿಂದಂ ಬರೆ ನವಕುಮುದಾಮೋದಮಾಧುರ್ಯದಿಂ ಷ-
ಟ್ಪದಗಾನಂಬೊಣ್ಮೆಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ ೯೬

ಅಂತೊಪ್ಪುತ್ತುಮಿರೆ,

ಮತ್ತೇಭ.

ವಿದಳತ್ಕೈರವರಾಜಿ ರಾಜಬಲದಿಂ ಸಂತೋಷಮಂ ಮುಟ್ಟೆ ಸಂ-
ಮುದಮಂ ತಾವರೆಯೆತ್ತಿ ಕಟ್ಟೆ ತಮಮಂ ಶೀತಾಂಶುವೆಳ್ಬಟ್ಟೆ ಪೆ-
ರ್ಚಿದಗುರ್ವಿಂ ವಿರಹಾಳಿಯಂ ಕುಸುಮಬಾಣಂ ಕಾಯ್ದು ಬೆನ್ನಟ್ಟೆ ಮೆ-
ಟ್ಟಿದನಿಂದ್ರಾಚಲಚೂಡಮಂ ಕಿರಣವೀಥೀಸಾಂದ್ರಮಂ ಚಂದ್ರಮಂ ೯೭

ಮತ್ತಮಲ್ಲದೆ,

---

೧. ಮೂಜು ( ಮ ). ೨. ದಿಗ್ವದನ ( ಅ ). ೩. ಪ್ರೋದ್ಭವಂ ( ಮ. ದಾ. ). ೪. ತತ್ರಭಾ ( ಗೊ ) ೫. ಸಂ। ಪದದಿಃ (ಕಾ.) ‡ ೯೫ ನೆಯ ಪದ್ಯವು ಮ. ಬ. ಅ. ಕ. ೬. ಡ. ಗ. ಪ್ರತಿಗಳಲ್ಲಿಲ್ಲ.

ಅದು ಪೊಸಪವಳದ ಬಂಧೂ-
ಕದ ಕೆಂದಾವರೆಯ ದಾಸಣದ ಪೂವಿನ ವ-
ರ್ಣದ ಸಂಪದದಿಂ ಮದದಿಂ
ಮುದದಿಂದೊಪ್ಪಿತ್ತು ಚಂದ್ರಬಿಂಬವಿಡಂಬಂ ೯೮

ಇದು ವಿರಹವಾರ್ಧಿಮಧ್ಯ-
ಪ್ರದೇಶದಿಂದೊಗೆದ ರಾಗವಡಬಾನಳಪಿಂ-
ಡದವೋಲ್ ವಿರಹಿಗೆ ತೋಱದು-
ದುದಯಾದ್ರಿಯ ಮೇಲೆ ಮೆಱೆವ ಹಿಮಕರಬಿಂಬಂ ೯೯

ಸರಳಾನುವಾದ
08- 1976.

ಅನಂತರಂ,

ಅರದಿದೆ ವಿರಹಿಗಳತಿಸಂ-
ಮುದದಿಂ ಬರ್ಪಾಗಳೊಲ್ದು ಮಧು ಮದನಂಗೆ-
ತ್ತಿದ ಮುತ್ತಿನ ಸತ್ತಿಗೆಯೆನಿ-
ಸಿದುದಿಂದ್ರಾಶಾನಿವೇಶದೊಳ್ ಶಶಿಬಿಂಬಂ ೧೦೦

ಉತ್ಪಲ

ಮುಂದೆ ತನುಂಧಮಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ
ಮುಂದುಗೊಳುತ್ತೆ ಎನ್ನನಿದು ಮಾಡುವ ಮಾಳ್ಕೆಯನಿಂದು ಮಾಳ್ಪೆನಾ-
ನೆಂದು ತದೀಯರೂಪನುಱೆ ನುಂಗೆ ತನುಚ್ಛವಿಯಿಂದೆ ತೋಱತೆಂ-
ಬಂದದೊಳೊಪ್ಪುತಿರ್ದುದು ನಿಶಾಕರಮಂಡಲದಲ್ಲಿ ಲಾಂಛನಂ ೧೦೧

---

೧. ದಾಸಳದ ( ಕಾ. ಕ. ಡ ). ೨–೨ . ಮುದದಿಂ । ಸದಮುಳವೊಪ್ಪಿತ್ತು (ಬ). ೩–೩. ಮಧ್ಯದೊ। ಳದಟೆಂದಿಹ ಬಾಡಬಾನಲಂ ತಾನುರಿವಂ ।। ದದಿ ವಿರಹಿಗಳ್ಗೆ ತೋಱು।ತ್ತು (ಅ). ೪.೪. ವಿರಹಿಗಳನೆಸಲ್। ( ಕ. ಬ. ಡ. ); ವಿರಹಿಗಳನಿಸಲ್ । ( ಕಾ. ದ. ); ವಿರಹಿಯನೆಸೆಯಲ್ ( ಅ ). ೫. ದ್ರಿಪ್ರದೇಶ ( ಅ ). ೬. ಮಧ್ಯದೊಳಿರ್ಪ ( ಬ. ಯ ).

ಒಡವುಟ್ಟಿದ ಬಿಸಮಿದನಾಂ
ಕಡೆನೊಂಕಲದೇಕೆ ಕೂಡಿ ನಡೆವೆನೆನುತ್ತುಂ
ದೊಡಲೊಳಗಿಂಬಿಟ್ಟಿಯ್ದುವ
ಪಡಿಯೆನಲೊಪ್ಪಿದುದು ಲಾಂಛನಾಂಕಿತಚಂದ್ರಂ *೧೦೨

ಇಂತಾದ ಚಂದ್ರೋದಯಮಂ ಕಂಡು ಭೋಗಸಹಾಯರಪ್ಪ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ ಭರದಿಂ ಪರಿತಂದು ಆಸ್ಥಾನದೊಳಿರ್ದ ಗೋತ್ರರಾಜಂಗೆ ಮೆಯ್ಯಿಕ್ಕಿ ನಿಂದು ಕೆಯ್ಯಂ ಮುಗಿದು ದೇವಾ ಪತಂಗಂ ಪಶ್ಚಿಮಾಬ್ಧಿಯೊಳಿಳಿದಂ ಸರಸಿರುಹಂ ಸುರುಳ್ದುವು ಕುಮುದಕುಲಂ ರಮಣೀಯಮಾದುವು ಕೋಕಂಗಳಗಲ್ದು ಶೋಕಮನೆಯ್ದಿದುವು ಪಕ್ಕಿಗಳ್ ಪಕ್ಕೆಗೆ ಸಾರ್ದುವು ಮೃಗಂಗಳ್ ನಗಮನೊತ್ತು-ಗೊಂಡವು ಇಳೆಯ ಜನಂ ನಿಳಯಮಂ ಪೊಕ್ಕುದು ಕತ್ತಲೆಯೊತ್ತರಿಸಿತ್ತು ಜಾರೆ-ಯರ್ ಹಾರಯ್ಸಿದರ್ ಗಗನದೊಳ್ ಭಗಣಂ [೧]ನೆಗೆದುದು ಚಂದ್ರಂ ಶೈಳೇಂದ್ರಮ-ನೇಱಿದಂ ಬೆಳ್ದಿಂಗಳ್ ಬೀದಿವರಿದುದು ಅಸತಿಯರ್ ದೆಸೆಗೆಟ್ಟೋಡಿದರ್ ಚಕೋರ-ಮುಖಂ ವಿಕಸಿತಮಾದುದು ಮನ್ಮಥಂ ನನೆಗಣೆಯಂ ಹೂಡಿದಂ ವಿರಹಿಗಳ್ [೨]ವಿರಥ-ರಾದರ್ ದೇವಾ ಇಂದಿನ ದಿನಂ ಬೆಳತಿಗೆ ಬೆಳ್ದಿಂಗಳೊಳ್ ಪುರವೀಧಿಯ ವಿಳಾಸಮಂ ಕೆಯ್ಮಿಕ್ಕು ನೋಡಿ ರಾತ್ರಿವಿಹಾರಮಂ ಮಾಡಲ್ವೇಳ್ಪುದೆಂದು ಬಿನ್ನಯ್ಸಿದ ಮನ್ನ-ಣೆಯ ರಸಿಕರ್ಗೆ ಪಸಾಯನಮನಿತ್ತೋಲಗಮಂ ಪರೆಯಲ್ವೇಳ್ದು ನಾರದನೊಡಗೂಡಿ ನಗರಾಜಂ ನಿರ್ಮಳೀಕೃತಕರಚರಣನುಂ ಭಸಿತಾವಯವನುಂ [೩]ರುದ್ರಾಕ್ಷಮಾಲಾ-ಲಂಕೃನುಂ ಶಿವಲಿಂಗೇಕ್ಷಣನಿತ್ಯನಿಯಮಸಂಪನ್ನನುಂ ಪ್ರಸಾದಭರಿತಶರೀರನುಂ ಸುಗಂಧಮಯತಾಂಬೂಲಮುಖನುಂ ಕುಸುಮಾವಳೀಪರಿವೃತಕಬರೀಭರನುಂ ಯಕ್ಷ ಕರ್ದಮಕಕ್ಷಪುಟನುಂ ನವ್ಯವಸ್ತ್ರಪರಿವೃತನುಂ ದಿವ್ಯಾಭರಣಸರ್ವಾಂಗನುಮಾಗಿ [೬]ದಕ್ಷಿಣಾನುಕೂಲ ಧೃಷ್ಟಶಠನಾಯಕರೆಂಬ ರಾಜಪುತ್ರರಂ ಕೂಡಿಕೊಂಡು ಸಕಲಸುಕುಮಾರಭೋಗನಿಯೋಗನಿರತರ್ ಪಿಂತೆ ಬರೆ ನಾರದಮುನೀಂದ್ರಸಹಿತಂ

---

೧. ನೆಗೆದುವು ( ಬ. ಯು. ಮ. ಬೆ. ). ೨. ವಿರತ ( ಶಾ. ಕ. ಬೆ.). ೩–೩. ರುದ್ರಾಕ್ಷಿತಾಭರಣಭೂಷಿ-ತನುಂ ( ದಾ ). ೪. ಸಂತೃಪ್ತನುಂ ( ಗೊ. ಯು. ) ೫. ವಸ್ತ್ರಪರಿವಸನನುಂ ( ಮ. ಯು. ಅ. ಬ. ); ವಸನಾಚ್ಛಾದಿತನುಂ ( ಬೆ. ಕೊ. ). ೬–೬. ದಾಕ್ಷಿಣ್ಯನನುಕೂಲಂ ಧೃಷ್ಟಂ ( ಮ. ಯು. ಬ. ಬೆ. ದಾ. ಅ. ಸೆ. ಗ. ). ೭. ನಿಯೋಗನಿಕರಾ ( ಶಾ. ಅ. ಬೆ. ); ನಿಯೋಗರ್ ( ಕ ). * ೧೦೨ನೆಯ ಪದ್ಯವು ಬ. ಮ. ಅ. ಕ. ಡ. ಗ. ಓ. ಪ್ರತಿಗಳಲ್ಲಿಲ್ಲ.

ಗಿರಿರಾಜಂ ತನ್ನರಮನೆಯಂ ಪೊಱಮಟ್ಟು ರಾಜವೀಧಿಯೊಳ್ ನಿಂದು ಪೂರ್ವ[1]ದಿಶಾವಲೋಕನನಾಗಿ[1] ಕಟ್ಟಿದಿರೊಳಿಟ್ಟಣಿಸಿದ ಬೆಳಗಿಂ ದಟ್ಟಯ್ಸಿ ತೋರ್ಪ ಚಂದ್ರಬಿಂಬಮಂ ನೋಳ್ಪಾಗಳ್,

ಸರಸನೆನಿಸಿರ್ದ ಸಖನಾ-
ಗಿರಿಕಂ ಕೆಲಸಾರ್ದು[2] ನಿಂದು ಕೆಯ್ಮುಗಿಯುತ್ತುಂ
ಪರಿಪೂರ್ಣಚಂದ್ರಮಂಡಲ-
ದಿರವಂ ಕಂಡಾಗಳವನಿಪಂಗಿಂತೆಂದಂ ೧೦೩

ಉತ್ಪಲ.

ಇಂದು ಸುಧಾಂಶುರಾಜನತಿಶೀತಳಶೀಲ[3]ನನೂನದಾನಿಯೇ-
ೞ್ತಂದೊಡೆ ಕೈರವಕ್ಕೆ ಶಶಿಕಾಂತದ ಕಲ್ಗೆ ಚಕೋರಮಾಲೆಗಾ-
ನಂದಮುದಾಯ್ತು ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಪೋ
ದಂದುಗಮಾಯ್ತು ಸರ್ವಜನಸಮ್ಮತನಾವನಗಾಧಿನಾಯಕಾ ೧೦೪

ಮತ್ತಮಲ್ಲದೆ,

ಕಮಲಂಗಳೊಡನೆ ಧಾತ್ರೀ-
ಕುಮುದಂ ಮುಗಿದಿರ್ದುವರಸ ಕುಮುದದೊಡನೆ ತತ್-
ಕಮಲಂ ಮಿಕ್ಕಲರ್ದುವು ಚಂ-
ದ್ರಮನುದಯದೊಳೆಂದೊಡಿಳೆಗದೇಂ ಕೌತುಕಮೋ ೧೦೫

ಮತ್ತಮಲ್ಲದೆ ದೇವಾ ಪರ್ಬಿದ ಬೆಳ್ದಿಂಗಳಗುರ್ಬನೇನಂ ಬಣ್ಣಿಪೆಂ

ಮುನ್ನಂ ಪಯೋಧಿ ಪಡೆದೊಡೆ
ತನ್ನಂ ಶಶಿ ಪಡೆದನಾ ಪಯೋಧಿ[4]ಯನೆಂಬಂ-
ತುನ್ನತಿವೆತ್ತುದು ರಾಜೋ-
ತ್ಪನ್ನಮಭಿನ್ನಂ ಪ್ರಸನ್ನಮೊಪ್ಪುವ ಜೊನ್ನಂ ೧೦೬

---

೧—೧. ಪೂರ್ವದಿಶಾವಲೋಕನಮುಖನಾಗಿ (ಯ.); ಪೂರ್ವದಿಶಾಮುಖಾವಲೋಕನನಾಗಿ (ಕಾ.ಬೆ.)
೨. ಕೆಯ್ಸಾರ್ದು (ದಾ.). ೩. ಳಚಳಪತಿ (ಕಾ. ದಾ. ಬೆ.). ೪. ನಿಳಾಧಿ (ಬ. ಯ. ಅ. ಗೊ. ಓ.)

ಮತ್ತೇಭ

ಹರನುದ್ಭೂಳಿಸಿದತ್ಯಸೂನಭಸಿತಪ್ರದ್ಯೋತಮೋ ಚಂದ್ರಶೇ-
ಖರನಾನಂದಮಯಾಟ್ಟಹಾಸರುಚಿಯೋ ಸರ್ವೇಶ ಸತ್ಕೀರ್ತಿಯೋ
ಪರಮೋತ್ತುಂಗಮರುನ್ನದೀಪ್ರಬಳಗೌರಚ್ಛಾಯೆ ಭೂಭಾಗದೊಳ್
ಪರೆದತ್ತೋ ಎನೆ ಪರ್ವಿತುರ್ವಿಯನಗುರ್ವಿಂ ಸಾಂದ್ರಚಂದ್ರಾತಪಂ ೧೦೭

ಚಂಪಕ.

ಮುಡಿವೊಡೆ ಮಲ್ಲಿಕಾಪ್ರತತಿ ಪೂಸವೊಡುತ್ತಮಸವ್ಯಚಂದನಂ
ತುಡುವೊಡೆ ಮೌಕ್ತಿಕಾಭರಣವೀಸುವೊಡಂತಮೃತಾಬ್ಧಿ ಪೊರ್ದುಕೊ-
ಳ್ವೊಡೆ ಧವಳೋತ್ತರೀಯಮೊಸೆದಿಂಟುವೊಡಾ ನವದುಗ್ಧಮೊಲ್ದು ನೋ-
ಳ್ಪೊಡೆ ರಜತಾದ್ರಿಯೆಂದೆನಿಸಿ ತೋಱಿತು ಮೀಱಿದ ಚಂದ್ರಿಕೋಜ್ವಳಂ ೧೦೮

ಸಕಳಜನಂ ಕೌಮುದಿಯಿಂ-
ದೆ ಕಡೆದು ಕಂಡರಿಸಿತೆಂಬ ನುಡಿ ಚಿತ್ರಮೆ ಕೌ-
ತುಕಮರಸ ಚಂದ್ರಮಂ ಚಂ-
ದ್ರಿಕೆ ಕವಿದ ಕಳಂಕಚಂದ್ರನಂತೆಸೆದಿರ್ದಂ ೧೦೯

ಶಿವಕೀರ್ತಿರಸದೆ ಬೊಮ್ಮಂ
ತವೆ ತೊಳೆದನೊ ಜಗಮನಮೃತವಾರ್ಧಿಯ ಬೆಳಗಿಂ
ಧವಳಿಸಿದನೊ ಪೇಳೆನೆ ಭೂ-
ಭುವನಮನೆಡೆಗೊಂಡುದಚ್ಚಪೊಸವೆಳ್ದಿಂಗಳ್ ೧೧೦

ಇಂತೊಪ್ಪುವ ಸಾಂದ್ರಚಂದ್ರಿಕಾಸಂಪದಮಂ ನಗೇಶ್ವರಂಗೆ ನಾಗರಿಕಂ ನಲಿನಲಿದು ತೋಱುತ್ತುಂ ಮೀಱಿ ಬರೆವರೆ ಪಟ್ಟಣದ ದಟ್ಟಯ್ಸಿದ ಪಲವುಂ ವೀಥಿಗಳ ವಿಚಿತ್ರವಿಭ್ರಮಮಂ ಶೈಲಪತಿಯಾಲೋಕಿಸುತ್ತುಂ ಕೇಳುತ್ತುಂ ಬಾಳುತ್ತುಂ ಕೇಳೀವನಮಂ ಪುಗುತರ್ಪಾಗಳ್

೧. ತಾಳ್ದು ( ಪ ); ಪೊರ್ದಿ ( ರಾ. ) ೨. ಮಿಱಿತು ( ಬ. ಯ. ಅ. ) ೩. ಚಂದ್ರನುಜ್ವಳಂ (ಅ. ಒ). ೪. ಜಗಂ ( ಯ. ಬ. ವಾ. ) ೫. ಜಗಮುಂ ( ಬೆ. ಬ. ಯ. ) ೬. ಬೊಮ್ಮನಮೃತ ( ಬೆ. ಬ. ಯ. ) ೭. ದಮನು ( ದಾ. )

ಸುಗಿದಿವೆ ಕಮಳಂ ಕುಮುದಂ
ನಗುತಿವೆ ಕೋಕದ್ವಯಂ ರತೀಶ್ವರನೆಸುವಿಂ-
ದುಗಿಬಗಿಯಾಗುತ್ತಿವೆ ಪಿಗೆ
ಬಗೆವೆರ್ಚುರ್ತ್ತಿವೆ ಸರಾಗಪೂರಚಕೋರಂ ೧೧೧

ಉತ್ಪಲ

ಚೂತಮನಪ್ಪಿ ಪುಷ್ಪವತಿಯಾದುದು ಮಲ್ಲಿಗೆ ಶೀತಕೃತ್ಕರ-
ವ್ರಾತಮನಪ್ಪಿಯೊಪ್ಪೆ ಕರಗಿತ್ತು ಹಿಮೋಪಲನೋತು ತುಂಬಿಯಂ
ಪ್ರೀತಿಯೊಳಪ್ಪಿ ಗರ್ಭಿಣಿಯದಾಯ್ತು ಸರೋರುಹಮುತ್ಪಲಂ ಪ್ರಸೂ-
ತಾತುರೆಯಾಗಿ ಪೆತ್ತುದಳಿಯಂ ನವಚಂದ್ರಿಕೆಯೊಳ್ ನಗೇಶ್ವರಾ ೧೧೨

ಮತ್ತಮಲ್ಲದೆ,

ಎಳದಳಿರೊಳರಲೊಳಾಮ್ರದ
ನೆಳಲೊಳ್ ಪುಳಿನಂಗಳೊಳಗೆ ಶಶಿಕಾಂತಶಿಳಾ-
ತಳದೊಳ್ ಕೊಳದೊಳ್ ವನದೊಳ್
ತಳರದ ವಿರಹಿಗಳ ವೀಥಿಯಿದೆ ಗಿರಿರಾಜಾ ೧೧೩

ಉತ್ಪಲ.

ಒತ್ತುವ ಪದ್ಮಪತ್ರಕದಳೀದಳಸಂಕುಳಮೆಯ್ದೆ ಬೆಂದು ಸೀ-
ಯುತ್ತಿವೆ ದೂರದಿಂದೆ ಸಖಿಯರ್ ತವೆ ಚೆಲ್ಲುವ ಶೀತವಾರಿಯು-
ರ್ಕುತ್ತಿವೆ ಬೀಸುತಿರ್ಪ ಕುಸುಮೋಜ್ವಳವೀಜನವೃಂದವೋವೊ ಪೊ-
ತ್ತುತ್ತಿವೆ ತನ್ವಿಯೋ ವಿರಹವಹ್ನಿಗೆ ಪುಟ್ಟಿದದೊಂದು ಮೂರ್ತಿಯೋ ೧೧೪

ಸಂದಣಿಸಿ ಮಾಣದಾಳೀ-
ವೃಂದಂ ಶಿಶಿರೋಪಚಾರಮಂ ಲಲನೆಗೆ ಮಾ-
ಳ್ಪಂದಂ ಘೃತದಿಂ ಕಿರ್ಚಂ
ನಂದಿಪ ತೆಱನಾಗಿ ತೋಱುತಿದೆ ನೋಡರಸಾ ೧೧೫

---

೧. ನಾಥ ( ಶಾ. ಕ. ). ೨. ಗಿರಿರಾಜಾ ( ಗ ).

[1]ತಾಳ್ದಿದ ವಿರಹದೊಳೀಕೆಗೆ
ಬೆಳ್ದಿಂಗಳ್ [2]ಬೆಳಿಯ ಕಿರ್ಚು ಸಸಿ ಬಿಸಿ ಕಾವಂ
ತೂಳ್ದುವ ದಾವಂ ಚೈತ್ರಂ
ಸೀಳ್ದಿಕ್ಕುವ ಕುಂಭಿ ಕದಳಿ ಕದಳೀಘಾತಂ ೧೧೬

ಎಂದಿಂತು ವಿರಹಾತಿಶಯಮಂ ಬಿನ್ನವಿಸುತ್ತುಂ ಬರೆವರೆ ಮುಂದೊಂದೆಡೆಯೊಳ್,

ಮಿಗೆ ಸೌಕುಮಾರ್ಯನವವ-
ಸ್ತುಗಳಂ ಪೆಸಗೊಂಡೊಡುಳಿಯಳವಳಿಸುತುಂ ಸು-
ತ್ತುಗವಳಲುತ್ತುಂ ಸಂಜ್ಞೋ-
ಕ್ತಿಗಳಂ ತೋಱುತ್ತುಮಿರ್ದುದಬಳಾನೀಕಂ ೧೧೭

ಚಂಪಕ.

ಇದೆ ಪಿಕನೆಳ್ಬು ಹಂಸೆ ಬರುತಿರ್ದುದೆ ನೂಂಕು ಮಧುವ್ರತಾಳಿ ಮುಂ-
ದಿದೆಯಿಡು ಚಂಪಕಪ್ರಸವದಿಂ ಗಿಳಿವಿಂಡಿದೆ ಸೋವು ಮಾರುತಂ
ಮದಮುಖದಿಂದೆ ತೀಡುತಿದೆಯೊಡ್ಡು ಸೆಱಂಗನೆನಿಪ್ಪ ತಮ್ಮ ಹ-
ಸ್ತದ ನಿಜಸಂಜ್ಞೆಯಿಂ ಸುದತಿಯರ್ ನುಡಿದರ್ ಶಿಶಿರೋಪಚಾರದೊಳ್ ೧೧೮

ಮತ್ತಮೊಂದೆಡೆಯೊಳೊರ್ವ ತರುಣಿಗತ್ಯಧಿಕವಿರಹತಾಪಂ ಒಳಗಂ ಪೊಱಗಂ ತೆಕ್ಕನೆ ತೀವೆ ತಳತಳಿಸಿ ಕಾಯ್ದು ಘುಳುಘುಳಿಸುವಯಃಪಿಂಡಮೆಂದು ಶಶಿಮಂಡಲಮಂ ನೋಡಲಂಜಿ ಕಣ್ಮುಚ್ಚಿ ಬೆದಱುತ್ತುಂ ಬಿಸಿಯ ಬೆಳಗೆಂದು ಬೆಳ್ದಿಂಗಳ ಸೋಂಕಿಂಗೆ ಮೆಯ್ದೆಗೆದು ಸುಗಿಯುತ್ತುಂ ಬಾಳ ಬಾಯ್ದಾರೆಯ ಸೊಂಕೆಂದು ಕದಳೀದಳಸ್ಪರ್ಶನಕ್ಕೆ ದರ್ಪಂಗೆಟ್ಟೊಪ್ಪಂಗುಂದುತ್ತುಂ ವಸಂತನೆಂಬ ಕಮ್ಮಱಂ ಶಶಿಬಿಂಬದ ಪೊಸಸಾಣೆಯೊಳೊತ್ತಿ ಮಸೆವ ಕಾಮದೇವನ ಕೂರಲಗಿನ ದನಿಯೆಂದು ಕೋಕಿಲಧ್ವನಿಗಾಕಂಪನಂಗೊಳುತ್ತುಂ ಮಕರಧ್ವಜವೇತ್ರಧರಮುಖಜನಿತಮುಖರಗರ್ಜನಾರವಮೆಂದು ಚಪ್ಪರಿಪ ಗಿಳಿಗಳ ಬಳಗಕ್ಕೆ ಧರೆಗಿಳಿಯುತ್ತುಂ ಬಿಡಿದಿಸುವ ಕುಸುಮಕೋದಂಡಚಂಡಪ್ರಸವಬಾಣಭೀಂಕಾರಘೋರಧ್ವನಿಯೆಂದುಱಿ ಝುಂಕರಿ-

೧. ತಾಳ್ದಾ (ಕಾ. ಬಿ.) ತಾಳ್ದೀ (ಅ). ೨. ಪುಳಿಯ; (ಮ. ಗೊ. ಕ. ಡ.).

ಸುವ ತುಂಬಿಗಳ ಝೇಂಕಾರಕ್ಕೆ ಭೋಂಕನೆ ನಡುಗಿ ಶಂಕಿಸುತ್ತುಂ ಚೈತ್ರರಾಜತೇಜಃಪ್ರತಾಪದುರಿಯ ಹಳವಿಗೆಯ ಹೊಯ್ಲಿಂದು ಬೀಸುವ ಪೊಂಬಾಳೆಯ ಚಾಮರದೆಲರ್ಗೆ ಕೊಱಗಿ ಕಳೆಗುಂದುತುಂ ಸಖೀಜನಂ ಕೆಯ್ಗೊಟ್ಟೆಯ್ತಂದು ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತನುಮುಟ್ಟೆ[1] ಸೆಕೆಯುಸಿರ್ ಭುಗಿಲನೊಗೆದು ಕಾದ ನೀರ್ ಕಾಯಮಂ ಸುಡೆ ಘಳಿಲನೆ ಪೊಱಮಟ್ಟು ಕೆಳದಿಯರಂ ನೆಮ್ಮಿ ಹಮ್ಮದಂಬೋಗುತ್ತುಂ ಕಾಮಂಗೆ ಕನಲ್ದು ವಸಂತಂಗಳಲ್ದು ಎಳಲತೆಗೆ ಬಳಲ್ದು ಪಲ್ಲವಕ್ಕೆ ಕಳಲ್ದು ಕುಸುಮಕುಲಕ್ಕೆ ಬಸವಳಿದು ಮಂದಾನಿಳಂಗೆ ಮದವುಡುಗಿ ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ ಅಳಿಗಳ ದಳವುಳಂ ಬಸಂತನ ಬಂದಿ ಬಾಲಚೂತದ ಭಯಂ ಮಳಯಾನಿಳನ ಗಾಸಿ ಶಿಶಿರೋಪಚಾರದ ದಂಡಣೆಯಖಂಡಿತಮಾಗೆ ಕೊರಗಿ ಕರಗಿ ಕಂದಿ ಕುಂದಿ ಕೋಡಿ ಬಾಡಿ ಸುರುಳ್ದುರುಳ್ದು ತೆರಳ್ದು ಒಳಗಾಱ ಬಿಸುಪೇಱ ಕಳೆಗುಂದಿಯಾಸೆಯಱತು ನೋಟಂ ಬಱತು ವಿರಹಾಗ್ನಿಯೆತ್ತಿ ಮನಂ ಪೊತ್ತಿ ಬುದ್ಧಿ ಕವರ್ದು ಅಹಂಕಾರಂ ಹೊಗೆದು ಚಿತ್ತಂ ಬೆಂದು ಹರಣಮುರಿದು ಹಮ್ಮಯ್ಸಿ ಕಣ್ಮುಚ್ಚಿ ವಿರಹದ ಕರುವಿನಂತೆ ಕರುಣದ ಹಾಹೆಯಂತೆ ದೈನ್ಯದ ಸೀಮೆಯಂತೆ ಕಾರ್ಪಣ್ಯದ ನೆಳಲಂತೆ ವಿಲಾಸದ ವಿರತೆ ವಿಭ್ರಮದಭ್ರಚ್ಛಾಯೆ ಲಾವಣ್ಯದ ಬಂಜೆ ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಯಶಮಂ ಗಿರಿರಾಜಂ ಕರುಣಿಸಿ ನೋಡಿ ಕೌತುಕಮನಾಳುತ್ತಾ ವನದೊಳ್ ಬೇಯುತ್ತುಮಿರ್ಪ ವಿರಹಿಗಳ್ಗವರವರ ನಲ್ಲರನಲ್ಲಲ್ಲಿ ತಂದು ಸಲ್ಲೀಲೆಯಿಂ ಕೂಡುವುದೆಂದು ಚರರಂ ಪರಿಕಲ್ಪಿಸುತ್ತುಂ ತಿರುಗಿ ನಡೆತಂದು ಪಣ್ಯಾಂಗನಾವೀಥಿಯಂ ಪುಗುತರ್ಪಾಗಳ್

ಮಹಾಸ್ರಗ್ಧರೆ

ಯುವತೀಸಂತಾನ ನಾನಾಚಲದಳಕಲಸಲ್ಲಾಸ್ಯಲೀಲಾಪ್ರಬದ್ಧಂ
ವಿವಿಧಾಗಾರಾಂಗಣಪ್ರಸ್ಫುರಿತಕೃತಕಕಾಸಾರಪಾನೀಯಭಂಗೋ-
ದ್ಭವಬಿಂದುವ್ರಾತಶೀತಾವರಣನೊಲವಿನಿಂ ತೀಡಿದಂ ಸ್ತ್ರೀಕುಲೋದ್ಯ-
ನ್ನವಕಸ್ತೂರೀಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ ೧೧೯

೧. ಶಾವುರ್ಮುಟ್ಟೆ ( ಶಾ ); ಕಾಯ್ಪು ಮುಟ್ಟೆ ( ಯು. ಅ )

ಅಂತು ತೀಡುವ ಮಂದಾನಿಳಂಗೆ ಮೆಯ್ಯಾಂತು ಬರೆವರೆ

ಚಂಪಕ

ಸಕಳನಿಕೇತನಂಗಳೊಳೆ ದರ್ಪಕನುನ್ನತಿ ದರ್ಪಕಾಜ್ಞೆ ದ-
ರ್ಪಕನ ಕಥಾಳಿ ದರ್ಪಕನ ವರ್ಣನೆ ದರ್ಪಕನ ಪ್ರಶಸ್ತಿ ದ-
ರ್ಪಕನ ವಿಳಾಸವಿಭ್ರಮತೆ ದರ್ಪಕನುಜ್ವಳತೇಜದೇಳ್ಗೆ ದ-
ರ್ಪಕನ ಸುಕೀರ್ತಿ ದರ್ಪಕನ ದಂಡಣೆ ದರ್ಪಕನಾಣೆ ಸುತ್ತಲುಂ ೧೨೦

ರತಿಯ ವಿಳಾಸದಿಂ ರತಿಯ ವಿಭ್ರಮದಿಂ ರತಿಯರ್ಚನಾಳಿಯಿಂ
ರತಿಯತಿತೇಜದಿಂ ರತಿಯ ನೋಂಪಿಗಳಿಂ ರತಿಯಾಣೆಯೋಜೆಯಿಂ
ರತಿಯ ಸುಗೀತದಿಂ ರತಿಯ ನವ್ಯಸುಧಾರಸಪೂರಗೋಷ್ಠಿಯಿಂ
ರತಿಮಯವಾಯ್ತು ಪಣ್ಯವನಿತಾಪರಿವೀಧಿಯೊಳೆಲ್ಲಿ ನೋಳ್ಪೊಡಂ ೧೨೧

ಮತ್ತಮಲ್ಲಿ,

ಚಂಪಕ

ಉಳಿ ಕಳೆ ನಿಃಸ್ವಸಂ ಕರೆ ಸದರ್ಥನನಿಂಬಿಡು ತಂದ ಮಂಡನಂ-
ಗಳನೊಸೆದಳ್ಳಱಿಂ ರತಿಯನರ್ಚಿಸು ಕಾಮನ ನೋಂಪಿಗಿಕ್ಷುಸಂ-
ಕುಳಫಳಪುಷ್ಪಮಂ ತರಿಸು ನವ್ಯದುಕೂಲಸುಗಂಧವೃಂದಮಂ
ತಳೆ ನವನಂದನಕ್ಕೆ ನಡೆಯೆಂಬ ರವಂ ಸಲೆ ಗೇಹಗೇಹದೊಳ್ ೧೨೨

ಅಂತು ನುಡಿವ ಮದನಪ್ರತಾಪವಿತತಚತುರೋಕ್ತಿಗಳಂ ಕೇಳುತ್ತುಂ ಬರೆವರೆ ಮುಂದೊಂದೆಡೆಯೊಳ್ ಕೆಲಬರ್ ಮುಗ್ಧೆಯರ್ಗೆ ವಿದಗ್ಧೆಯರ್ ಲಲಿತಚರಿತಮಂ ಕಲಿಸುತಿರ್ದರದೆಂತೆಂದೊಡೆ

ಓದಿಸದಿರ್ ಗಿಳಿಯಂ ನಿ-
ನ್ನೀದಂತಮನೆಸೆವ ದಾಡಿಮಾಬೀಜಂ ಗೆ-
ತ್ತಾದರದಿಂ ಕರ್ಮುಕುಗುಮೆಂ-
ದೋದಿಸುತಿರ್ದಳ್ ವಿದಗ್ಧೆ ಮುಗ್ಧೆಯನೊಲವಿಂ ೧೨೩

---

೧. ಕಥಾ ( ಬ. ಯ. ಕಾ. ಟಿ. ಅ. ) ೨. ಕೀರ್ತ್ರ ( ಮ. ಯ. ಬ. ದಾ. ಅ. ಗ. ಸ. )
೩. ದಾಡಿಮದ ( ಯ. ಟಿ. ಅ. ಸ. ಗ. )

ತಿಳಿವಿಲ್ಲದೆ ಶಶಿಕಾಂತದ
ಕಳಶಮನೇಕಾಂತೆ ಕಾಂತೆ ನಿನ್ನಮುಖೇಂದೂ-
ಜ್ಜ್ವಳಕೌಮುದಿಯಿಂದೊಸರ್ದಪು-
ದಿಳಿಪಿಳಿಪೆಂದೊರ್ವ ಮುಗ್ಧೆಯಂ ಸಖಿನುಡಿದಳ್[1] ೧೨೪

ಕುಂಜದಳೇಕ್ಷಣೆ ನಿನ್ನೀ
ಮಂಜುಳರವದಿಂದೆ ಪಾಡೆ ನವಪರಪುಷ್ಟ-
ಪ್ರಾಂಜುಳಮಧುರಧ್ವನಿಯೆಂ-
ದಂಜುವರೆಲೆ ಮಗಳೆ ಪಾಡದಿರ್ ವಿರಹಿಣಿಗಳ್[2] ೧೨೫

ತಿಳಕಮುದಿಲ್ಲದೆ ಬೆಳ್ದಿಂ-
ಗಳೊಳಗೆ ನಿಂದಿರದಿರಬಲೆ ಸಕಳಂಕಂ ನಿ-[3]
ನ್ನೊಳಸೂಯೆಗೊಂಡು ನೋಡುವ-[4]
ನೆಳೆಯಳೆ ಚಂದ್ರಮನ ದಿಟ್ಟಿ ತಾಗದೆ ನಿನ್ನಂ § ೧೨೬

ಎಂದು ನುಡಿವ-ವಿದಗ್ಧೆಯರ ಪ್ರೌಢವಚನಂಗಳಂ ಕೇಳುತಿರ್ಪ ಮುಗ್ಧೆಯರೊಳೊರ್ವಳ್ ಬೆಳ್ದಿಂಗಳೊಳ್ ನಿಂದು,

ಕಳಶೋದಕದೊಳ್ ಚಂದ್ರನ
ನೆಳಲಂ ಕಂಡೆಲೆಲೆ ಸಿಲ್ಕಿದಂ ಶಶಿಯೆನುತಂ-
ದೊಳಪೊಕ್ಕು ನೋಡಿ ಕಾಣದೆ
ಗಳಿಲನೆ ತಡವರಿಸಿ ತರುಣಿ ತಳವೆಳಗಾದಳ್ ೧೨೭

ಮತ್ತಮೊರ್ವಳ್

೧. ನುಡಿಯಿಸಿದಳ್ ( ಅ. ) ೨. ವಿರಹಿಣಿಯರ್ ( ಕಾ. ಅ. ); ವಿರಹಿಗಣಂ ( ಬೆ ) ೩. ತ ( ಕಾ. ಬ. ಯ. ) ೪. ನೋಡಿದೊ । ಡೆ ( ಕಾ. ಕ. ಬ. ಯ. ಅ. ) § ೧೨೬ ನೆಯ ಪದ್ಯವು ಗ. ಪ್ರತಿಯಲ್ಲಿಲ್ಲ.

ಕರತಳಕಳಶೋದಕದೊಳ್
ಸುರುಚಿರಚಂದ್ರಮನ ನೆಳಲನೂನಂ ತೋಱು-
ತ್ತಿರೆ ಬೆಳ್ಳಿವಟ್ಟಲೆಂದಾ
ತರುಣಿ ಕರಂ ತೆಗೆದು ತೆಗೆದು ಬೆಱಗಾಗಿರ್ದಳ್ ೧೨೮

ಮಿಗೆ ದಟ್ಟಯಿಸ್ಸಿದ ಚಂದ್ರಿಕೆ
ಸೊಗಯಿಸೆ ಕಂಡೊರ್ವ ಮುಗ್ಧೆ ದುಗ್ಧಮಿದೆಂದೆಂ-
ದಗಲದೆ ಬದ್ಧಾಂಜಳಿಯಿಂ
ಮೊಗೆಮೊಗೆದಾ ಬಯಲನೀಂಟಿ ಬಳಲುತ್ತಿರ್ದಳ್ ೧೨೯

ಅದಲ್ಲದೆಯುಂ ಮತ್ತಮೊಂದೆಡೆಯೊಳೊರ್ವ ಮುಗ್ಧೆ ಮನೋವಲ್ಲಭಂ ಬಿನದದಿಂ ಬನಕ್ಕೆ ಪೋಗೆ ಸೈರಿಸಲಾಱದಿರ್ಪಲ್ಲಿ

ಮುಗುಳೊಳ್ ಕಿಡಿ ಬೆಳ್ದಿಂಗಳೊ-
ಳಗೆ ದಳ್ಳುರಿ ಪೂವಿನೊಳ್ ಪುಗುಳ್ ಮೂಡುವವೋಲ್
ಮಿಗೆ ಮುಗ್ಧೆಯೊಳತಿವಿರಹಂ
ನೆಗೆದುದು ಮತ್ತೊರ್ವರಱಿಯರಂತಿಂತುಸುರಳ್ ೧೩೦

ಒಳಗಣ್ಗಂ ಪೊಱಗಣ್ಗಂ
ಬಳಲುತ್ತೆಡೆಯಾಡುವಳ್ ಕರಂ ಬಿಸುಸುಯ್ವಳ್
ಮುಳಿವಳ್ ತನ್ನೊಳ್ ತಾನೇ
ತಿಳಿವಳ್ ಕಳೆಗುಂದುವಳ್ ಕನಲ್ವಳ್ ಕಾಯ್ವಳ್ ೧೩೧

ಒಳಗೊಳಗೆ ಬಳೆಬಳೆದು ಘಟ-
ದೊಳಗಣ ದೀಪ್ತಿಯವೊಲಿರ್ಪ ಘನವಿರಹಮನಂ-
ತೊಳಕೊಂಡು ನುಡಿಯಲಱಿಯದೆ
ಕಳೆಗುಂದಿದ ಚಂದ್ರನಂತೆ ಕರಗುತ್ತಿರ್ದಳ್ ೧೩೨

---

೧. ಕರಂದೆಗೆದು ನಿಂದು (ಅ.) ೨. ಒರಲ್ (ಶಾ. ಅ.) ೩. ಕೊರಗು (ಶಾ. ಬೆ. ಯು. ಬ. ದಾ. ಅ.)

ಇರೆ ಹರಣಂ ನಡೆತರ್ಪ-
ತಿರೆ ವಲ್ಲಭನಲ್ಲಿ ಬರೆ ಸರಾಗೋತ್ಸವದಿಂ
ಕರೆದಿದಿಗೊರ್ಂಡಿರದಿದಿಗೊರ್ಂ-
ಡೆರೆದಿದಿಗೊರ್ಂಡಪ್ಪಿಯಪ್ಪಿಯರಲುತ್ತಿರ್ದಳ್ ೧೩೩

ಭರದಿಂ ಬಂದಚ್ಚಳಿಯದೆ
ಸಿರಿಮಂಚದ ಮೇಲೆ ಲೀಲೆ ಮಿಕ್ಕಾದರದಿಂ
ತರದಿಂ ಪುಳಕಂ ನೆಗೆಯು-
ತ್ತಿರೆ ಸುರತಾಂಬುಧಿಯ ಸುಧೆಯ ಸುಳಿಯೊಳಗಿರ್ದರ್[1] ೧೩೪

ಮನವಲರೆ ಮುಖವಲರೆ ಲೋ-
ಚನವಲರೆ ಕಪೋಲವಲರೆ ಕಂಠವಲರೆ ಸು-
ಯ್ಯನುವಲರೆ ತನುವಲರೆ ಮಿ-
ಕ್ಕನುಭವಸುಖವಲರೆ ಸುರತಸುಖದೊಳಗಿರ್ದರ್[2] § ೧೩೫

ಆ ಸಮಯದೊಳ್,

ಪುದಿದಾಲಿಂಗನದೊಳಗಾ-
ವುದನಾವುದು ಸೊಂಕಿತದೆ ಮುಖೋತ್ಸವಮದೆ ಕಾ-
ಮದಮದೆ ಮದನವಿಲಾಸಾ-
ಸ್ಪದಮದೆ ಸರ್ವಾಂಗಹರ್ಷಮದೆ ಸಮಯೋಗಂ ‡ ೧೩೬

ಇಂತು ಸಮಾನರಾಗಸಂಭೂತಸುಖಮುಖದೊಳಿರ್ದು[3] ಭರಿತಮಾದ ಸುರತ[4]-ಶ್ರಾಂತಿಯಿಂ ಪೊಱಪೊಣ್ಮಿದ ಸುಖಸ್ವೇದಬಿಂದುಗಳನಾಱಿಸಲೆಂದು ಮೀಱಿ ಬಂದು ನಿಜನಿಳಯವೇದಿಕಾಮಧ್ಯದೊಳಿರ್ದ ಮುಗ್ಧೆಯರಂ ಗಿರಿಪತಿಗೆ ಸಾಗರಿಕಂ ತೋಱುತ್ತುಂ ಬರೆವರೆ ಮುಂದೊಂದೆಡೆಯೊಳೊರ್ವ ಮುಗ್ಧೆ ವಲ್ಲಭನೊಳ್ ಮುಳಿ-ದಂತೆ ಮಱೆದು ನುಡಿಯದಿರ್ಪಲ್ಲಿ ತತ್ಪ್ರಿಯನಿಂತೆಂದಂ

---

೧. ಗಿರ್ದಳ್ ( ಬ. ಯು. ಅ. ) ೨. ಸುಖದಿಂದಿರ್ದರ್ ( ಬ. ಯು. ) ೩. ಸುಖಮುಯ (ಯು.) ೪. ಸುರಸುರತ ( ಯು. ) § ೧೩೫ ನೆಯ ಪದ್ಯವು ಅ. ಪ್ರತಿಯಲ್ಲಿಲ್ಲ. ‡ ೧೩೬ ನೆಯ ಪದ್ಯವು ಓ. ಪ್ರತಿಯಲ್ಲಿಲ್ಲ.

ಮುಗ್ಧೇ ಕೈರವನೇತ್ರೆ ವಿ-
ದಗ್ಧೆಯವೋಲ್ ಮುಳಿಸನಾಂತೊಡಾ[1]ನೆಂತಿರ್ಪೆಂ
ದಗ್ಧಾಂತರಂಗನಾದೆಂ
ದುಗ್ಧಂ ವಿಷಮಾದೊಡೇನನೆಂದಪೆನಿಳೆಯೊಳ್ ೧೩೭

ಎಂದು ನುಡಿದು ಸುಖದೊಳಿರೆ ಮತ್ತಮೊಂದೆಡೆಯೊಳ್
ಬಳೆದೊಡಿಸಲೆಂದು ಸುದತಿಯ
ಕೆಳೆಯನದೊರ್ವಂ ಕರಕ್ಕೆ ಕೆಯ್ನಾಡೆ ಸುಖೋ-
ಜ್ಜ್ವಳೆಯ ಶಶಿಮುಖಿಯ ಚಿತ್ತಂ-
ಗೊಳಿಸುವ ಸಖಿ ಬೇಡಬೇಡವೆನುತುಂ ನುಡಿದಳ್ ೧೩೮

ಪರಿರಂಭಾರಂಭಣದಾ-
ತುರಸಮಯದೊಳಂ ಮನೋಹರವ್ಯಾಜದೊಳಂ
ವಿರಹದೊಳಂ ತನ್ನಿನಿಯಂ
ಬರೆ ಸುಖದೊಳಗಬಲೆಗೆಂತು ನಿಲ್ವುವು ಬಳೆಗಳ್ ೧೩೯

ಎಂದಿಂತು ನುಡಿವ ಸರಸೋಕ್ತಿಗಳಂ ಕೇಳುತ್ತುಂ ಬರೆವರೆ ಮುಂದೊಂದೆಡೆಯೊಳೊರ್ವ ಮಧ್ಯಮನಾಯಕಿಯ ವಿರಹಾತಿಶಯಮಂ ಪ್ರೇಮಸಖಿ ತನ್ನ ಕೆಳದಿಗೆ ಪೇಳುತ್ತುಮಿರ್ದಳದೆಂತೆಂದೊಡೆ,

ಆಸವಸದಿಂದಿನನುಳಿದೊಡೆ
ದೆಸೆ ಕಾವುಳಮಸಗಿ ಮಾನಿನಿಗೆ [3]ಮಧು ಮಜುಕಂ
ಸಸಿ ಬಿಸಿ ಕಾವಂ ದಾವಂ
ಬಿಸಜಂ ಬಿಸಮನಿಲನನಲನೆನಿಸಿತ್ತಾಗಳ್ ೧೪೦

ಮತ್ತಮಲ್ಲದೆ,

---

೧. ನೆಂತುಳಿವೆಂ ( ಕಾ. ಕ. ಬಿ. ) ೨. ಡೆಂತು ಸೈರಿಪೆ ( ಡಾ. ಕೊ. ) ೩. ಮನಮುಜುಕಂ ( ಕ. )

ಚಂಪಕ

ವಿರಹದೊಳೀಕೆಗಕ್ಕ ಬಿಸಜಂ ವಿಷಜಂ ಹಿಮರೋಚಿ ಸೂಚಿ ಪಾ-
ದರಿ ದರಿ ಮಾವು ಪಾವು ಕುಮುದಂ ಕುಮುದಂ ತನಿಗರ್ಬು ಮರ್ಬು ಕ-
ತ್ತುರಿಯುರಿ ಗಾಳಿ ದಾಳಿ ಕುಸುಮಂ ವಿಷಯಂ ಪೊಸಬಾಳೆ ಬಾಳ್ ವನೋ-
ತ್ಕರವುರಿ ಹಂಸೆ ಹಿಂಸೆ ಮೊರೆವಾಱಡಿಯಾಱಡಿ ತಿಂಗಳಿಂಗಳಂ ೧೪೧

ಮತ್ತಮದಲ್ಲದೆ,

ಅತಿವಿರಹದೊಳೀ ಲಲನೆಗೆ
ಮತಿ ದುರ್ಮತಿ ವೀಣೆ ಸಾಣೆ ಸೋಮಂ ಭೀಮಂ
ಲತೆಯಸಿಲತೆ ಸಂಪಗೆ ಪಗೆ
ನುತಕೀರಂ ಘೋರಮನ್ಯಪುಷ್ಟಮನಿಷ್ಟಂ, ೧೪೨

ಎಂದು ನುಡಿವಾಗಳ್

ಬಿಸಿಲ ಚಕೋರಿಗೆ ಚಂದ್ರಂ
ಪಸಿದ ಶುಕಂಗಿದಿರೊಳಮೃತಫಳಮಿದಿರ್ವರ್ಪಂ-
ತಸಮಾನಸುಧಾಶೀಲಂ
ರಸಮಯಸುಖಜಲಧಿ ವಲ್ಲಭಂ ನಡೆತಂದಂ ೧೪೩

ಚಂಪಕ.

ನಡೆತರೆ ಕಂಡು ಜೀವಮಿದಿರ್ವಂದವೊಲೊರ್ವರನೊರ್ವರೀಕ್ಷಿಸು-
ತ್ತಡಿಯಿಡುತೊಂದಿ ಮುಂದುವರಿವಿಂದ್ರಿಯದಿಂ ನಡೆ ಮುಂಚಿ ಮಾಱಿ ಬಂ-
ದೆಡೆಗುಡದಪ್ಪಿಯಪ್ಪಿ ಸಿರತಂ ಸುರತಾಬ್ಧಿಯೊಳಾಳುತೇಳುತುಂ
ಕಡೆಮೊದಲಿಲ್ಲದೆಳ್ತರದ ಕಾಮಿಗಳಿರ್ದರನೂನಸಂಗದೊಳ್ ೧೪೪

ಮಹಾಸ್ರಗ್ಧರೆ.

ಘನಗಾಢಾಲಿಂಗನಂ ಚಾಪಳಗಳಮತಿದೈನ್ಯೋಕ್ತಿಯುಕ್ತಾಧರಂ ಚುಂ-
ಬನಸೀತ್ಕಾರಂ ಸ್ಮಿತಾಸ್ಯಂ ಮುಕುಳಿತನಯನಂ ಲಾಸ್ಯನೀಲಾಳಕಂ ಕಂ-
ಪನಹಸ್ತಂ ಸ್ವೇದಗಂಡಂ ಪುಳಕಭರಿತಗಾತ್ರಂ ಸುಖಶ್ವಾಸಮಾನಂ-
ದನಿವಾಸಂ ಲೀನಚಿತ್ತಂ ಗುರುತರಸುರತಂ ಕೂಡೆ ಕೂಡುತ್ತುಮಿರ್ದರ್ ೧೪೫

---

೧. ವನೋ | ತ್ಕರಿ ಪುರಿ ( ಕಾ. ಜಿ. ) ೨. ಸಂಗದಿಂ ( ಅ. )

ನಯನಝುಷಾವಳಿಯಿಂದತಿ-
[1]ಶಯಾಧರೋದ್ಯತ್ಪ್ರವಾಳದಿಂದಂ ದ್ವಿಜಸಂ-
ಚಯಮೌಕ್ತಿಕದಿಂ ಸುರತಾ-
ಬ್ಧಿಯದೆಂತಿರೆ[2] ತೆರೆಗಳಂತೆ ಕಾದಲರಿರ್ದರ್ § ೧೪೬

ಅಂತು ಸುರತಸುಖದಿಂ ನಲಿನಲಿದು ನರ್ತಿಸುತ್ತುಂ ಮತ್ತವಾರಣದ ಮೇಲಿರ್ಪ ಮಧ್ಯಮನಾಯಕಿಯರಂ ನಾಗರಿಕಂ ನಗರಾಜಂಗೆ ತೋಱುತ್ತುಂ ನಡೆತರೆ ಮುಂದೊಂದೆಡೆಯೊಳೊರ್ವ ವಿದಗ್ಧೆ ವಿರಹತಾಪದಿಂ ನಿಲಲಾಱದೆ ನಿಜಸಖಿಗೆ ಬಿಸುಸುಯ್ಯುತ್ತುಮಿಂತೆಂದಳ್

ಮತ್ತೇಭ.

ಸಕಳಂಕಂ ಶಶಿ ಕಾಮನೀಶನುರಿಗಣ್ಣಿಂ ಜೆಂದವಂ ವಾಯು ಸ-
ರ್ಪಕದಂಬಾಶನಶೇಷವಂಗಜನ ಮಿತ್ರಂ ರಾಗಿ ಮತ್ತಾಳಿಗಳ್
ವಿಕಳಂಗಳ್ ಪಿಕನನ್ಯಪುಷ್ಟನಿವಱೊಳ್ ಸೌಜನ್ಯಮಂ ಮಾಳ್ಪುದ-[3]
ಕ್ಕೆ ಕರಂ ಕಷ್ಟಮೆಸುತ್ತೆ ಕಾಂತೆ ನುಡಿದಳ್ ಸಾಲಿಟ್ಟ ಸಂತಾಪದಿಂ ೧೪೭

ಎಂದು ನುಡಿದ ನಿರ್ವೇದೋಕ್ತಿಗಳಂ ಕೇಳಲಾಱದೆ ಪರಮಮಿತ್ರೆ ಪರಿದು ಪೋಗಿ ಮನೋವಲ್ಲಭನನೊಡಗೊಂಡು ಬರೆ ಬಂದು ನಿಂದು ಸಾಪರಾಧಿ ಸಮೀಪಸ್ಥ-ನಾಗಿ ಕುಳ್ಳಿರ್ಪಲ್ಲಿ

ಚಂಪಕ.

ಎಱಗುಗುಮೆಂದು ಮೇಲುದಿನೊಳಂಘ್ರಿಗಳಂ ಮಱೆಮಾಡುತುಂ ಸ್ಮಿತಂ
ಪೊಱಮಡೆ ಮತ್ತಮೊಂದು ನೆವದಿಂದಮೆ ಮುಚ್ಚುತುಮೆಯ್ದೆ ನೋಟಮಂ
ಮಱಿಯಿಸಿ ನೋಡುತುಂ ನಡಿಯಲುತ್ತರಮಂ ಸಖಿಗೀಯುತಿಂತು ತ-
ನ್ನೆಱೆಯನೊಳೊಲ್ದು ಕೋಪಿಸುವ ಕಾಮಿನಿಗೀ ಮುಳಿಸೊಂದು[4] ಸಾಲದೇ ೧೪೮

---

೧ ಶಯುದಧರೋದ್ಯತ್ (ಕಾ.) ೨. ದಂಪತಿದೆರೆಗಳಂತೆ (ಬ. ಮ. ಬೆ. ಯ.) ೩. ಮಾಳ್ಪುದ । ಕ್ಕೆ ( ಮ. ಬೆ. ಗೊ. ಸ. ); ನೋಳ್ಪುದ । ಕ್ಕೆ (ಅ.) ೪. ಮುನಿಸೊಂದೆ ( ಕಾ. ) § ೧೪೬ ನೆಯ ಪದ್ಯವು ಅ. ಪ್ರತಿಯಲ್ಲಿಲ್ಲ.

ಇಂತು ಮುಳಿದ ವಿದಗ್ಧನಾಯಕಿಯ ಮುಳಿಸಂ ತಿಳಿಪಿ ಸಜ್ಜೆವನೆಯ ಸಿರಿಮಂಚದ ಹಂಸತೂಳದಡಕಿಲ್ವಾಸಿನೊಳ್ ಭರದಿಂ ನೆರೆವಾಗಳ್

ಸೆಳೆಮಂಚದ ಕಳನಿನದಂ
ಬಳಸಿದ ಶಕುನಿಗಳ ನುಣ್ಚರಂ ನೇವುರದು-
ಜ್ಜ್ವಳನಾದಂ ಲಲನಾಗಳ-
ಗಳಿತಧ್ವನಿ ಬೆರಸಿ ಬಳೆದು ನೆರೆಪಿದುದಾಗಳ್ ೧೪೯

ಮಹಾಸ್ರಗ್ಧರೆ||

ಕರಘಾತಂ ಸೌಖ್ಯಜಾತಂ ಕಳರಣಿತಸಮೇತಂ ಲಸತ್ಕರ್ಣಪೂತಂ
ಸ್ಮರಯಂತ್ರಂ ಸಾರತಂತ್ರ ಘನಗಳರವಮಂತ್ರಂ ಪ್ರಮೋದಸ್ವತಂತ್ರಂ
ಸ್ಫುರಿತಾಂಗಂ ಸ್ವೇದಸಂಗಂ ಸುರತರಸತರಂಗಂ ಪ್ರರೋಮಾಂಚಲಿಂಗಂ
ಗುರುನೇತ್ರಂ ಭಾಷ್ಪಪಾತ್ರಂ ಸುಖರವಮುದಿತಶ್ರೋತ್ರಮಾನಂದಗಾತ್ರಂ ೧೫೦

ಅಂತುಮಲ್ಲದೆ,

ಗಳರವದಿಂದಪ್ಪಿಂ ಕೋ-
ಮಳರೂಪಿಂದಧರರಸದೆ ಸುಯ್ಗಂಪಿಂದಾ-
ಗಳೆ ಕಿವಿ ಮೆಯ್ ಕಣ್ ನಾಲಗೆ
ವಿಳಸನ್ನಾಸಿಕವನಲ್ಲಿ ತಣಿಪುತ್ತಿರ್ದಳ್ ೧೫೧

ಮತ್ತಮೊಂದೆಡೆಯೊಳೊರ್ವಳ್ ತನ್ನ ಮಗಳ ಸೌಭಾಗ್ಯಮಂ ಪ್ರೇಮಸಖಿಗೆ ಪೇಳುತ್ತುಮಿರ್ದಳದೆಂತೆಂದೊಡೆ,

ಮಾಳತಿಯೊಳ್ ಬಂಡುಂಡ ಮ-
ದಾಳಿಯನಳಿಮಾಲೆ ಎಜಗಿ ಬಂಡುಣ್ಬವೊಲೀ
ನೀಳಾಳಕಿಯೊಳ್ ಬೆರೆಸಿದ
ಖೇಳನ ವಿಟರೆಯ್ದಿ ಸೊಂಕಿ ಸುಖಿಯಾಗಿರ್ಪರ್ ೧೫೨

---

೧. ಹಂಸತೂಳತಲ್ಪದೊಳ್ ( ದಾ. ಅ. ಡ ). ೨. ವಾಗಳ್ (ಅ. ಕೊ.) ೩. ಸ್ತೋತ್ರ ( ಕೊ. ಗ. ) ೪. ತಣಿಪುತ್ತಿರ್ದರ್ ( ಕಾ. ಕ. ಬೆ. ). ೫. ವಿಟರೆಲ್ಲ ( ಕಾ. ಯ. ಬ. ಅ. ಡ. ).

ಅಂತುಮಲ್ಲದೆ,

ಮಹಾಸ್ರಗ್ಧರೆ.

ದರಹಾಸಶ್ರೀಗೆ ಬೆಳ್ದಿಂಗಳ ಸಿರಿ ಸರಿಯಲ್ಲಂ ಕಟಾಕ್ಷೇಕ್ಷಣಕ್ಕಾ
ಸ್ಮರಬಾಣಂ ಸಾಟಿಯಲ್ಲಂ[1] ಮಿಱುಗುವ ಕುಡುಪುರ್ವಿಂಗೆ ತಾನಿಕ್ಷುಚಾಪಂ
ದೊರೆಯಲ್ಲಂ ಚಕ್ರವಾಕಂ ನೆಲೆಮೊಲೆಗೆಣೆಯಲ್ಲಂ ಕಳಂಕಪ್ರಭೂತಂ
ಪರಿದಗ್ಧಂ ತದ್ವಿಯೋಗಾಕುಳನಬಲೆಯ ರೂಪಿಂಗದೆಂತೊಂದುಮಾಳ್ಪೆಂ ೧೫೩

ಎಂದು ಬಣ್ಣಿಸುತ್ತಿರ್ಪಿನಂ ಇತ್ತಲ್ ಮತ್ತೊಂದೆಡೆಯೊಳೊರ್ವ ವಿದಗ್ಧವಿಟಂ ವಿರಹಪರಿತಾಪದಿಂ ನಿಲಲಾಱದೆ ನಿಜಸಖಿಗಿಂತೆಂದಂ

ಮತ್ತೇಭ.

ಎರೆವೆಂ ಮತ್ಸಖಿ ತಂದು ಕೂಡು ಗುಣವೃಂದಾರಾಮೆಯಂ ರಾಮೆಯಂ
ವರಪುಷ್ಪಾಯುಧಚಾಪಸಂಯುತಮೆನಿಪ್ಪಾ ನಾರಿಯಂ ನಾರಿಯಂ
ಸ್ಮರನಾಳೋಚನೆಗಾಪ್ತೆಯಾಗಿ ನೆಲೆಸಿರ್ಪಾ ಕಾಂತೆಯಂ ಕಾಂತೆಯಂ
ತರುಣೀಸಂಘಶಿರೋಮಣಿ ಪ್ರಬಳಕೀರ್ತ್ಯಾಶಾಂತೆಯಂ ಶಾಂತೆಯಂ ೧೫೪

ಎಂದಿಂತು ಬಾಯಳಿವ ಮಿತ್ರನಂ ನಲ್ಲಳೊಳ್ ಕೂಡಿ ಸಮಸುಖದೊಳಿರಿಸೆ[3] ಮತ್ತ-ಮೊಂದೆಡೆಯೊಳ್ ವಿಟಂಗತ್ಯಾಸಕ್ತೆಯಾದ ಮಗಳ್ಗೆ ಮಾತೆ ಬುದ್ಧಿವೇಳ್ವಲ್ಲಿ,

ಚಂಪಕ.

ಮಗಳೆ ಬಿಡಾತನಂ ಬಿಡೆನವಂ ಧನಮಂ ಪಿರಿದೀಯನಿತ್ತುದೇ
ಮಿಗೆ ಪಿರಿದೆಯ್ದದೆಯ್ದುವುದು ಸಾಲದು ಸಾಲ್ವುದು ಬೇಡ ಬೇಳ್ಪುದೊ-
ತ್ತಿಗೆ ನೆಡೆ[4] ಊಹು ಮೂರ್ಖತೆಯೆ ಮೂರ್ಖತೆ ಕೆಟ್ಟಪೆ ಕೆಟ್ಟಪೆಂ ಕೆಲಂ
ತೆಗಳ್ದಿಯ ಹೈ ಕರಂ ತೆಗಳ್ದಿಯೆಂದೆನೆ[5] ಪುತ್ರಿಯನಟ್ಟಿ ಮೋದಿವಳ್ ೧೫೫

ಅಲ್ಲದೆಯುಂ ಮತ್ತಮೊಂದೆಡೆಯೊಳೊರ್ವ ವೃದ್ಧವೇಶ್ಯಾಂಗನೆ ತನ್ನ ನೆರೆ-ಮನೆಯ ಬಾಲಮುಗ್ಧೆಯ ಸೊಬಗಂ ಕಂಡು ಅಸೂಯೆಗೊಂಡು ತನ್ನೊಳಿಂತೆಂದಳ್,

---

೧. ಪಾಟಯಲ್ಲಂ ( ಮ. ಬ. ಬೆ. ಗೊ. ಅ. ಕ. ) ೨. ನಿಡು ( ಮ. ಬ. ) ೩. ಕೂಡೆ ಸಮಸುಖದೊಳಿರೆ ( ಕಾ. ) ೪. ನಡೆಯೊಲ್ಲೆ ( ಅ. ) ೫. ತೆಗಳ್ದನೆಂದೆನೆ ( ಅ. )

ಚಂಪಕ

ಮೊಲೆ ಮುಗುಳೊತ್ತವಕ್ಷಿ ಚಪಳತ್ವಮನೆಯ್ದುವು ಬಾಸೆ ಬಾರದು-
ಜ್ಜ್ವಳಿಸದು ಭಾಳಲೇಖೆ ವದನಂ ಮದಪೇಱದು ನೋಡೆ ತಳ್ತು ಕಣ್-
ಗೊಳಿಸುದು ಮೇಲುದಗ್ಗಳಿಪ ಸೋಟಮುಗುರ್ವಿಪ ಮಧ್ಯಮೊಪ್ಪುವೀ
ತಿಳಕಮನೂನಗರ್ವಮೊಲವಿಂ ನೆಲೆಸಿರ್ಪುದು ಚೋದ್ಯಮಲ್ಲವೇ ೧೫೬

ಎಂದು ತನ್ನೊಳ್ ತಾನೇ ಜಿನುಂಗಿ ನುಡಿವ [1]ಮುದುಪಾಱಿಯಂ ನೋಡುತುಂ ನಗುತುಂ ಬರೆ ಮುಂದೊಂದೆಡೆಯೊಳೊರ್ವ ಲಲನೆ ತನ್ನೋಪನಿಂದಾದ ಬೇಸಱಿಂ ನಿಜಸಖಿಗೆ ಪೇಳುತಿರ್ದಳದೆಂತೆಂದೊಡೆ

ಉತ್ಪಲ.

ಆದರಿಪಂತೆ ಸಾರ್ವನುಪಚಾರಮನಾಡುವನಿತ್ತುದಂ ಸಮಂ-
ತೋದುವನಾವಗಂ ಕಟಕಿಯಂ ನುಡಿವಂ ನಗುವಂತೆ ಕೋಪಿಪಂ
[2]ಸಾಧಿಸುವಂ ದಿಟಂ ಪುರುಡಿಪಂತೆ ನೆಗಳ್ಚುವನಟ್ಟಿ ಪತ್ತುವಂ
ಪೋದೊಡೆ ಪೋಗನಿರ್ದೊಡಿರನೀ ಶನಿಯಂ ಸಖಿಯೆಂತು ನೀಗುವೆಂ ೧೫೭

ಎಂದು ನುಡಿದ ನಿರಾಶಾವಚನಂಗಳಂ ಕೇಳುತ್ತುಂ ಬರೆವರೆ ಮುಂದೊಂದೆಡೆ-ಯೊಳನೇಕನವೀನರತ್ನಮಯದರ್ಪಣಕನಕಕಳಶವಿಚಿತ್ರಪರಿಶೋಭಿತಮಾಗಿ ನವೀನ-ಕ್ರೀಡೆ ತವಿಲಿಲ್ಲದ ನವಿಲುಯ್ಯಲ ಮುಂದೊರ್ವ ವಿದಗ್ಧವನಿತೆ ಸಖೀಜನಂಬೆರಸು ಬೆಳ್ದಿಂಗಳನಿದಿರ್ಗೊಂಡು ವಸಂತಂಗೆ ಪೊಸತಳಿರ್ಗಳ ಪಸೆಯಂ ತಂದಿಕ್ಕಿ ಕಾಮಂಗೆ ಸಣ್ಣನನೆಗಳ ಪುಷ್ಪಾಂಜಳಿಯನಿತ್ತು ರತೀದೇವಿಗೆ ಮೆಯ್ಯಿಕ್ಕಿ ಚಂದ್ರಂಗೆ ಕುಸುಮ-ರಸದರ್ಘ್ಯಮಂ ಕೊಟ್ಟು ಗಿಳಿಹಂಸೆಕೋಗಿಲೆಗಳನುಚಿತಾಹಾರದಿಂ ತಣಿಸಿ ಮುಂದ-ಯ್ಸಿದ ಸತಿಯರ ಸಂದಣಿಯೊಳಾಂದೋಳಮನೇಱಿದಾಗಳ್,

ಏಱಿದ ಮಣಿಯುದಯನಗಂ
ತೋಱಿದ ಮುಖಬಿಂಬಮಿಂದುಬಿಂಬಮಪಾಂಗಂ
ಮೀಱಿದ ಚಂದ್ರಿಕೆಯೆನೆ ಕಳೆ-
ಯೇಱಿದ ಪಡಿಚಂದ್ರನಂತೆ ಸೌಂದರಿಯೆಸೆದಳ್ ೧೫೮

---

೧. ಮುಡಿಪಾರಿಯುಂ ( ಕಾ. ) ೨. ವಾದಿ ( ಅ. )

ಉತ್ಪಲ

ನೋಡುವನೇಕಸದ್ವಿಟಜನಂಗಳ ಪೆಣ್ಗಳ ಕಣ್ಗಳಾಡೆ ಕೊಂ-
ಡಾಡುವ ತತ್ಸಖೀಕುಲದ ಚಾಗದ ಭೋಗದ ರಾಗಮಾಡೆ ತೂ-
ಗಾಡುವ ಬಾಲಕೀವ್ರಜದ ಕಂಕಣಝುಂಕೃತಿ ಭೋಂಕನಾಡೆ ತಾ-
ನಾಡಿದಳುಯ್ಯಲಂ ಮುಖಶಶಿಪ್ರಭೆ ಮುಚ್ಚಿ ಮುಸುಂಕೆ ಚಂದ್ರನಂ ೧೪೯

ಇಂತಾಡುವ ಸಖೀನಾಂದೋಳನಕ್ರೀಡೆ ಕಡೆಯಾದನೇಕಮದನಮಹೋತ್ಸಹಂಗಳಂ ನೋಡುತ್ತುಂ ಪಣ್ಯಾಂಗನಾವೀಥೀವಿಸರಮುಂ ಕಳೆದು ಬಂದು ರಾಜನಿಳಯದ್ವಾರದ ಮುಂದೆ ನಿಂದಿರೆ ನಾಗರಿಕನಿಂತೆಂದಂ,

ದೀಪ್ತಿಯನುಳಿದುವು ಭಗಣಂ
ಸುಪ್ತಜನಂ ನಿದ್ರೆದಿಳಿದುದಿದೆ ಕೋಕಂ ತ-
ನ್ನಾಪ್ತನನಜಸುತ್ತಿರುಳ ಸ-
ಮಾಪ್ತಿ ಕರಂ ಹತ್ತೆಸಾರ್ದುದಚಳಾಧೀಶಾ ೧೫೦

ಬರವಂ ಬಯಸುತೆ ಕುಳಿರೆಂ-
ಬರವಂ ಮಿಗೆ ಪತ್ತೆ ಸಾರುತಿಂತಿವೆ ಚಕ್ರಂ
ಅರುಣೋದಯಮಂ ಸೂಚಿಸು-
ತರುಣೋದಯಮಿತ್ತಲಾಗುತಿದೆ ಗಿರಿರಾಜಾ ೧೫೧

ಎಂದು ನುಡಿವ ನಾಗರಿಕನ ಬಿನ್ನಪಮಂ ಕೇಳ್ದು ಅರಮನೆಯಂ ಪೊಕ್ಕು ಗಿರಿರಾಜಂ ನಿರ್ಮಳೀಕೃತಕರಚರಣನುಂ ನವ್ಯವಸ್ತ್ರಪರಿಶೋಭಿತನುಂ ವಿಭೂತಿವಿಳಸಿತಸರ್ವಾಂಗನುಂ ರುದ್ರಾಕ್ಷಾಲಂಕೃತಶರೀರನುಂ ಶಿವಲಿಂಗಪೂಜಾವಿರಚಿತಹಸ್ತಕಮಳನುಂ ತತ್ಪಾದವಂದನಾಸಕ್ತನುಂ ಪಾದೋದಕಪ್ರಸಾದಸಂತುಷ್ಟಹೃದಯನುಂ ಕರ್ಪೂರತಾಂಬೂಲಮುಖವಳಯನುಮಾಗಿ ಸಭಾನಿಳಯಕ್ಕೆ ನಡೆತಂದು ನಾರದ-

---

೧. ಜನದ ( ಕಾ. ಕ. ) ೨. ತಾತ್ಪರ್ಯವಂದನಪ್ರಕರನುಂ ( ಬ ಪಾ. ಪು. ಮ. ಅ. ಕ. ಗ. ); ತಾತ್ಪರ್ಯವಂದನಾಸಕ್ತನುಂ ( ಬಿ. )

ಮುನಿಯಂ ನಾ¹ಕಲೋಕಕ್ಕೆ ಕಳುಪಿ, ಪೂರ್ವಾಚಳಮನೇಱಿದ ಭಾಸ್ಕರನಂತೆ ಸಿಂಹ-
ವಿಷ್ಟರೋಪವಿಷ್ಟನಾಗಿರ್ದನಾ ಪ್ರಸ್ತಾವದೊಳ್

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೬೨

ಗದ್ಯ.

ಇದು ಸಮಸ್ತಸುರಾಸುರನಿಕರಮುಕುಟಖಚಿತದಿನಕರಕರಾಧಿಕ್ಯಮಾಣಿಕ್ಯ-
ಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕ-
ರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ಪಾರ್ವತೀಯೌವನ ರಾತ್ರಿವಿಹಾರವರ್ಣನಂ ಚತುರ್ಥಾಶ್ವಾಸಂ.



೧. ನಾಗ (ಕಾ. ಅ.)

# ಪಂಚಮಾಶ್ವಾಸಂ

## ವಿರೂಪಾಕ್ಷದರ್ಶನ ಪುಷ್ಪೋಪಚಯ ಪೂಜಾವರ್ಣನಂ

ಶ್ರೀಗಂಗಾಧರನಭವಂ
ಶ್ರೀಗೌರೀವರನುದಾರಪಾರಾವಾರಂ
ಶ್ರೀಗುರು ಹಂಪೆಯ ಶಂಕರ-
ನೀಗೆಮಗೆ ಮನೋರಥಂಗಳಂ ಕೃಪೆಯಿಂದಂ ೧

ಮಹಾಸ್ರಗ್ಧರೆ

[೧]ಸರಸೀಸಂಜಾತಜಾತೋನ್ನಿಶಿತನಿಶಿ[೧]ತಸೌರಂಭಸಂಪಾದನಾದಂ
ಧರಣೀದಿಗ್ವ್ಯೋಮಭಾಗಾವೃತಭರಿತಘನಧ್ವಾನಸಂಭೇದನಾದಂ
ಸುರತಾಸಕ್ತವ್ರಜಾಲಿಂಗನಚಲನಕರಪ್ರೌಢಿತಾನಾದನಾದಂ
ಪರೆದತ್ತಾದಂ ಪ್ರಮೋದಂ ಶಿವನಿಳಯಕುಳೋತ್ಪಾದಮಾ ಶಂಖನಾದಂ ೨

ಚಂಪಕ.

ಮುಗಿಯಲೊಡರ್ಚೆ ನಿಂದ ಕುಮುದಾವಳಿಯಂ ಸರಸೀರುಹಂ ಮುಗಳ್-
ನಗೆ ನಗುವಂತಿರಿರ್ದುವು ಚಕೋರಿಗಳಸ್ತಗಿರೀಂದ್ರದತ್ತಲು-
ಬ್ಬೆಗದೊಳೆ ನೋಡುತಿರ್ದುವು ರಥಾಂಗಯುಗಕ್ಕೆ ಮನೋಜನೇಸು ಮೆ-
ಲ್ಲಗೆ ತೊಲಗುತ್ತುಮಿರ್ದುದುದಯಾದ್ರಿಗೆ ಗೋಪತಿ ಬರ್ಪ ಪೊಳ್ತಿನೊಳ್ ೩

ಕೆಂಪೇಱಿತು ಮೂಡಣ ದೆಸೆ
ಸೊಂಪೇಱಿತು ಚಕ್ರಮಿಥುನಮಬ್ಜಕದಂಬಂ
ಕಂಪೇಱಿತು ಸಕಳಜಗಂ
ಪೆಂಪೇಱಿತು ಪದ್ಮಮಿತ್ರನುದಯಿಸುವಾಗಳ್ ೪

---

೧–೧. ಸರಸೀಸಂಭೂತಜಾತಸ್ಮಿತತತಿಯುತಿ ( ಓ. ); ಸರಸೀಸಂಜಾತಜಾತೋಸ್ಮಿತತತಿಯುತಿ ಅ.) ೨. ಸಂಭೇರಿ ( ಸೆ. ) ೩. ಪ್ರಜಾಲಿಂಗನ ( ಶಾ. ದಾ. ಬೆ. ಅ. ಸೆ. ಓ. ) ೪. ಜನಂ ( ಶಾ. ಬ. ಯು. ದಾ. ಅ. ಕ. )

ಉರ್ಕುಡುಗಲ್ ಕುಮುದಂಗಳ್
ಸೊರ್ಕೊಗೆಯಲ್ [೧]ಕಮಳಚಕ್ರಪಕ್ಷಿ[೧]ಯುಗಂಗಳ್
ತರ್ಕಯ್ಸಲ್ ತಮಮಾಗಳ್
ಬರ್ಕಟಬಯಲಾದುದರ್ಕನುದಯಿಸುವಾಗಳ್ ‡ ೫

ಇಳೆಯ ಮುಸುಂಕಂ ಮೆಲ್ಲಗೆ
ಕಳೆಯುತ್ತೆಳ್ಚಱಿಸುತುಂ ರಥಾಂಗಮನಬ್ಜಂ-
ಗಳನೆವೆದೆಱೆಯಿಸುತುಂ ದೆಸೆ-
ಗಳನೆಬ್ಬಿಸು[೨]ತೆಳ್ದುವಾಗ[೩]ಳಿನನ ಕರಂಗಳ್ ೬

ಮತ್ತಮಲ್ಲದೆ,

ಕೊರಗಿಸಿ ಕುಮುದವನೆಬ್ಬಿಸಿ-
ಯರವಿಂದಮನಂಧತಮಮನೋಡಿಸಿ ದೋಷಾ-
ಕರನಂ ಕಳೆಗುಂದಿಸಿ ಪರಿ-
ವರಿದುವು ತರಣಿಯ ತಳಾಜಿರಂತಿರೆ ಕಿರಣಂ ೭

ಆ ಸಮಯದೊಳ್

[೪]ಮುದುಡಿಸುತುಂ ಕೈರವಮಂ
ಜಿದಱಿಸುತುಂ ಕೌಶಿಕಂಗಳಂ ಘನಪಥದೊಳ್
[೫]ಕೆದಱುತ್ತುಂ ಕಿರಣಾಳಿಯ-
ನುದಯಾಚಳಚೂಡದಲ್ಲಿ ಮೂಡಿದನರ್ಕಂ ೮

ಕಮಳಾಕರದಮಳ್ವಕ್ಕಿಗ-
ಳ ಮನೋರಥಮಲರೆ ವಾಸವಾಶಾಮುಖದೊಳ್
[೬]ತಮಮೆಂಬನೆದೆಗೆಯುತ್ತಿ[೬]ರೆ
ವಿಮಳಜಗಚ್ಚಕ್ಷು ತೊಳಗಿ ಬೆಳಗುತ್ತಿರ್ದಂ ೯

---

೧-೧. ಸರಸಿಜಂ ರಥಾಂಗ (ಸೆ.). ೨. ತಿರ್ದು (ಕಾ. ಯ.) ೩. ಇನಕಿರಣಂಗಳ್ (ಗ). ೪. ಮುದುಗಿಸುತುಂ (ಮ. ಅ. ಕ. ಬ.); ಮುದವುಡಿಗಿಸಿ (ಯ. ಬೆ. ದಾ. ಕೊ.). ೫. ಕೆದಱುಸುತುಂ (ಮ. ಗೊ. ಕ. ಡ. ಗ. ಓ.). ೬-೬. ತಮದೆರ್ದೆಯೊಡೆಯುತ್ತಿರೆ ತಾಂ (ಕ. ಗ.)

ಅಂತಾದ ಸೂರ್ಯೋದಯದೊಳ್ ಸಕಳಶಿವಾಲಯಪ್ರೋದ್ಭೂತಮಪ್ಪ ಪಂಚಮಹಾಶಬ್ದಮುಂ ತಟಾಕತೀರಸ್ಥಿತಸಂಧ್ಯಾವಂದನಾಸಕ್ತಧರಾಮರಪ್ರಕರಮುಂ ಗಜಶಿಕ್ಷಾಪ್ರಾರಂಭಸಮಯಸಂರಂಭಸಂಯುಕ್ತಸುಭಟಾರೋಹನಿಕಾಯಮುಂ ಹಯಶಿಕ್ಷಾವಾಹಕವ್ಯೂಹಮುಖರಮುಖಜನಿತನಿಬಿಡನಿರ್ಘೋಷಮುಂ ಸೇವಾಭರಧರಾಧೀಶ್ವರಪ್ರಕರಸಂರಂಭಮುಂ ರಾಜನಿಳಯಾಗಮಲಂಪಟಲಲಿತಲಲಿತಾಂಗೀವಿತಾನವಿಸ್ತಾರಹಸ್ತಕಟಕಮಂಜೀರಸಂಜನಿತಮಧುರಧ್ವನಿಯುಂ ನರ್ತಕನರ್ತಕೀನಿಕರವೈತಾಳಿಕಾದಿ ವಂದಿಮಾಗಧಸ್ತೋತ್ರಧರಾಮರಪರಮಾಶೀರ್ವಾದಕದಂಬಧ್ವನಿಯುಂ ಪುರದೊಳಂ ರಾಜಮಂದಿರದೊಳಂ ನೆಗಳೆ ಪರಮಹರ್ಷದಿಂ ಗಿರೀಶ್ವರಂ ಪ್ರಭಾತಸಮಯಸಮುಚಿತಾಸ್ಥಾನನಾಗಿ ಕುಳ್ಳಿರ್ದು ನೆನೆದುನೋಡಿ ನಾರದಮುನೀಶ್ವರನಱಿಪಿ ಪೋದುದಂ ಕುಱುಪುಗೊಂಡು ಹೈಮವತಿಯಂ ಹೇಮಕೂಟದೊಳಿರ್ಪ ಪರಂಜ್ಯೋತಿಸ್ಸ್ವರೂಪನಪ್ಪ ಶ್ರೀವಿರೂಪಾಕ್ಷನಲ್ಲಿಗೆ [೧]ಕಳುಪಲೆಂದು ಮನದಂದೋಲಗಮಂ ಪರೆಯಲ್ವೇಳ್ದು,

ಮಹಾಸ್ರಗ್ಧರೆ

ಗಿರಿರಾಜಂ ನಾರದಂ ಪೇಳ್ದತಿಹಿತವಚನಮಂ ಚಿಂತಿಸುತ್ತಲ್ಲಿ ನಾನಾ-
ವರವಾರಸ್ತ್ರೀಯರೊಳ್ ತಾಂ ಜಯೆವಿಜಯೆಯೆನಿಪ್ಪಿರ್ವರಂ ಕೂಡಿಕೊಂಡೊ-
ಪ್ಪಿರೆ ಮೂಱುಂ ಪುಷ್ಪಕಂಗಳ್ ಬರೆ ನಿಜಸುತೆಯಂ ಶಾಂತೆಯಂ ಸತ್ಯೆಯಂ ಶಾಂ-
ಕರಿಯಂ ಶರ್ವಾಣಿಯಂ ಶಾಶ್ವತಗುಣನಿಧಿಯಂ ಬಾರೆನುತ್ತಿರ್ದನಾಗಳ್ ೧೦

ಗಿರಿಪತಿ ಕರೆದೊಡೆ ಪುಳಕಾ-
ಭರಣೆ ಮಹಾದೇವಿ ಮಾನಿ ಶರ್ವಾಣಿ ಕೃಪಾ-
ಕರೆ ಹಂಸಯಾನೆ ಬಿಂಬಾ-
ಧರೆ ತಂದೆಯ ಮುಂದೆ ಬಂದು ನಿಂದಿರ್ದಾಗಳ್ ೧೧

---

೧. ಸಮರ್ಪಿಸಲೆಂದು ( ಕಾ. ಬೆ. ಸೆ. ).

ಮಹಾಸ್ರಗ್ಧರೆ.

ಪದೆಸಿಂದಂ ಬಂದು ಮೇನಾಸತಿ ನಿಜಸುತೆಯಂ ನೋಡಿ ಮುಂಡಾಡಿ ದೇವೀ-
ಸದಳಂಕಾರೈಕಪಾತ್ರೇ ಪುಲಿ ಕರಡಿ ಮಹಾ^೧^ಸರ್ಪ ನಮ್ಮಾವು^೧^ ಸಿಂಹಂ
ಮದವನ್ಮಾತಂಗನುಗ್ರಗ್ರಹವಿಡಿದ ಬಿದಿರ್ ಬೆತ್ತವುಂಟಲ್ಲಿ ತಾಯೇ
ಪದುಳಂ ಪೋಗವ್ವ ಪೋಗೆಂದತಿಭಯರಸದಿಂ ಬುದ್ಧಿವೇಳುತ್ತುಮಿರ್ದಳ್ ೧೨

ಎಂದಿಂತು ಪೇಳೆ ಕೇಳ್ದು ಮನದೊಳ್ ನಸುನಗುತ್ತುಂ ಮಾತೆಯ ಮಾತಿಗೊಂಡಂ-ಬಟ್ಟು ವಿನಯವಿನಮಿತೆಯಾದ ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ ಬಿಜಯಂಗೆಯ್ಸಿ ತಾನುಂ ಕುಳ್ಳಿರ್ದು ಪಿಂತಣ ವಿಮಾನಂಗಳೊಳ್ ಜಯವಿಜಯೆಗಳಂ ಏರಲ್ವೇಳ್ದು ಗಗನಕ್ಕೆ ನೆಗೆದು ಮಿಾಱಿ ಪಾಱಿ ತ್ರ್ಯಕ್ಷನಂ ನೆನೆದು ದಕ್ಷಿಣಾಭಿಮುಖನಾಗಿ ನಡೆತರ್ಪಾಗಳ್,

ಮಹಾಸ್ರಗ್ಧರೆ.

ಪಲವುಂ ದೇಶಂಗಳಂ ಭಾಸುರನಗರಿಗಳಂ ತತ್ತಟಾಕಂಗಳಂ ನಿ-
ಶ್ಚಲಕೇದಾರಂಗಳಂ ಪರ್ವತವಿತತಿಗಳಂ ವಿಂಧ್ಯಸಂದೋಹಮಂ ನಿ-
ರ್ಮಲಕಾಸಾರಂಗಳಂ ತಾವರೆಗಳನಳಿಯಂ ಹಂಸಮಾಲಾವಿಳಾಸೋ-
ಜ್ಜ್ವಲಮಂ ನೋಡುತ್ತೆ ತೋಱುತ್ತಗಜೆಗೆ ನಗನಾಥಂ ಬರುತ್ತಿರ್ದನಾಗಳ್ ೧೩

ಇಂತಿಂತು ನೋಡುತುಂ ಬರೆ
ಮುಂತಿರ್ದುದು ತರಳತರತರಂಗಪ್ರಯುತಾ-
ನಂತನವಫೇನಜಲಚರ-
ಸಂತಾನಂ ತುಂಗಭದ್ರೆ ಗಂಗಾಪ್ರಾಯಂ ೧೪

ಇರೆ ಕಂಡು ಕೊಂಡುಕೊನೆಯುತೆ
ಗಿರಿರಾಜಂ ನಿಜತನೂಜೆಗಱಿಪಿದನತ್ಯಾ-
ದರದಿಂ ಭರದಿಂ ಪರಿದುದು
ಸುರುಚಿರನದಿ ತುಂಗಭದ್ರೆಯೆಂಬುದು ಪೆಸರಿಂ ೧೫

೧–೧ ಸರ್ಪನಮ್ಮಾವು ( ಮ. ಬೆ. ದಾ. ಅ. ಕ. ಬ. ); ಸರ್ಪನಮ್ಮೂಹ (ಯ); ಸರ್ಪನುಂ ಘೋರ (ಪೆ) ೨. ಮಾತಿನೊಳೊಡಂಬಟ್ಟು ( ಮ. ಬ. ಯ. ದಾ. ಗೊ. ) ೩. ಪುಗ (ಗ). ೪–೪. ದಕ್ಷಿಣಾಭಿಮುಖನಾಗಿ ( ಮ. ಬ. ಅ. ದಾ. ಗ. ಓ.). ೫. ರಾಜಂ ( ಕಾ. ಬೆ. ). ೬. ವಹ ( ಮ).

ಚಂಪಕ.

ತರಳತರಂಗಮುದ್ರೆಯನನೇಕಮುನೀಂದ್ರಮನಸ್ಸುಭದ್ರೆಯಂ
ಪರಮಸುಧಾರಸಾರ್ದ್ರೆಯನಪಾರಗಭೀರಸಮುದ್ರೆಯಂ ಪರಾ-
ಪರಸುಖನಿದ್ರೆಯಂ ದುರಿತಮಾಲೆಗುಪದ್ರೆಯನತ್ಯನೂನವಿ-
ಸ್ತರಸುಕೃತಾರ್ದ್ರೆಯಂ ನೆರೆ ನಿರೀಕ್ಷಿಸು ಪಾರ್ವತಿ ತುಂಗಭದ್ರೆಯಂ ೧೬

ತಡಿವಿಡಿದೊಪ್ಪುವಾಮ್ರವರನೇಱಲಶೋಕೆ ಕವುಂಗು ತೆಂಗು ಕ-
ಪ್ಪಿಡಿದ ತಮಾಲವಿಾಳೆ ನವದಾಡಿಮವೀಥಿ ಲವಂಗ ಲುಂಗವಿಂ-
ಪೊದರಿಪ ಬಾಳೆ ಪಕ್ವಫನಸಾವಳಿ ನಿಂಬಕದಂಬಮಿಂಬುಗೊಂ-
ಡಡಸಿದ ಮಾತುಳಂಗತತಿ ಪೂಗಕುಲಂ ಸಲೆ ತುಂಗಭದ್ರೆಯೊಳ್ ೧೭

ಮತ್ತಮಲ್ಲದೆ,

ನೆನೆದನೆ ಧನ್ಯಂ ನೋಡಿದ-
ನನಘಂ ಸೋಂಕಿದವನಮರನಘನುರ್ವಣಮಿ-
ರ್ದನೆ ಗಣನಾಥಂ ಸೇವಿಸಿ-
ದನೆ ಮುಕ್ತಂ ಕೇಳ ತುಂಗಭದ್ರೆಯ ಜಳಮಂ ೧೮

ಎಂದು ಪೇಳುತ್ತುಂ ತೋಱುತ್ತುಮಿರ್ಪಲ್ಲಿ,

ಮಹಾಸ್ರಗ್ಧರೆ

ತರದಿಂ ಕುಳ್ಳಿರ್ದ ಸಂಧ್ಯಾಸಮಯವಿಮಳಮಂತ್ರಾಕ್ಷರಸ್ತೋಮಶೋಭಾ-
ಕರವಕ್ತ್ರಾನೀಕದಿಂದೊಪ್ಪುವ ಮುನಿತತಿಯಂ ಪರ್ಣಶಾಲಾಂತ್ಯದೊಳ್ ಭಾ-
ಸುರಶಂಭುಧ್ಯಾನನಾನಾಜಪನಿಯಮಸದಾಹೋಮದಿಂದಿರ್ಪ ವಿಪ್ರೋ-
ತ್ಕರದಿಂದಂ ತುಂಗಭದ್ರಾತಟಮೆಸೆದುದು ಹೇಮಾಚಳಪ್ರಾಂತಕಾಂತಂ ೧೯

ಮತ್ತಮಾ ತುಂಗಭದ್ರೆ ಶಿವನ ಕೀರ್ತಿಯಂತೆ ಭುವನಭರಿತಮುಂ ಪಾರ್ವತೀವಿಳಾಸದಂತೆ ಶೀರದೊಪ್ಪಮುಂ ಅಮರಾವತಿಯಂತನಿಮಿಷಪ್ರಕರಮುಂ ಕಱಿಗೊರಲನಂತೆ ವಿಷಭಂಗಮುಂ ಗಗನತಳದಂತೆ ವಕ್ರಗತಿಯುಂ ದ್ವಿಜರಾಜಶೋಭಿತಮುಮೆನಿಸಿರ್ದುದಾ ನದಿಯುಭಯತಟವಿಳಸಿತವನಾವಳಿಯಲ್ಲಿ,

---

೧ ಮನೋನು (ಮ); ಮನೋಸು (ಬಿ. ದಾ. ಬ.). ೨. ಪರೀಕ್ಷಿಸು (ಮ. ಬ. ಯ.). ೩. ಸಂಗದಿಂ (ಬ. ಯ.); ಸಂಗವಿಂ (ಸೆ). ೪. ಬಿಲ್ವ (ಯ. ದಾ. ಬ. ಸೆ.). ೫. ಸೊಂಕಿದನೆ ಅಮರ (ಕ. ಕಾ.). ೬. ಭದ್ರಾ (ಬ ಬಿ. ಯ.). ೭. ಘನಮುಂ (ಓ.). ೮. ನಿಗಮ (ಅ.).

ಚಂಪಕ.

ಪಱಿದೆಲೆಯಿಟ್ಟು ಪಲ್ಗಿಱಿದು ಹಱಿರ್ನುತುರ್ಬುತೆ ಪುರ್ಬನೇಱಿಸು-
ತ್ತುಱುಗಿಸಿ ನೋಡಿ ದಾಂಟಲನುಗೆಯ್ಯುತೆ ತೂಗುತೆ ಝುಂಕಿಸುತ್ತೆ ಬಾ-
ಯ್ದೆಱೆದೊಲೆಯುತ್ತೆ ಕೆಯ್ಗಳನೆ ಕೂನಿಸಿ ಕುರ್ಗುತೆ ಏಡಿಸುತ್ತೆ ತಾಂ-
ನೆಱೆ ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ ೨೦

ಅಂತು ಪರಿಹಾಸರಸಮಂ ಮುನಿಗಳ ಮೊಗಕ್ಕೆ ನೊಗೆದು ಚೆಲ್ಲುವಂತೇಡಿಸುವ ಕೋಡಗಂಗಳಂ ನೋಡುತ್ತುಂ ಬರೆವರೆ ಮುಂತನಂತಗುಲ್ಮಲತಾವೃಕ್ಷಗುಹಾಗಹ್ವರಂಗಳೊಳ್ ಶಿವಧ್ಯಾನನಾನಾತಪೋಭರಭರಿತಮಾದ ಮನುಮುನಿಸ್ತೋಮದಿಂ ಹೇಮಕೂಟಾಚಳಪ್ರಾಂತಮಿರ್ದುದದೆಂತೆಂದೊಡೆ,

ಮಹಾಸ್ರಗ್ಧರೆ.

ಪರಮಾರ್ಥಂ ಪುಣ್ಯತೀರ್ಥಂ ಮೃಗಪತಿನಿಕರಸ್ವಾರ್ಥಮುದ್ಯತ್ಸದರ್ಥಂ
ಸುರಭೂಜಂ ಶೈವತೇಜಂ ವಿಮಳಮುನಿಸಮಾಜಂ ನಗವ್ರಾತರಾಜಂ
ಸ್ಥಿರಶೀಲಂ ದಂತಿಜಾಲಂ ಸುಕೃತಪರಿವೃತಸ್ಥೂಲಮೊಪ್ಪಿತ್ತು ಶೈಲಂ
ವರಕೂಟಂ ಶೃಂಗಮಾಟಂ ಮೃಗಧರಧರಜೂಟಂ ಕರಂ ಹೇಮಕೂಟಂ ೨೧

ಆ ಶೈಲದಲ್ಲಿ,

ತರುತರುಗಳೊಳಗನಾದಿಯ
ಹಿರಿಯರತಿವ್ರತಿಗಳಚಳರಾರೂಢರ್ ಭ-
ಕ್ತಿರಸಾವಿಷ್ಟರ್ ನಿಯತರ್
ಪರಮತಪೋನಿಧಿಗಳಧಿಕರುನ್ನತರಿರ್ಪರ್ ೨೨

ವೇದಕರೀಶನ ಭಕ್ತಿಯ
ಬೋಧಕರುರುಸಾತ್ವಿಕರ್ ಸದರ್ಥರ್ ಸಿದ್ಧರ್
ಸಾಧಕರುತ್ತಮರಭವಾ-
ರಾಧಕರತಿಸಾಧುಗಳ್ ವಿರಾಜಿಸುತಿರ್ಪರ್ ೨೩

---

೧. ಕೆಯ್ದೆಗಹಿ ತೂಗಿಸಿ ( ಯ. ); ಕೆಯ್ನೆಗೆಪಿ ಜಾಗಿಸಿ ರಾ. ); ಕೆಯ್ನೆಗೆಪಿ ಕೊನಿಸಿ ( ದಾ ). ೨. ಕೋಡಗಂ ( ದಾ ). ೩. ಮರ್ಕಟಂಗಳಂ ( ಗೊ. ಸೆ. ). ೪–೪. ಭ । ಕ್ತಿರಸರ್ ನಿಯುತರ್ ವಿರತರ್ ( ಯ ); ಭ । ಕ್ತಿರಸಾವಿಷ್ಟರ್ ಪುಷ್ಟರ್ ( ಬ. ಮ. ) ೫. ನಿಷ್ಠುರಧಿಕ ( ಯ ). ೬–೬. ವೇದಕರುನ್ನತರೀಶನ ( ಒ ); ವೇದಕ್ಕತಿಶಯಭಕ್ತಿಯ ( ಯ ). ೭. ರಾಜಿ ( ಅ ).

ನಿರತರ್ ಭರಿತರ್ ಚರಿತರ್
ಪರತತ್ತ್ವರತರ್ ಸುತರ್ ವಿಕರ್ತನತೇಜಃ-
ಕಿರಣರ್ ಕರುಣರ್ ಶರಣರ್
ಕರುಣಾಳುಗಳರುಣಮಣಿನಿಭರ್ ನೆಲಸಿರ್ದರ್ ೨೪

ಅಂತವರ ನಿಸ್ಸೀಮತಪಃಪ್ರಭಾವಮಂ ನೋಡುತ್ತುಂ ಬರ್ಪಾಗಳ್,

ಕರೆಯವು ಕೋಗಿಲೆ ಮಧುಪಂ
ಮೊರೆಯವು ಗಿಳಿ ಗಳಪವನಿಲನಲ್ಲಾಡಂ ಪೆರ್-
ಮರನಂ ಗಿಡುವಂ ಲತೆಯಂ
ಗುರುಶರ್ವಸಮಾಧಿಭೀತಿಯಿಂದಾ ನಗದೊಳ್ ೨೫

ಅಂತವಱನೀಕ್ಷಿಸುತ್ತುಂ ಒರೆವರೆ ಮುಂತೆ,

ಸ್ರಗ್ಧರೆ.

ಭಾನುಪ್ರದ್ಯೋತಕಾಯಂ ನುತಸುಕೃತನಿಕಾಯಂ ವಿಮಾಯಂ ಮಹೇಶ-
ಧ್ಯಾನಾರೂಢಂ ಸಗಾಢಂ ಸದಮಳಗುಣಚೂಡಂ ಶಿವಜ್ಞಾನಲೀಢಂ
ಶ್ರೀನಂದೀಶಂ ಸುವೇಶಂ ಸುರುಚಿರಸುಖಸಾಕಾರಸಾರಂ ಸುಧೀರಂ
ಸಾನಂದಂ ಕಾದು ನಿಂದಂ ಗಿರಿಶಿಖರಮುಖದ್ವಾರಮಂ ಭಕ್ತಿಯಿಂದಂ ೨೬

ಅಂತಿರ್ದ ನಂದಿನಾಥಂ
ಮುಂತಿದಿರ್ವಂದಗಜೆಗೆಱಗಿ ಹೆಱಸಾರ್ದೊಲವಿಂ
ದಂ ತಾಯೆ ದೇವಿ ಶಾಂತೆಯ-
ನಂತಗುಣಾಭರಣೆ ಕರುಣೆ ಶರಣೆನುತಿರ್ದಂ ೨೭

ಆಗಳ್,

೧.೧. ಭರಿತರ್ ನಿರತರ್ ತ್ವರಿತರ್ ( ಯ. ); ನಿರತರ್ ಭರಿತರ್ ತ್ವರಿತರ್ ( ಬ ). ೨–೨. ರತರ್ ಸುತರ್ ವಿರಕ್ತನತೇಜಃ ( ಶಾ. ); ಸುತರ್ ವಿಕರ್ತನಾ ತೇಜಯುಕರ್ ( ಯ. ). ೩–೩ ಯುಲಿಯುವನಿಲನಲ್ಲಾಡಂ ( ಮ ); ನುಡಿಯುವನಿಲನಲುಗಂ ಮಿಗೆ ( ಅ ). ೪–೪. ಮರನುಂ ಗಿಡುವುಂ ಲತೆಯುಂ | ಪರಮೇಶನ ನಿಜಸಮಾಧಿಯಿಂದಾ ೫. ನತ (ಮ). ೬. ನೀಢಂ ( ಮ. ಬ. ).

ತೊಳಗುವ ಶಾರದ ನೀರದ-
ದೊಳಗಿಂ ಮಿಂಚಿಳಿವ ತೆಱದೆ ಗಿರಿಸುತೆ ಶಶಿಮಂ-
ಡಳದಧಿದೇವತೆ ಧರಣೀ-
ತೆಳಕ್ಕೆ[೧] ಬರ್ಪಂತೆ ಪುಷ್ಪಕದಿನಿಳಿತಂದಳ್ ೨೮

ಒಡನಿಳಿದಂ ಗಿರಿರಾಜಂ
ತಡವಿಲ್ಲದೆ ಭೋಂಕನಿಳಿದು ಜಯೆವಿಜಯೆಗಳಾ-
ಗಡೆ ನವರತ್ನದ ಪಾವುಗೆ-
ಯಿಡೆ ಮೆಟ್ಟಿದಳಗಜೆ ಮುಟ್ಟಿದಳ್ ಶಿವನೊಲವಂ ೨೯

ಗಿರಿರಾಜಂ ಕೆಯ್ಗುಡೆ ನೇ-
ವುರದ ಕಳಧ್ವಾನಮೊಗೆದು ನಗಮುಂ ಜಗಮುಂ
ಪರಿವೇಷ್ಟಿಸೆ ಬರುತಿರ್ದಳ್
ಪರಮೇಶ್ವರಿ ಚಂದ್ರಧರನನೀಕ್ಷಿಪ ಭರದಿಂ ೩೦

ಅಂತು ಬರೆವರೆ,

ಮತ್ತೇಭ.

ಇದು ವಿದ್ಯುತ್ಪ್ರಭವಪ್ರಭಾಪ್ರಸರಮೋ ಸಂಪೂರ್ಣಚಂದ್ರಾಂಶುಸಂ-
ಪದಮೋ ಶಾಶ್ವತಸೂರ್ಯಕೋಟಿರುಚಿರಪ್ರದ್ಯೋತಮೋ ಮಾಜಿ ಪೊ-
ಣ್ಮಿದ ಸರ್ವೇಶನಿಜಪ್ರಕಾಶನಿಧಿಯೋ ಪೇಳೆಂಬಿನಂ[೨] ತೋಱುತಿ-
ರ್ದುದು ದಿಕ್ಸಂಕುಳನಿರ್ಮಳೀಕೃತವಿರೂಪಾಕ್ಷಪ್ರಭಾಮಂಡಲಂ ೩೧

ಆ ಪ್ರಭಾಮಂಡಲದೊಳಗೆ,

ಮಹಾಸ್ರಗ್ಧರೆ

ವಿಳಸತ್ಪದ್ಮಾಸನಂ ಭಾಸುರಭರಿತವಪುರ್ವಲ್ಕಲಂ ಧಾನ್ಯಮುದ್ರಾಂ-
ಗುಳಿ ರುದ್ರಾಕ್ಷಾಕ್ಷಮಾಲಾರುಚಿನಳಿನಗುಣವ್ರಾತಯಜ್ಞೋಪವೀತಂ
ಲಳಿತಾಸ್ಯಂ ಸ್ನಿಗ್ಧಗಂಡಂ ಮುಕುಳಿತನಯನಂ ಚಿತ್ತನಿಷ್ಕಂಪನಂ ಪಿಂ-
ಗಳವರ್ಣೋರ್ದ್ಯಜ್ಜಟಾಮಂಡಳಮೆಸೆಯೆ ತಪೋವೇಷದಿಂದೀಶನಿರ್ದಂ ೩೨

---

೧. ತಳಕಂ ( ಬ. ಯ. ಗೊ. ) ೨. ತಾನೆಂಬಿನಂ ( ಅ. )

ಮಹಾಸ್ರಗ್ಧರೆ.

ಮನಮೆಂತುಂ ಬುದ್ಧಿಯೊಳ್ ಬುದ್ಧಿಯ ನಿಲವದಹಂಕಾರದೊಳ್ ತಾನಹಂಕಾ-
ರನಿಜಂ ಚಿತ್ತಾಂತದೊಳ್ ಚಿತ್ತದ ನೆಲೆ ವಿಲಸತ್ಪ್ರಾಣದೊಳ್ ಪ್ರಾಣಮುಂ ಜೀ-
ವನೊಳಾದಂ ಕೂಡೆ ಜೀವಂ ಪರಮನೆನಿಸಿ ನಿರ್ಮಾಯನಿಷ್ಕಾಮಿ ನಿಷ್ಕಂ-
ಪನಿವಾತಜ್ಯೋತಿರೂಪಂ ನಿರುಪಮನೆನಿಸಿರ್ದಂ ವಿರೂಪಾಕ್ಷಲಿಂಗಂ ೩೩

ಭಿನ್ನಾಭಿನ್ನಂ ಜ್ಞಾನಮ-
ಯಂ ನಿಜತೇಜೋವಿಲೀನಮಾನಸನಚಲಂ
ತನ್ನಂ ತಾನೇ ಜಾನಿಪ
ಬಿನ್ನಣದೊಳಗಿರ್ದನಭವನದ್ವಯರೂಪಂ ೩೪

ಮಹಾಸ್ರಗ್ಧರೆ

ಇದು ಸತ್ಯಾಕಾರಮೋ ಶಾಂತಿಯ ನೆಲೆವನೆಯೋ ಧರ್ಮವಿಸ್ತಾರಮೋ ಪು-
ಣ್ಯದ ಜನ್ಮಸ್ಥಾನಮೋ ಜ್ಞಾನದ ನಿಜರುಚಿಯೋ ನಿತ್ಯನಿರ್ಮಾಯಮೋ ತ-
ತ್ತ್ವದ ತೇಜಃಪುಂಜಮೋ ಮುಕ್ತಿಯ ಸುಖಮುಖಮೋ ಯೋಗಸಂಧಾನಮೋ ನೋ-
ಡಿದು ತಾನೆಂಬಂತೆ ಮುಂತಿರ್ದುದು ಶಿವನ ನಿಜಧ್ಯಾನಮೂರ್ತಿಪ್ರಭಾವಂ ೩೫

ಅಂತುಮಲ್ಲದೆ

ಮಾತಿನ ವೇಧೆಯ ಬೋಧೆಯ
ಭೂತಾದಿಯ ಪಂಚವಿಂಶತಿಗಳಂ ಮೀಱಿ
ಜ್ಞಾತೃಜ್ಞಾನಜ್ಞೇಯ-
ವ್ರಾತಮನಳಿದುಳಿದು ತಾನೆ ತಾನಾಗಿರ್ದಂ ೩೬

ಮುನಿತತಿಗಳ ಮನವೆಯ್ದದ
ಮನುಗಳ ಬಗೆ ಪುಗದ ಶಾಸ್ತ್ರವಱಿಯದ ವೇದಂ
ಜಿನುಗುವ ಗಜಬಜೆ ನಿಲ್ಕದ
ಘನತೇಜೋರಾಶಿ ನಿಜನಿವೇಶದೊಳಿರ್ದಂ ೩೭

---

೧. ಭಿನ್ನ ( ಕಾ. ಬೆ. ಯ. ಬ. ) ೨. ವಿಧಾನ ( ಬ. ಯ. ಪ. ); ನಿಧಾನ ( ಡ. ) ೩. ನಿರ್ವಾಣ ( ಮ. ಬ. ಯ. ) ೪. ಗಂಪದ ( ಬೆ ); ನಿಲ್ಲದ ( ದಾ. )

ಪೊಱಗಂ ಬಳಸದ ಮಾಯೆಗೆ
ತೆಱಹಂಗುಡದಚ್ಚ ಬಚ್ಚ ಬಱಯಱವಿನ ಸೈ-
ವೆಱಗಿನ ಮಱಹಿನ ಕುಱುಹಿನ
ಕೆಱೆಗೊರಲಂ ನಿಜಸಮಾಧಿಯೊಳ್ ಸಂದಿರ್ದಂ ೩೮

ಇರೆ ಕಾಣುತೆ ಗಿರಿರಾಜಂ
ಪರಮಸುಖಂಬಡೆದು ಪಿಡಿದು ಮೆಲ್ಲಡಿಗಳನಾ-
ದರದಿಂ ಹರ್ಷಂ ಮೂಡು-
ತ್ತಿರೆ ಪುಳಕದ ಮೆಯ್ಯೊಳೊಲ್ದು ಮೆಯ್ಯಿಕ್ಕಿರ್ದಂ ೩೯

ಅಂತು ಮೆಯ್ಯಿಕ್ಕಿ ನಿಂದು ಕೆಯ್ಯಂ ಮುಗಿದು ಪಾರ್ವತಿಯಂ ಕರೆದು,

ಚಂಪಕ.

ಅನುಪಮನಿರ್ದನಿರ್ದನೆ ಶರಣ್ಬುಗು ಶಾಶ್ವತಮೂರ್ತಿಯಿರ್ದನಿ-
ರ್ದನೆ ನಡೆನೋಡು ಚಂದ್ರಧರನಿರ್ದನೆ ನಂಬು ನಿಜೇಶನಿರ್ದನಿ-
ರ್ದನೆ ಪರಿಭಾವಿಸಪ್ರತಿಮನಿರ್ದನೆ ಕೀರ್ತಿಸು ಶಂಭುವಿರ್ದನಿ-
ರ್ದನೆ ಪದೆದರ್ಚಿಸರ್ಚಿಸೊಲವಿಂದಮೆ ಪಾರ್ವತಿ ಹಂಪೆಯಾಳ್ದನಂ ೪೦

ನಿಧಿಯಿದೆ ಭಕ್ತರ ಬಯ್ಕೆಯ
ನಿಧಾನವಿದೆಯಚ್ಚಶರಣರನುವಿದೆ ಕರುಣಾಂ-
ಬುಧಿಯಿದೆ ಸುಧೆಯಿದೆ ಕೇಳ್ ನಿ-
ನ್ನಧಿಪಂ ಶಶಿಮೌಳಿಯೆಂಬ ಕಲ್ಪಮಹೀಜಂ ೪೧

ಸದಮಳಮಿದೆ ಪರತತ್ತ್ವದ
ನಿಧಾನಮಿದೆಯಾದ್ಯರಱದು ಕುಱುಪಿಟ್ಟಾನಂ-
ದದ ಮೊದಲಿದೆ ಪರಮಾರ್ಥದ
ತುದಿಯಿದೆ ಗಿರಿಜಾತೆ ನೋಡು ನೆನೆ ಹೊಗಳೆಂದಂ ೪೨

---

೧. ಮೆಲ್ಲಡಿಯುಂ ಸಾ ( ಕಾ. ) ೨. ನೀತನೀತನ ( ಅ. ಓ ); ನಿಧನಿಧನೆ ( ಮ. ಬ. ಕ. ಗೊ. ಡ. ಗ. ); ನೀದನೀದನೆ ( ಸೆ. ) ೩. ನೀತನೆ ( ಅ. ಓ. ); ನಿಧನೆ ( ಮ. ಬ. ಕ. ಗೊ. ಡ. ಗ. ); ನೀಪನೆ ( ಸೆ. ) ೪. ನೆಱೆ ( ಅ. ಓ. ) ೫. ನೀತನೀ । ತನ ( ಅ. ಓ ); ನಿಧನಿ । ಧನೆ (ಮ. ಬ. ಕ. ಗೊ. ಡ. ಗ. ); ನೀದನೀದನೆ ೬. ನೆಱೆ । ಪೊಗಳೆಂದಂ ( ಅ. )

ಎಂದು ಗಿರಿರಾಜಂ ಹರನ ಪರತತ್ತ್ವಮಯಸೌಂದರ್ಯರೂಪಮಂ ಗಿರಿಜೆಗೆ ತೋಱುತ್ತುಂ ಪೊಡೆಮಡು ಪೊಡೆಮಡೆನೆ ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ ಸ್ನೇಹರಸದೊಳ್ ತಾತ್ಪರ್ಯಂ ಪೊಣ್ಮೆ ಶೃಂಗಾರರಸದೊಳ್ ಲಜ್ಜೆವೆರಸಿ ಕಲ್ಪತರುವಿನ ಬೀಳಲ್ ಮಹಾನಿಧಾನಕ್ಕೆಱಗುವಂತೆ ಮಂದಾನಿಳನ ಸೋಂಕಿಂದಂ ಪುಷ್ಪಮಾಲೆ ಬಳ್ಳುವಂತೆ ಕುಸುಮಚಾಪಂ ಕಾಲ್ಗೆಱಗುವಂತೆ ಪಂಚಬಾಣಂ ಹೊಡೆಗೆಡೆವಂತೆ ಮುಂದೆ ನಿನ್ನ ವಾಮಭಾಗಮಂ[೧] ಸೂಱೆಗೊಳ್ಳುವದರ್ಕಿದೆ ಕುಱುಪೆಂಬಂತೆ ಬಿಂಕದಿಂ ಕೊಂಕಿ ನಿಂದು ವಿಲಾಸದಿಂದೆಡದುಂಗುಟಮಂ ಲಲಾಟದಿಂ ಮುಟ್ಟಿ ಪೊಡೆಮಟ್ಟು ನಿಂದು,

ಶಾರ್ದೂಲ.

ಆನಿರ್ದಂತಿರದೇಕೆ ಜೇಡ ತಪವೆಂದೆಂಬಂತಹಂಕಾರದಿಂ
ನೀನೇ ಸದ್ಗತಿ ದೇವದೇವ ದಯೆಗೆಯ್ಯೆಂಬಂತೆ ಕಾರ್ಪಣ್ಯದಿಂ
ಸಾನಂದಾತ್ಮಕನೆನ್ನನೇಕಜೀವನೆಂದೆಂಬಂತೆ ನಿರ್ವೇದದಿಂ
ನಾನಾಭೋಗದೊಳೆಂದು[೨] ಕೂಡಿದಪೆನೆಂಬಂತಾಸೆಯಿಂ ನೋಡಿದಳ್ ೪೩

ಮತ್ತೇಭ.

ಶಿವನೀತಂ ನಿಜವಲ್ಲಭಂ ಮಮಗುರುಪ್ರಖ್ಯಾತನತ್ಯೂರ್ಜಿತಂ
ಭವನೆನ್ನಾಳ್ದನೆನಿಪ್ಪುದಂ ತಿಳಿದೆನಾಂ ನೀಂ ಪೋಗು ನಿತ್ಯಾರ್ಚನೋ-
ತ್ಸವದಿಂ ಸಂತಸದಿಂ ಸದಾತುರತೆಯಿಂ ಸಾನಂದದಿಂದಿರ್ಪೆನೆಂ-
ದು ವಿಳಾಸಾಬ್ಧಿ ಭವಾನಿ ನೋಡಿ ನುಡಿದಳ್ ಭೂಭೃತ್ಕುಲಾಧೀಶನೊಳ್[೩] ೪೪

ನುಡಿಯೆ ಗಿರಿರಾಜನೊಲವಿಂ
ಮೃಡಾಣಿಯಂ[೪] ನೋಡಿ ಮಗಳೆ[೫] ಮಾತೆ[೫] ಕರಂ ನ-
ಟ್ಟಡವಿ ಗುಹೆ ಗಹ್ವರಂ ಮಡು-
ಗಿಡುವಿವಱೊಳ್ ಪದುಳಮರ್ಚಿಸೆನುತುಂ ನುಡಿದಂ[೬] ೪೫

---

೧. ವಾಮಾಂಗಮಂ ( ದಾ. ) ೨. ನಾನಾ ಭಾವ ( ಓ. ) ೩. ನಂ ( ಅ. ) ೪. ಮೃಡನರಸಿಯಂ ( ಅ. ) ೫–೫ ಚಂದ್ರಾನನೆ ( ಮ. ) ೬. ನಡೆದಂ ( ಅ. ); ಪೋದಂ ( ಸ. ).

ಪತ್ತ್ರಡಿಯಿಟ್ಟತಿಮೋಹಂ
ಚಿತ್ತ್ರಮನಳ್ಳಿಱಿಯೆ ತಿರುಗಿ ಬಂದು ಗಿರಿಜೆ ಲೋ-
ಕೋತ್ತ್ರಮೆ ಪೋದಪನೆನುತುಂ
ಮತ್ತ್ರಂ ಮತ್ತ್ರಪ್ಪಿ ಪರಸಿ ಗಿರಿಪತಿ ಪೋದಂ ೪೬

[೧]ಅಂತು ಪೋಗೆ ಚಿಂತಿಸಿ ನೋಡಿ[೧] ಮುಂತಿರ್ದ [೨]ವಿಪುಳವಿಭ್ರಮನಂ ತಪೋ-ಮಯನಂ ವಿಳಾಸನಿಧಿಯಂ ವೈರಾಗ್ಯಯುಕ್ತನಂ ಸೌರಭ್ಯಸದನನಂ ಭಸಿತಕಾಯನಂ ಸೌಂದರ್ಯರೂಪನಂ ಜ್ಞಾನಪ್ರದೀಪನಂ ನಿಜಸುಖನಿವಾಸನಂ ಸ್ವಯಂಪ್ರಕಾಶನಂ ಕಂಡು ಶೃಂಗಾರರಸಕ್ಕೆ ಮನಂದಂದು ವೈರಾಗ್ಯರಸಕ್ಕೆ ಮೆಯ್ದೆಗೆದು ಸಹಚರಿಯರಪ್ಪ ಜಯೆವಿಜಯೆಗಳ್ಗೆ ನಗತನೂಜೆ ನಿರ್ವೇದದಿಂದಿಂತೆಂದಳ್

ಚಂಪಕ.

ಇದೆ ವಿಭು ಸಾರ್ದನೊಲ್ದು ಪರವಂ ಪರವಂ ಪರವಂಚನೋಕ್ತಿ ಕೊ-
ಳ್ಳದು ತಪಮತ್ಯಸಾಧ್ಯವಿಷಯಂ ವಿಷಯಂ ವಿಷಯಂತ್ರದಂತೆ ಸು-
ತ್ತಿದುದುಪತಾಪವೆಯ್ದೆ ತನುವಂ ತನುವಂ ತನುವಂ ಕಪರ್ದಿ ನೋ-
ಡಿದೊಡೆನಗಾದುದೆಯ್ದೆ ಕುಮುದಂ ಕುಮುದಂ ಕುಮುದಂ ಮೃಗೇಕ್ಷಣೇ ೪೭

ತಪಮಿಂತಿದು ಮದ್ವಿರಹಾ-
ತಪಮತ್ಯಧಿಕಂ ತುಡುಂಕಬಾರದಪಾರಂ
ತಪನನ ತೇಜಕ್ಕಂ ವಿ-
ತ್ತ್ರಪನಜಿವಿಂಗಂ ವಿಶೇಷಚೋದ್ಯಮಭೇದ್ಯಂ ೪೮

ನಿಗಮಂಗಳ್ ವಿಷ್ಣುವಿರಿಂ-
ಚಿಗಳಱಿಯದ [೩]ಶಿವನನಱಿವೊಡೆನ್ನಳವೇ ತಾಂ
ಬಗೆವೊಡೆ ಸಾತ್ತ್ವಿಕಶಿವಭ-
ಕ್ತಿಗಲ್ಲದಭವಂ ಸಮಂತು ಸಿಲ್ಕಂ ನಿಲ್ಕಂ ೪೯

---

೧-೧. ಅಂತು ಗಿರಿರಾಜಂ ಪೋಗೆ ಮತ್ತೆ ಗಿರಿಪತಿಸುತೆ ಚಿಂತಿಸಿ ನೋಡಿ ( ಯ. ) ೨. ವಿಮಳ (ಡ.)
೩. ಶಿವನನಱಿಯಲೆನ್ನಳವೇ ತಾಂ ( ಬ ); ಶಿವನನಱಿವೊಡೆನ್ನಳವೇ ಪೇಳ್ ( ಕಾ. ಕ. ಸೆ. )

ಅದು ಕಾರಣದಿಂ ಭಕ್ತಿ-
ಪ್ರದನಂ ವಿರೂಪಾಕ್ಷನಂಘ್ರಿಗಳನರ್ಚಿಸುವೆಂ
ಸದಮಳಶಿವಸುಖಮುಖಸಂ-
ಪದದೊಳ್ ಬಳಿಕಿರ್ಪೆನಪ್ಪಿ ಶರ್ವನ ತನುವಂ ೫೦

ಎಂದಬಲೆಯರೊಳ್ ನುಡಿಯು-
ತ್ತುಂ ದಟ್ಟಡಿಯಿಟ್ಟು ಭಕ್ತಿ ತನ್ನಯ ಮನಮಂ
ಬಂದಡೆರೆ ಭರಂ ಮಿಗೆ ಮುದ-
ದಿಂದಂ [1]ಪುಷ್ಪೋಪಚಯಕೆ ಗಿರಿಸುತೆ ಬಂದಳ್ ೫೧

ನೇವುರದ ಸುಣ್ದನಿಗೆ ಮಿಗೆ-
ಯಾವರಿಸುವ ಹಂಸೆವಿಂಡನೆಡವುತ್ತುಂ ಸದ್-
ಭಾವಕಿ ಭಾಮಿನಿ ಭರ್ಗನ
ಜೀವಂ ಶೃಂಗಾರವಾರಿನಿಧಿ ನಡೆತಂದಳ್ ೫೨

ಇಂತು ನಡೆತಂದು ಪೂದೋಂಟಮಂ ಪೊಕ್ಕು,

ಅರವೆ ಸುಕುಮಾರೆ ಸೌರ-
ಭ್ಯರತೆ ವಸಂತಾನುಕೂಲೆ ಮೆಲ್ಲಡಿಯಿಡುತುಂ
ಹರನ ಜೆಡೆಮುಡಿಗೆ ನಡೆತಂ-
ದಿರವಂತಿಗೆಯರಲನಗಜೆ ಬಗೆಮಿಗೆ ತೆಗೆದಳ್ ೫೩

ತೊಳಗುವ ಚಂಪಕನಾಸಿಕೆ
ಬಳಸಿದ ಚಂಪಕಸುಗಂಧಿ ನಗನಂದನೆ ಬಂ-
ದಳಿಮನವಲ್ಲದ ಭಕ್ತ್ಯು-
ಜ್ಜ್ವಳೆ [2]ಕಿಱುದಳ್ [3]ಕಂಪು ಸುರಿವ ಸಂಪಗೆಯರಲಂ ೫೪

---

೧. ಪುಷ್ಪಾಪ ( ಶಾ. ಅ. ಬೆ. ) ೨. ಕಿಱುದಳ್ ( ಸ. ) ೩. ಸೊಂಪು ( ಬ. )

ಎಸೆವ ರಜೋಗುಣಲ[1]ಸಿತ-
ಪ್ರಸನ್ನಮುಖರಾಗಯುಕ್ತೆ ಶಿವಪದಪೂಜಾ-
ವ್ಯಸನೆ ಶಶಿವದನೆ ತಿಱಿದಳ್
ಪೊಸಹರಿಸಮನಾಂತು ಶಾಂತೆ ಸೇವಂತಿಗೆಯಂ ೫೫

ಪರಮೋತ್ಸವದಿಂ ನಡೆತಂ-
ದುರುತರಮೃಗನಾಭಿಗಂಧಿ ನಿಂದು ಬಿಳಿಯ ಕ-
ತ್ತುರಿ ತಾನೆನಿಸುವ ಪಡ್ಡಳಿ-
ಯರಲಂ ತಿಱಿದಳ್ ಭವಾನಿ ಶಿವಪೂಜಾರ್ಥಂ ೫೬

ಎಳಸಿ ನಲಿನಲಿದು ನವಪಾ-
ಟಳಗಂಧಿಕೆ ಪಾಟಳಾಂಗಿ ಮಿಗೆ ಕೊಯ್ದಳ್ ಪಾ-
ಟಳರುಚಿರಾಧರೆ ಕಾಮನ
ಶಿಳೀಮುಖದ ಪರಿಯ ಪಾದರಿಯ ಪೊಸಪೂವಂ ೫೭

ಅವಂ ಕೊಂಡು ಮತ್ತೆ ನಡೆತಂದು ಕೊಳನಂ ಪೊಕ್ಕು,

ಕಮಳಂದಿಱಿಯಲ್ ನಿಜಕರ-
ಕಮಳಮುಮಂ ನೀಡೆ ಕೆಯ್ಯ ಕಂಪಿಂಗೆಮಮ
ಭ್ರಮರಾಳಿ [3]ಮುತ್ತೆ ಕರಮಂ
ಕಮಳಂ ದಿಟಮೆಂದು ಬಗೆದು ನೋಡುತ್ತಿರ್ದಳ್ ೫೮

ಅಂತು ನೋಡಿ ತಿಳಿದು,

ಮಿಸುಪ ನವತರುಣತರಣಿಯ
[4]ಪಸಿಯ ಬಿಸಿಲ್ ಮಸಗೆ ತನುವಿನರಿಸಿನವೊಲವಿಂ
[5]ದೆಸೆವ ರಥಾಂಗಕುಚದ್ವಯೆ
ಪೊಸದಾವರೆವೂವನೋವಿ ಭಾವಿಸಿ ತಿಱಿದಳ್ ೫೯

---

೧. ಲಲಿತ ( ದಾ. ಬ. ); ವಿಲಸತ್ ( ಅ ); ವಿಲಸಿತ ( ಶಾ. ಬೆ. ). ೨. ಗರರೆ ( ಮ. ಕೊ. ಪೆ. ಅ. ಕ. ಗ. ಓ. ) ೩. ಸುತ್ತೆ ( ಮ. ಕೊ. ಡ. ಗ. ದಾ. ಓ. ) ೪. ಪೊಸಬಿಸಿಲವೊಲೆಸೆವ ( ಶಾ. ಅ. ಕ. ಗ. ) ೫. ದೆಸೆಯ ( ಶಾ. ದಾ. ಅ. ಕ. ಬ. )

ಸದಮಳಮೃದುಮಯಹಸ್ತ-
ಪ್ರದೇಶಮಂ ಸುತ್ತಿ ಮುತ್ತೆ ಮತ್ತಾಳಿಗಳಂ
ಬುದಕೋದಂಡಭ್ರೂಯುಗೆ
ಸುದೀರ್ಘನಖೆ ಕೊಯ್ದಳೊಲ್ದು ಸುತಕೇತಕಿಯಂ ೬೦

ಸೆಳ್ಳುಗುರ್ಗಳ ನಳನಳಿಸುವ
ಬಳ್ಳಿವೆಳಗು ಕರೆಯೆ ಕೌಮುದಿಯನುತ್ಸವದಿಂ-
ದುಳ್ಳಲರ್ವ ಕುಮುದಕುಲದೊಳ
ಗೊಳ್ಳಿದುವಂ ತೆಗೆದಳಿಂದುಮುಖಿ ತಿಳಿಗೊಳನೊಳ್ ೬೧

ಜಾತಿಸುಗಂಧಿನಿ ಮೇನಾ-
ಜಾತೆ ಕುಸುಮಜಾತಿಯೊಳಗೆ ಜಾತಿಯಿದೆಂದಾ
ಜಾತಿಸ್ತ್ರೀಜಾತಿಯೊಳತಿ-
ಜಾತೆ ಜಗನ್ಮಾತೆ ಜಾತಿಯರಲಂ ಕೊಯ್ದಳ್ ೬೨

ಮಲ್ಲಿಗೆ ಶರ್ವನ ಜೆಡೆಮುಡಿ-
ಯಲ್ಲಿಗೆ ಕೊಂಡೊಯ್ಯಲೆಂದು ಸಮ್ಮದದಿಂ ನಿ-
ಮ್ಮಲ್ಲಿಗೆ ಬಂದೆನೆನುತ್ತುಂ
ಮಲ್ಲಿಗೆಯಲರ್ದೊಂಗಲಂ ಮಹೇಶ್ವರಿ ಕೊಯ್ದಳ್ ೬೩

ಮತ್ತಂ ಪುಷ್ಪಜಾತಿಯಂ ಕೊಯ್ದು ಪತ್ರಜಾತಿಯಂ ಕೊಯ್ಯಲೆಂದು, *

ಸಹಜಾಮೋದೆ ಸುಗಂಧಾ-
ವಹಮೆನಿಸಿದ ಮರುಗದಲ್ಲಿ ಪರಿಮಳದೆಲೆಯಂ
ಬಹುಗುಣಭೂಷಣೆ ಭಕ್ತಿಯೊ-
ಳಹಿನಿವಹಾಭರಣನರ್ಚನೆಗೆ ನೆರೆ ತಿರಿದಳ್ ೬೪

೧. ಗೊಳದೊಳ್ (ರಾ. ಕ.) ೨. ಕೊಂಡೊಯ್ವನೆಂದು (ಕ. ರಾ. ಬಿ.) ೩. ತಿರಿದಳ್ (ರಾ. ಬಿ.)
೪. ನಿರಿಗೆ (ಸೆ.) * ಈ ವಚನವು ಅ. ಬ. ಮ. ಯ. ಕ. ದಾ. ಗೊ. ಗ. ಪ್ರತಿಗಳಲ್ಲಿಲ್ಲ.

ನಲವಿಂದಂ ಮುಡಿವಾಳದ
ನೆಲೆಗೆಯ್ತಂದಗತನೂಜೆ ಬೇರಂ ಬಲ್ಲ-
ರ್ಗೆಲೆದೋಱಲೇಕೆ ನೀನೆನು-
ತೊಲವಿಂ ಪರಿಮಳದ ಬೇರ್ಗಳಂ ಬರೆತೆಗೆದಳ್ ೬೫

ಇಂತಿಂತನಂತಕಾಂತಲ-
ತಾಂತಂಗಳನಾಯ್ದು ಕೊಯ್ದು ಸಂತಸದಿಂದಂ
ಮುಂತೆ ನವಾಂಕುರಕಿಸಲಯ-
ದಿಂ ತೀವಿದ ಬಾಲಚೂತದೆಡೆಗೆಯ್ತಂದಳ್ ೬೬

ಒಡನೆ ಜಯೆವಿಜಯೆಗಳ್ ಮೆ-
ಲ್ಲಡಿಯಿಡುತುಂ ಬಂದು ಪುಷ್ಪಪುಟಿಕೆಗಳಂ ಸಂ-
ಗಡಮಿಳುಹಿ ವಿಮಳತಳದೊಳ್
ಪೊಡೆಮಡುತುಂ ಗಿರಿತನೂಜೆಗತಿಮುದದಿಂದಂ ೬೭

ಅಂತು ಪೊಡೆಮಟ್ಟು ಬಾಲಸಹಕಾರತಳದೊಳ್ ಹರಿತಭೂಮಿಕೆಯೊಳ್ ಸುರುಚಿರಮರೀಚಿಗಳಂಕುರಿಸಿತೆಂಬಂತೆ ನಳನಳಿಸಿ ಬೆಳೆದ ಪೊಸಪಸಲೆಯ ಮೇಲೆ ಕದಳೀದಳಂಗಳಂ ಕಮಲಪತ್ರಂಗಳಂ ನುಣ್ಬೆಳಗಂ ಕಱಿವ ಪೊಂಬಾಳೆಯ ಪತ್ರಂಗಳನಿಂಬಿನಿಂ ಪಾಸುತ್ತುಂ ಪಾಸಿಂಗೆ ಕವಿವ ಮತ್ತಾಳಿಗಳನೆತ್ತಂ ನಿವಾರಿಸುತ್ತುಂ ಕುಸುಮಕುಲಮನೆಸೆಯೆ ಸುರಿದು ಭಾಸುರದುಕೂಲದಿಂ ಬಾಸಣಿಸಿ ಶತಪತ್ರಸೂತ್ರಕುಲಮಂ ಕೆಲದೊಳಿರಿಸಿ ಮೆಯ್ಯಿಕ್ಕಿ ಕೆಯ್ಯಂ ಮುಗಿದು ದೇವಿ ಜಗನ್ಮಾತೆ ಸರ್ವಕಳಾಕೋವಿದೆ ಸುಕುಮಾರಾಂಗಿ ಸೌಂದರ್ಯಮೂರ್ತಿ ಇತ್ತ ಬಿಜಯಂಗೆಯ್ವುದೆಂದು ಬಿನ್ನವಿಸಿ ಕೆಯ್ಗುಡೆ ಮೃದುಪದನ್ಯಾಸದಿಂ ನಡೆತಂದಿಕ್ಕಿದ ಮಾಂದಳಿರ ಪೊಸಪಸೆಯ ಮೇಲೆ ಕಮನೀಯದಿಂ ಕುಳ್ಳಿರ್ದಾಗಳ್,

ಪರಿಮಳದಧಿದೇವತೆಯೋ
ವರಕುಮುದದ ಕೂಡೆ ಬಂದ ಶಶಿಕಳೆಯೋ ವಾ-
ರಿರುಹದ ನಡುವೆಯ್ತಂದಿಂ
ದಿರೆಯೋ ಎನೆ ದೇವಿ ಪೂವನೋವುತ್ತಿರ್ದಳ್ ೬೮

ಅಂತೋವುತ್ತುಮಿರ್ದು,

ಮುಟ್ಟಿದೊಡಾಗಾಳೆ ಕಂದುವ
ನೆಟ್ಟನೆ ನೋಡಿದೊಡೆ [1]ಕೋಡಿ ಬಾಡುವ ನೆನೆಯಲ್
ತೊಟ್ಟನೆ ಕೊರಗುವ ಪೂವಂ
ಕಟ್ಟುವ ಪರಿಯೆಂತೆನುತ್ತೆ ಚಿಂತಿಸುತಿರ್ದಳ್ ೬೯

ಅಂತು ಚಿಂತಿಸಿ ನೋಡಿ ಭಕ್ತಿಯೊಳ್ ಕೂಡಿ ಪೂಜಿಸಲ್ಬೇಡಿ ಪೂವಂ ಪೂ ಸೋಂಕೆ ಕೊರಗದೆಂಬಂತೆ ತನ್ನ ಕರಕಮಲಮಂ ನೀಡಿ,

ಅತಿಸುಕುಮಾರೆ [2]ಸುಖಾಕರೆ
ನುತಗುಣಗಣಯುಕ್ತೆ ಶಾಂತೆ ಸಾತ್ತ್ವಿಕರೂಪಾ-
ನ್ವಿತೆ ಸರ್ವಕಳಾನಿಧಿ ಪಾ-
ರ್ವತಿ ಸತಿ ಶತಪತ್ರಸೂತ್ರಮಂ ತೆಗೆಯುತ್ತುಂ ೭೦

ವದನಕ್ಕಂ ಕುಸುಮಕ್ಕಂ
ಪದೆದೆಳಗುವ ಮಧುಕರಂಗಳಂ ನೋವುತ್ತುಂ
ಮೃದು[3]ತರಸರಳಾಂಗುಲಿಯಿಂ
ಸದಮಲೆಯಿರವಂತಿಯರಲನೊಲವಿಂ ಪಿಡಿದಳ್ ೭೧

ಪಿಡಿದೆತ್ತಿ ನಳಿನಗುಣದೊಳ್
ತೊಡರ್ಚುತುಂ ಮೆಲ್ಲಮೆಲ್ಲನಿರವಂತಿಯ ಪೂ-
ದೊಡಿಗೆಗಳಂ ವಿರಚಿಸಿದಳ್
ಮೃಡಾಣಿ ಮೃಡನವಯವಕ್ಕೆ ಸಡಗರದಿಂದಂ ೭೨

ಸರಸಿಜಬಂಧಂ ಕಮಲಾ-
ಕರಬಂಧಂ ಮುರಜಬಂಧಮುತ್ಪಲಬಂಧಂ
[4]ತರುಬಂಧಂ ಗಿರಿಬಂಧಂ
[5]ನರಬಂಧಂ ಲಿಂಗಬಂಧಮಂ ವಿರಚಿಸಿದಳ್ ೭೩

೧. ಬಳ್ಳಿ ( ಓ ). ೨. ಶುಭಾಕರೆ (ಬ. ಯು.). ೩. ತರಳತರಾಂಗುಲಿ (ಬ); ಕರಸರಳಾಂಗುಲಿ ( ಕ ).
೪. ಸರಿ ( ಶಾ. ಬೆ. ಯು. ಬ. ಡಾ. ಅ. ಸೆ. ). ೫. ಸ್ಮರ ( ಶಾ. ಬೆ. ಬ. ಗ. ಸೆ. ಅ. ಡಾ. )

ಸುರರ ಶಿರೋಮಾಲಾವಿ-[1]
ಸ್ತರಬಂಧಂ ನಾಗಬಂಧಮುವಸೀಬಂಧಂ
ದ್ವಿರದಾಜಿನಬಂಧಂ ವಿ-[2]
ಸ್ತರವಿಧುರವಿಬಿಂಬಬಂಧಮುಂ ವಿರಚಿಸಿದಳ್ ೭೪

ಕರಕಮಲದ ಲೋಚನಸರ-
ಸಿರುಹದ ವದನಾರವಿಂದದಾ[3] ಪರಿಮಳದಿಂ
ಪೊರೆಯುತ್ತುಂ ಪೊಸಪೂವಂ
ಗಿರಿಜೆ ಸುಖಂ ಮುಟ್ಟೆ[4] ಮುಟ್ಟೆ ಕಟ್ಟುತ್ತಿರ್ದಳ್[5] § ೭೫

ಈ ತೆಱದಿಂ ಕ್ಷಿತಿಧರವರ-
ಜಾತೆ ಜಗನ್ಮಾತೆಯೆಸೆವ[6] ಕುಸುಮಾವಳಿಯಿಂ-
ದೋತು ಮನೋಹರಮಪ್ಪ ವಿ-
ನೂತನಮಾಳಾವಿಳಾಸಮಂ[7] ಮಿಗೆ ಸಮೆದಳ್ § ೭೬

ಇಂತು ಪುಷ್ಪಾವಳಿಯಿಂ ಪಲವುಂ ತೆಱದ ಬಂಧಮಂ ಸಮೆದು ಬಳಲ್ದು ಸ್ವೇದಭರಿತಗಂಡಸ್ಥಳೆಯುಂ ಶಿಥಿಳೀಕೃತಕರತಳೆಯುಮಾಗಿರ್ದ ಪಾರ್ವತಿಯಂ ಕಂಡು ಸಹಚರಿಯರ್ ಬಂದು ಸೇವಂತಿಗೆಯ ಪನಿನೀರಂ ಮಜ್ಜನಕ್ಕೆಱೆದು ಪರಾಗದಂಗರಾಗಮನಮರ್ಚಿ ತಾವರೆಯ ನೂಲ ದುಕೂಲಮನುಡಿಸಿ ಕದಂಬ-ಕುಸುಮಮಂ ಸಿರಿಮುಡಿಯೊಳ್ ತುಱುಂಬಿ ಕೇತಕಿಯ ಸಣ್ಣನಪ್ಪ[8] ನುಣ್ಣೆಸಳ ಕರ್ಣಪತ್ರಮನಿಕ್ಕಿ ಮಕರಂದದ ತಿಲಕಮನಿಟ್ಟು ಪುಷ್ಪಮಂಜರಿಯ ಕರ್ಣಾವ-ತಂಸಮನಳವಡಿಸಿ ಮಲ್ಲಿಗೆಯ ನನೆಯ ಏಕಾವಳಿಯಂ ಮುತ್ತಿನ ಹಾರದೊಳೊಡ-ಗೂಡಿ ಮೊಲ್ಲೆಯ ಮುಗುಳ ಕಂಕಣಮಂ ಕೆಯ್ಗೊಳಿಸಿ ನಳಿನಕರ್ಣಿಕಾಮುದ್ರಿಕೆ-

೧. ಬಂ | ಧುರ ( ಕಾ. ಬ. ಬೆ. ಯ. ಸೆ. ದಾ. ಕ. ) ೨. ಸು | ಸ್ಥಿರ (ಅ.) ೩. ವಿಂದದತಿ (ಗ.) ೪. ಪುಟ್ಟೆ ( ಕಾ. ಬ. ಸ. ಬೆ. ಯ ); ಪುಟ್ಟ ( ಅ. ) ೫. ಕಟ್ಟಿದಳಾಗಳ್ ( ದಾ. ಗೊ. ಅ. ಸೆ. ) ೬. ಜಗಖ್ಯಾತೆಯೊಸೆದು ( ವ. ಬ. ಅ. ಯ. ) ೭. ನೂತನಕಮಲಾ ( ಅ. ) ೮. ನುಣ್ಣನಪ್ಪ ( ಕಾ. ದಾ. ಯ. ) § ೭೫, ೭೬ ನೆಯ ಪದ್ಯಗಳು ಓ. ಪ್ರತಿಯಲ್ಲಿಲ್ಲ. ಕ. ಪ್ರತಿಯಲ್ಲಿ ಇವು ಕೂಡಿ ಹೋಗಿ ಬಹಳ ತಪ್ಪಾಗಿದೆ.

ಗಳಂ ಭದ್ರಾಂಗುಲಿಗೆ ಹತ್ತೆ ಸಾರ್ಚಿ ನವಲತೆಯನಂಕುರದಿಂದಲಂಕರಿಸುವಂತೆ ಕಲ್ಪತರುವಂ ಕುಸುಮದಿಂದೆ ಮುಸುಂಕುವಂತೆ ಪಿನಾಕಿಯ ಮನೋರಥಮಂ ಪುಣ್ಯ-ಫಲದಿಂ [1]ಪಸದನಂಗೊಳ್ವಂತೆ ಕುಸುಮಬಾಣಮಂ ಪೊಸಗಂಪಿಂ ಕೂರ್ಪಿಡುವಂತೆ ಸೌಂದರ್ಯಮಂ ಮೋಹದಿಂದೊಲ್ವಂತೆ ಸೌಕುಮಾರ್ಯನಿಧಿಯಪ್ಪ ಶರ್ವಾಣಿಗೆ ಶೃಂಗಾರಂಗೆಯ್ದನುರಾಗದಿಂ ಕೆಯ್ಗೊಟ್ಟ ಕೆಳದಿಯರ ಕೆಯ್ಯೊಳ್ ಮೆಯ್ಯಂ ಮಲಂಗಿಸಿ ಮೆಲ್ಲಮೆಲ್ಲನಡಿಯಿಡುವಾಗಳ್ ಹೊನ್ನ ಹಾವುಗೆಯ ರನ್ನವೆಳಗಂ ಕೀಳ್ಮಾಡಿ ನಕ್ಷತ್ರಮಾಲೆಯಂತೆ ನುಣ್ಬೆಳಗನೀಂಬ ಪದನಖಪ್ರಭೆ ಪೂವಲಿಗೆದಱೆ ಮಂಜೀರದ ಮಧುರಧ್ವನಿಗೆ ಮಂಡಳಿಸುವ ಮರಾಳಕುಳಮಂ ಜಡಿವಂತೆ ಪಳಂಚುವ ಪಾದಮುದ್ರಿಕೆ ಸುಣ್ದನಿಯನುಗುಳೆ ಹರನ ಚಿತ್ತಮಂ ಗಿರಿಜೆ ನಿನ್ನ [2]ಚರಣದೊಳ್ ಕೆಡೆಪುವೆನೆಂದು ಭಾಷೆಗುಡುವಂತೆ ಸೂಸುವ ಸುನಾದದಿಂ ನೇವುರಮುಲಿಯೆ ಕುಸುಮಕುಳವಿಳಸಿತಕಾಂಚೀದಾಮದ ಭಾರಮಂ ತಳೆದ ನಿತಂಬಬಿಂಬಮಂ ಸುತ್ತಿ ಮುತ್ತಿದ ದುಕೂಲದ ಧವಳದ್ಯುತಿ ದೆಸೆದೆಸೆಗೆ ಪಸರಿಸೆ ಲಾವಣ್ಯರಸಂ ತೀವಿ ನೆಲೆಗಾಣಲ್ ಬಾರದ ಗಂಭೀರನಾಭೀಸರೋವರದೊಳಗೊಗೆದ ಮೃಣಾಳನಾಳದಂತಿರ್ದ ಬಾಸೆಯಂ ಮಱೆಗೊಂಡ ಬಡನಡುವಡಿಗಡಿಗೆ ಬಳುಂಕುತ್ತಿರೆ ವಿಭವಮಾದುಭಯ-ಕಕ್ಷಮನಿಂಬುಗೊಂಡು ತುಂಬಿ ಬಳೆದು ಮುತ್ತಿದ ಮೇಲುದನೊತ್ತರಿಸಿ ಹೊತ್ತೆತ್ತಿ ಕೆಲಕ್ಕೆ ನೂಂಕುವ ಪೆರ್ಮೊಲೆಗಳ್ಗೆ ಹಾರಕಾಂತಿ ಹೊಸಮೇಲುದಂ ಪೂರಯ್ಸೆ ಕಲ್ಪತರುವಿನ ಶಾಖೆಗಳಂತೆ ಕೋಮಳದಿಂ ನೀಳ್ದು ನಳನಳಿಸಿ ಬೆಳೆಬೆಳೆದ ಬಾಹು-ಲತಾಪ್ರಸೂನಮಂ ಪೋಲ್ವ ಸೆಳ್ಳುಗುರ್ಗಳ್ ಬಳ್ಳಿವೆಳಗಂ ಕಱೆಯೆ ಕಬರೀಭರದ ಗುರುತ್ವಮನಾಂತ ಕಂಬುಗ್ರೀವಮಿಂಬುವಡೆಯೆ ಕಪೋಳಬಿಂಬದೊಳ್ ಪ್ರತಿ-ಬಿಂಬಿಸುವ ಕರ್ಣಾವತಂಸಪ್ರಸವಮಂಜರಿಗಳ್ ಕರ್ಣಪಾಲಿಕೆಯೊಳಾಂದೋಳಮ-ನಾಡೆ ನೆಱೆ ತೀವಿ ತೆರೆ ಮಸಗುವ ಮುಖರಸದೊಡನೆ ಕಡೆಗಣ್ಣ ಕಾಂತಿ ಕೋಡಿ-ವರಿಯೆ ಕರ್ಪೂರದ ಮೂಕುತಿಗೆ ಕಂಪನಿರ್ಮಡಿಸುವ ನಿಡುಸುಯ್ಯ ಪರಿಮಳಕ್ಕೆ ಪರಿಮರಿಯಾಡುವ ಮಧುಕರನಿಕರಂ ಮಕರಂದತಿಲಕದ ತನಿಗಂಪಿಂಗೆಳಸಿ ಲಲಾಟ-ಪಟ್ಟದೊಳಂಕುರಿಸಿ ನಲಿವ ನೀಲಾಳಕಮೆಂಬ ಮಱಿದುಂಬಿಗಳೊಳ್ ಕಾಳೆಗಂ-

---

೧. ಪಸರಂಗೊಳ್ವಂತೆ ( ಅ. ); ಪಸದನಂಗೊಳಿಸುವಂತೆ (ಕಾ. ಕ.) ೨. ಚಿತ್ತಾಂತಃಕರಣದೊಳ್ (ಕ.)

ದೆಗೆಯೆ ತಾ[1]ರಕಿತನಾದ ನೀರದಮಂ ಮುಸುಂಕಿದ ತಾರೇಶಮರೀಚಿಗಳಂತೆ ಕದಂಬ-ಕುಸುಮಗರ್ಭೀಕೃತಕಬರೀಭರಸಂಯುತಶಿರೋಭಾಗಮಂ ಬಾಸಣಿಸಿದ ನನೆಯ ಸೂಸಕದ ಕೊನೆಗಳಲುಗೆ ಶಿವನ ಮನೋರಥಂ ಮೂರ್ತಿಗೊಂಡಂತೆ ಹರನ ಮೆಚ್ಚು ಹರೆಯಂಬಡೆದಂತೆ ಶಂಕರನ ಬಿಂಕಂ ಬಿನ್ನಣಮಾದಂತೆ ಚಂದ್ರಕಳೆ ಕಣ್ದೆಱೆದಂತೆ ನೆಱೆ ಮೆಱೆದು ನಡೆತಂದು ನಗತನೂಜೆ ಚಂದ್ರಧರನ ಮುಂದೆ ನಿಂದು,

ಇರುಳುಂ ಪಗಲುಂ ಕಾಮಂ
ತರದಿಂ ತೆಗೆದೆಚ್ಚ ಕುಸುಮಬಾಣಮಿದೆಂದಾ
ಗಿರಿಶಂಗೆ ತೋರ್ಪ ತೆಱದಿಂ
ನೆರೆಪಿದಳಭವಾಂಘ್ರಿಗಳ್ಗೆ ಪುಷ್ಪಾಂಜಲಿಯಂ ೨೭

ಅಂತುಮಲ್ಲದೆ,

ಸಂದಣಿಸುವ ನೆ[2]ವನವಪುಳ-
ಕಂ ದಟ್ಟಯಿಸುತ್ತೆ ನೆಗೆಯೆ ಶಶಿಮೌಳಿಗೆ ಪೂ-
ರ್ಣೇಂದುಮುಖಿ ಪೊಡೆಮಡುತ್ತಾ-
ನಂದಾಶ್ರುಗಳಿಂದೆ ಚರಣತಳಮಂ ತೊಳೆದಳ್ ೨೮

ಪದೆಪಿಂ ಪೊಡೆಮಡುವಾಗಳ್
ಮೃದುತರಪದದುಪರಿಭಾಗಮಂ ಚೆಲ್ವಿರ್ಪ-
ತ್ತಿದ ಮಕರಂದದ ತಿಳಕಂ
ಸದಮಳಚಂದನವಿಳಾಸಮೆನಿಸಿತ್ತಾಗಳ್ ೨೯

ಸದ್ಗಂಭೀರಾವೃತ ವಿಳ-
ಸದ್ಗಮಕದೆ ನಿಂದು ಶಿವನ ಮೆಲ್ಲಡಿಗಳಿಗು-
ದ್ಯದ್ಗುಣಭೂಷಣೆ ಸುರಿದಳ್
ಗದ್ಗದಿಸು[3]ತೆ ಪುಳಕಿಸುತ್ತೆ ಸರಸಿಜದಲರಂ ೩೦

೧. ತಾರಾಂಕಿತ (ಬೆ. ಯು.); ಕಳಂಕಿತ ( ಬ ) ೨. ತನುಪುಳಕಂ । ತಾಂ ( ಕಾ. ಕ. ); ಪೊಸಪೊಸಪುಳ । ಕಂ ( ಬ. ಬೆ. ದಾ. ಸೆ. ) ೩-೩. ಗದ್ಗದಿಸುವ ಪುಳಕದಿಂದೆ (ಕ.)

ಊರುದ್ವಯದೊಳ್ ಕರದೊಳ್
ಚಾರುಭುಜಾಗ್ರಂಗಳೊಳ್ ಸು[1]ಬಾಹುಗಳೊಳ್ ಪು-
ಣ್ಯೋರಃಸ್ಥಳದೊಳ್ ಗಿರಿಸುತೆ
ಹಾರಯ್ಸುತೆ ಕುಸುಮಮಾಲೆಯಂ ಪಸರಿಸಿದಳ್ ೭೧

ಪತ್ತಮದಲ್ಲದೆಯುಂ,

ತವತವಗೆ ಮುಂಚುವಿಂದ್ರಿಯ-
ಸಿವಹಮನೋವೃತ್ತಿ ಗಿರಿಜೆ ಹರಕಂಧರದೊಳ್
ನವಕುಸುಮಮಾಲೆಯಂ ಸಾ-
ರ್ಚುವ ನೆವದಿಂ ಸೋಂಕಿ ಸೋಂಕಿ ಪುಳಕಿಸುತಿ[2]ರ್ದಳ್ ೭೨

ಅಂತಿರ್ದು,

ಭರದಿಂದಂ ನವಕುಸುಮಾ-
ಭರಣಂಗಳನಭವನಂಗದೊಳ್ ಸಿಂಗರಿಸು-
ತ್ತರಳುತ್ತುರ್ಬುತೆ ಕೊರ್ಬುತೆ
ಗಿರಿಸುತೆ ಸಜುಸುಯ್ಯ ಧೂಪಮಂ ಪದೆದಿತ್ತಳ್ ೭೩

ಅಲರ್ದೊಂಗಲ ಪೊಸದುಡಿಗೆಯ-
ನೆಲಂಪಿನಿಂ ಶಂಕರಂಗೆ ಕೈಯ್ಗೊಳಿಸುತ್ತ-
ಗ್ಗಲಿಸುತ್ತಿತ್ತಿದಳಂಬಿಕೆ
ನಲವಿಂ[3] ನಗೆಮೊಗದ ಕಾಂತಿಯೆಸೆವಾರತಿಯಂ ೭೪

ಉತ್ತಮಗುಣಗಣಭೂಷಣೆ
ಚಿತ್ತವಿಕಾಸಮನೆ ಪಡೆದು ಸಾತ್ತ್ವಿಕಭಾವೋ-
ನ್ಮತ್ತೆ ನಗಪುತ್ರಿ ಮುದದಿಂ-
ದಿತ್ತಳ್ ಶರ್ವಂಗೆ ಭಕ್ತಿಯಾರೋಗಣೆಯಂ ೭೫

---

೧. ಶಿರಾಗ್ರದೊಳುಂ ( ಅ. ) ೨. ತಿರ್ದಳ್ ( ಕಾ. ಸ. ಬಿ. ) ೩. ನಲವಿಂದಂ ( ಬ. ಉ. )

ಇಂತು ಪಾರ್ವತಿ ಪಲವುಂ ಭೋಗಂಗಳಂ ರಾಗದಿಂ ರಾಜಮೌಳಿಗೊಲ್ದು ಪೂಜೆಯ ನೆವದಿಂ ನಿವೇದಿಸಿ ಸಂಪದಮನೋಲಗಿಪ ಸಿಂಗರದಂತೆ ಧರ್ಮಮಂ ಬಳೆಯಿಸುವ ಸಂಪದದಂತೆ ಪುಣ್ಯಮಂ ಸೇವಿಪ ಧರ್ಮದಂತೆ ಭಕ್ತಿಯಂ ಬಯಸುವ ಪುಣ್ಯದಂತೆ ಶಿವಜ್ಞಾನಮನೆಳಸುವ ಭಕ್ತಿಯಂತೆ ಮುಕ್ತಿಯಂ ನಿಶ್ಚಯಿಪ ಶಿವಜ್ಞಾನದಂತೆ ಶಿವಸಂಗಮಂ ಬಯಸಿ ಮನ್ಮಥಮನೋರಥದುರ್ಲಭವಲ್ಲಭನಂ ನೋಡುವಾಗಳ್

ಚಂಪಕ.

ಪೊಸಜೆಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ ಕಪೋಲಭಾಗದೊಳ್
ಪಸರಿಸಿ ಲೋಚನಂಗಳೊಳಮರ್ಚಿ ತದಾಸ್ಯದೊಳೊಂದಿ ಕಂಠದೊಳ್
ಮಿಸುಗೆ ಭುಜಾಗ್ರದೊಳ್ ತೊಳಗಿ ವಕ್ಷದೊಳಾಳ್ದು ಕರಂಗಳೊಳ್ ವಿರಾ-
ಜಿಸಿ ಪದದಲ್ಲಿ ಬಿಳ್ದುವು ಭವಾನಿಯ ಮಾನಿಯ ದೈನ್ಯದೃಷ್ಟಿಗಳ್ ೮೬

ಇಂತು ಶರ್ವನ ಸರ್ವಾಂಗದೊಳ್ ನೋಟಂ ಮುಸುಂಕಿ ನೋಡಿ,

ಬೆಮರ್ವಳ್ ಬೆರ್ಚುವಳುರ್ಬುವ-
ಳಮರ್ವಳ್ ಪೆಱಸಾರ್ವಳಂಜಿ ನಿಲ್ವಳ್ ಸೊಂಕಲ್
ನಿಮಿರ್ವಳ್ ನೆನೆವಳ್ ಮುನಿವಳ್
ಸಮಸಲ್ವಳ್ ಗಿರಿಜೆ ಸೆಡೆದು ಸುಯ್ವಳ್ ಕಾಯ್ವಳ್ ೮೭

ಚಾರುತರಕಾಂತಿಮಯಸುಕು-
ಮಾರಾವಯವಂಗಳಂ ನಿರೀಕ್ಷಿಸಿ ನಲಿವಳ್
ತಾರಾಚಳನಾಥನ ಘನ-
ವೈರಾಗ್ಯಕ್ಕಂಜಿ ನಡುಗಿ ಸಿಡಿಮಿಡಿಗೊಳ್ವಳ್ ೮೮

ಅಂತುಮಲ್ಲದೆ,

---

೧. ಶೃಂಗಾರ ( ಕಾ. ) ೨. ಸತ್ಕರ್ಮ ( ಕಾ. ಬೆ. ಅ. ಬ. ) ೩. ಬಳೆಯಿಪ (ಕಾ. ಕ. ಬ. ಬೆ) ೪. ಶಿವನಂಗಸಂಗಮಂ ( ಅ. ) ೫. ಪರೀಕ್ಷಿಸಿ ( ಅ. ಬ. )

ಮಹಾಸ್ರಗ್ಧರೆ.

ಶಿವನಂ ನೋಡುತ್ತೆ ಮೇನಾಸುತೆ ಮದನಸುಖಾಸಕ್ತಿಯಿಂ ಸುತ್ತವಳ್ ಸೊಂ-
ಕುವಳಾನಂದಾಶ್ರುವಂ ಸೂಸುವಳಸುವಿಸುವಳ್ ತತ್ತಪಕ್ಕಂಜಿ ಹಿಮ್ಮೆ-
ಟ್ಟುವಳಂತಂತಳ್ಕುವಳ್ ಬಳ್ಕುವಳದಟಳಿವಳ್ ಕೋಡುವಳ್ ಬಾಡುವಳ್ ಕುಂ-
ದುವಳಾರ್ತಂಗೆಟ್ಟು ನಿಲ್ವಳ್ ನೆನೆದುರವಣಿಸಳ್ ಮುಂದಳಲ್ವಳ್ ಬಳಲ್ವಳ್ ೮೯

ಮತ್ತಮಾಗಳ್

ನಗುವಳ್ ನಗೆಯೊಳ್ ಕೌತುಕ-
ಮೊಗೆಯೆ ನಿರೀಕ್ಷಿಸುವಳೀಕ್ಷಣದೊಳಗೆ ದೈನ್ಯಂ
ಮಿಗೆ ಭಾವಿಸುವಳ್ ಭಾವದೊ-
ಳಗೆ ದೇವನ ಚೆಲ್ವನಬಲೆ ಸಲೆ ನಿಲೆ ನೆನೆವಳ್ ೯೦

ಇಂತು ನೋಳ್ಪರ ಕಣ್ಗೆ ಶೀತಳಮಯ ಸುಧಾರೋಚಿಗಳಂ ಬೀಱುವ ಚಂದ್ರಮನಂತೆ ಮುಟ್ಟುವರ ಮೆಯ್ಗೆ ತೀವ್ರಪ್ರತಾಪಮಂ ಕುಡುವ ಸೂರ್ಯನಂತೆ ಪೊಗಳ್ವವರ ನಾಲಗೆಗಮೃತದಂತೆ ಕೇಳ್ವರ ಕಿವಿಗೆ ಮಧುರವಾಣಿಯಂತೆ ನೆನೆವರ ಮನಕ್ಕೆ ನಿರುಪಾಧಿಕಜ್ಯೋತಿಯಂತೊಪ್ಪುತಿರ್ದ ರುದ್ರನ ಮನೋಹರಮೂರ್ತಿಯಂ ನೋಡಿ ನೋಡಿ ತಣಿಯದೆ ಸೊಂಕಿ ಸೊಂಕಿ ಸವೆಯದೆ ಪೊಗಳ್ದು ಪೊಗಳ್ದು ತೀಱದೆ ನೆನೆದು ನೆನೆದು ನೆಱೆಯದೆ ನಡೆತಂದು ಪಾರ್ವತೀದೇವಿ ಪೊಚ್ಚಪೊಸಪೂಗಳನಚ್ಚರಿಗೆ ತಂದು ತಂದಂದಂದಿಗೆ ಚಂದ್ರಧರನಂ ಕಳಾನಿಧಿಯಂ ವಿಳಾಸದಿಂದಾರ್ತದಿಂ ಹತ್ತೆಸಾರ್ದು ಮತ್ತೆ ಮತ್ತೆ ಮಾಣದೆ,

ಹರನಂ ಶಿವನಂ ಮೃಗಧರ-
ಧರನಂ ಸುಸ್ನೇಹಮಡರೆ ನವನವಕುಸುಮೋ-
ತ್ಕರದಿಂದೆ ನಚ್ಚಿ ಮಚ್ಚಿಯೆ
ಗಿರಿಜಾವಧುವರ್ಚಿಸುತ್ತುಮಿರ್ಪಿನಮತ್ತಲ್ ೯೧

---

೧. ಮೇನಾಕುವರಿ ಘನ (ಅ. ಒ.) ೨–೨. ಚೆಲ್ವನೀಕ್ಷಿಸುತ್ತುಂ (ಕ.) ೩. ಸುಧಾರಸಂಗಳಂ (ಕ.)

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೯೨

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯ-
ಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕ-
ರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ವಿರೂಪಾಕ್ಷದರ್ಶನ ಪುಷ್ಪೋಪಚಯ ಪೂಜಾವರ್ಣನಂ ಪಂಚಮಾಶ್ವಾಸಂ



# ಷಷ್ಠಾಶ್ವಾಸಂ

## ತಾರಕಾಸುರಯುದ್ಧವರ್ಣನಂ

ಶ್ರೀಪತಿವಾಕ್ಪತಿಪೌಲೋ-
ಮೀಪತಿಪೂಜಿತಪದದ್ವಯಂ ಸದ್ಭಕ್ತಿ-
ಶ್ರೀಪದಮಂ ಕುಡುಗೆಮಗೆ ವಿ-
ರೂಪಾಕ್ಷಂ ಭಾಸುರಂ ಭವಾನೀಭರ್ತಂ ೧

ಸಕಳೋರಗ[1]ಸುರನರಮ-
ಸ್ತ್ರಿಕಶೂಲನ[2] ಸಮಿತಲೋಕಪಾ[3]ಲನ ತೀವ್ರ-
ಪ್ರಕಟಯಶೋಲೋಲನ ತಾ[4]-
ರಕಾಸುರನ ಕೊರ್ವು ಪರ್ವಿತುರ್ವೀತ[5]ಳಮಂ ೨

ಅಂತುಮಲ್ಲದೆ,

ಮಹಾಸ್ರಗ್ಧರೆ.

ಉರಗಾನೀಕಾಬ್ಧಿಮರ್ತ್ಯವ್ರಜಗಹನ ಸುರವ್ರಾತಧಾರಾಧರಪ್ರ[6]-
ಸ್ಫುರಿತೌರ್ವಂ ಪಾವಕಂ ಮಾರುತನೆನಿಸಿ ಕರಂ ಶೋಷಿಸುತ್ತಾವಗಂ ಸು-
ಟ್ಟುರಿಪುತ್ತೆಳ್ಬಿಟ್ಟುತುಂ ಪೆರ್ಚಿದನಸುರನವಂ ತಾರಕಂ ತೀವ್ರಕೋಪಾ-
ಕರರೂಪಂ ಪ್ರಾಯಕಾ[7]ಯಂ ಪ್ರಬಳಬಳಯು[8]ತಂ ಚಂಡಶೀಲಂ ವಿಶಾಲಂ ೩

ಮತ್ತೇಭ.

ಅರರೇ ಆತ್ಮಬಲಾಕ್ಷಿಮಧ್ಯವಿ[9]ಮಲಶ್ರೀತಾರಕಂ ತಾರಕಂ
ಪರಭೂಪಾಲತಮಂಧಭೇದನಕರೋದ್ಯತ್ತಾರಕಂ ತಾರಕಂ
ಸುರಸಂಘಾತಪತಾಕಿನೀಪ್ರಬಳವಾರ್ಧ್ಯುತ್ತಾರಕಂ ತಾರಕಂ
ನರನಾಗಾಮರಲೋಕಶೋಕಸರಣೀವಿಸ್ತಾರಕಂ ತಾರಕಂ ೪

ಎಂಬ ಗಂಭೀರಪ್ರತಾಪಮಂ ತಳೆದು,

---

೧. ನರಸುರ ( ದಾ. ಗೊ. ). ೨. ನಿಖಿಳ ( ಕಾ. ಯು. ಅ. ಕ. ) ೩. ಕಾ ( ಕಾ. ಯು. ಬಿ. ಅ ದಾ. ಕ. ಗೊ.). ೪. ತಾ। ರಕದೈತ್ಯನ ( ಬಿ. ಯು. ಅ. ಸೆ. ): ತಾ। ರಕದನುಜನ ( ಕಾ. ಕ. ಪ. ). ೫. ತಳದೊಳ್ ( ಬ. ಅ ದಾ. ). ೬. ಕ್ರಾ ( ಕಾ. ಕ. ). ೭ ಕಾಯಪ್ರಬಳ ( ಬ. ಬಿ. ಮ. ಯು. ದಾ.). ೮. ಯುತೋಚ್ಚಂಡ ( ಮ. ಬ. ಬಿ. ಕ. ಅ. ದಾ. ). ೯. ವಿಲಸಚ್ಛ್ರೀ ( ಕಾ. ಬಿ. ದಾ. ಯು. ).

ಚಂಪಕ

ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀ-
ಕರಫಣಿಲೋಕಮಂ ಹಿಳಿದು ನಾಕಮನೋಡಿಸಿ ನಿಂದ ವೀರರಂ
ಧುರದೊಳೆ ತತ್ತಱಿಂದಱಿದು ತಳ್ಗಿಸುತಪ್ರತಿಮಪ್ರತಾಪಭಂ-
ಗುರಭುವನತ್ರಯಂ ನೆಗಳ್ದನಕ್ರಮಕಾರಿ ಜಿತಾರಿ ತಾರಕಂ ೫

ಇಂತು ಜಗತ್ತ್ರಯಮಂ ನಿಜಪ್ರತಾಪದಿಂ ಕುಕ್ಕುಳಂಗುದಿಸುವ ವಿಕ್ರಮಶೀಲನಪ್ಪ ತಾರಾಕಾಸುರನುರವಣೆಯಂ ಸೈರಿಸಲಾರದೆ ನಾಗರ್ಕಳುಂ ನರರುಂ ನಿರ್ಜರರುಂ ಕಿನ್ನರಸ್ತೋಮಮುಂ ಕಿಂಪುರುಷವ್ರಜಮುಂ ನೆರೆದು ಪರಿತಂದು ಮೇರುವಿನ ತಳ್ಪಲೊಳಿರ್ಪ ನಾರಾಯಣವಾರಿಜಪುತ್ರಪುರಂಧರರ ಸಭಾನಿಳಯದ್ವಾರವಳಯದ ಮುಂದೆ ಮಂದೈಸಿ ಮುದವಳಿದು ಮದವುಡುಗಿ ಮೆದೆಗೆಡೆದು ಮುಂದುಗೆಟ್ಟು ಸಂದಣಿಸಿ ನಿಂದು

ಚಂಪಕ.

[1]ಸೆರತತಿ ನೊಂದಳಲ್ದು ಮೊಱೆ[2]ಯೋ ಮೊಱೆಯೋ ನೆರೆದಲ್ಲಿಗಲ್ಲಿಗೊ-
ತ್ತರಿಸಿ ನಿಳಿಂಪವೀಥಿಯ್ಯವಿಧಾಯವಿಧಾ ಉರಗಪ್ರತಾನಮಾ-
ತುರಿಸಿ ಬಿಗುರ್ತು ನಿಂದು [3]ಶಿವಧೋ ಶಿವಧೋ ಎನುತುಂ ಸುರುಳ್ದು ಸೂ-
ಗುರಿಸಿ ತೆರಳ್ದು ತಲ್ಲಣಿಸಿ ಮಲ್ಲಳಿಗೊಂಡುದು ಮೇರುಭಾಗದೊಳ್ ೬

ಮೊಱೆಯಿಡೆ ಕೇಳ್ದು ಚಕ್ರಧರನುಂ ಜಳಜೋದ್ಭವನುಂ ಬಲಾರಿಯುಂ
ಮಱುಗಿ [4]ಸುರುಳ್ದಳಲ್ದು ಕರೆಯೆಲ್ಲಿಯದೀ [5]ಘನಶೋಕದಾವನಿಂ
ತುಱುಗಿದುದಾವನಿಂದೊದವಿತಾವನಿನುರ್ವಿದುದಾವನಿಂದೆ ಯ-
ಳ್ಕಱಿದುದಿ[6]ದಾವನಿಂದಲರ್ದುದಾವನಿನೊತ್ತರಿಸಿತ್ತು ಕೌತುಕಂ ೭

ಎಂದೆಂದು ನುಡಿಯುತಿರ್ಪಿನ
ಮಂದೆಯ್ತಂದೊಟ್ಟಯೊಱಲಿ ಮೆದೆಗೆಡೆಯುತ್ತುಂ
ಸಂದಣಿಸುತ್ತುರವಣಿಸು-
ತ್ತುಂ ದಡದಡಿಸುತ್ತೆ ಸುರನರೋರಗನಿಕರಂ ೮

---

೧. ಸುರತತಿ (ಅ.). ೨; ನೆರದಲ್ಲಿಗಲ್ಲಿಯೊ (ಕಾ); ಎನುತಲ್ಲಿಗಲ್ಲಿಗೊ (ಅ.). ೩. ಶಿವಧಾ ಶಿವಧಾ (ಮ. ಬ. ಕ. ಬೆ.). ೪. ಸುರುಳ್ದುರುಳ್ದು (ಕಾ. ಕ.); ಮರಳ್ದುಳಲ್ದು (ಅ.). ೫. ಘೋಷವಾವನಿಂ (ಮ. ಬ. ಕೊ ಗೊ. ಕ. ಡ. ಗ. ಓ) ೬ ನಿಂವಳಿಮ (ಕಾ. ಕ ಅ.).

ಸುರಿತರ್ಪ ಕಣ್ಣ ನೀರಿಂ
ಕರಾಗ್ರದೊಳ್ ನೆಗೆದು ತೋರ್ಪ ಪುಲ್ಲಿಂ ಮುಖದೊಳ್
ತರದಿಂ ಪೊಣ್ಮುವ ಮೊಱೆಯಿಂ
ನೆರೆದೊಱಲುತ್ತಿರ್ಪ ತಾಪದಿಂದಖಿಳಜನಂ ೯

ಅಂತು ಬಂದಳಲ್ದು ನಿಂದು,

ಉತ್ಪಲ

ಕಾವುದು ವಿಷ್ಣು ಕಾವುದರವಿಂದತನೂಭವ ಕಾವುದಿಂದ್ರ ಸದ್-
ಭಾವದೊಳೆಮ್ಮನೀಕ್ಷಿಪುದು ತಾರಕನಿಂದುಱೆ ನೊಂದು ಶೋಕದಿಂ
ಶೀವಿದೆವಾವುದಿನ್ನೆಮಗೆ ಜೀವನವಾವುದು ನಿಲ್ವ ತಾಣವಿ-
ನ್ನಾವುದು ರಕ್ಷಣಾರ್ಥಕರವಾವುದು ಸತ್ಪಥವಾವುದಾಶ್ರಯಂ ೧೦

ಅಂತುಮಲ್ಲದೆ,

ಚಂಪಕ

ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇೞ್ಗೆ ತಾರಕಾ-
ಸುರನ ಪೊಡರ್ಪು ತಾರಕನ ಮತ್ತತೆ ತಾರಕನಾಜ್ಞೆ ತಾರಕಾ-
ಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಕು ತಾರಕಾ-
ಸುರನ ನಿಮಿರ್ಕೆ ತಾರಕನ ಮೂರ್ಖತೆ ತಾರಕನುತ್ಪಥಕ್ರಮಂ ೧೧

ತಾರಕನಂ ಗುರುತರಭೂ-
ಭಾರಕನಂ ಸಕಳದುರಿತಪೂರಿತಪಾಪ-
ಪ್ರೇರಕನಂ ದುರ್ಗುಣವಿ-
ಸ್ತಾರಕನಂ ಬಾರಿಪನ್ನರಾರ್ ಧಾರಿಣಿಯೊಳ್ ೧೨

ಎಂದು ಬಿನ್ನವಿಸಿದ ಪನ್ನಗನರಸುರರ ಸಂತಾಪಮನೆಂತಾನುಂ ಕೇಳಲಾಱದೆ ಸಂತೈಸಿ ಮಂತ್ರಾಳೋಚನೆಯಂ ಮುಂದುಗೊಂಡು ಹರ್ಯಜಪುರಂಧರರ್ ಪರಿಮಿತಾಸ್ಥಾನರಾಗಿ,

---

೧. ಕರವಗ್ರದೊಳೊಪ್ಪಿ ( ಅ ). ೨-೨. ನೆರೆದೊಳಗಱತುಲಿವ ( ಅ ). ೩. ತಾರಕನುನ್ನತ ( ಅ ). ೪. ಭೇದಿ ( ಅ ).

ಚಂಪಕ.

ಪುರಹರನಿರ್ದಪಂ ನಿರುಪಮಾನತಪೋಮಯನಾಗಿ ಲೋಕಮೊ-
ತ್ತರಿಸಿ ತೆರಳ್ದು ಪುಯ್ಯಲಿಡುತಿರ್ದುದು ಸೈರಿಸಬಾರದಾತ್ತಸಂ-
ಗರವಿಜಯೋರ್ಜಿತಪ್ರಮುಖರಿಲ್ಲ ವಿಚಾರಿಸೆ ವೀರತಾರಕಾ-
ಸುರನತುಳಪ್ರತಾಪನಿಧಿ ಕಾಳೆಗಮಿಾ ಪದದೊಳ್ ನಿರರ್ಥಕಂ ೧೩

ಸುರಗುರುವಂ ಕಳಿಪುವುದಾ-
ದರದಿಂ ಸಂಧಾನಮಂ ನಿಮಿರ್ಚುವುದವನಿ-
ರ್ಪಿರವಂ ನೋಡುವುದಲ್ಲದೊ-
ಡರವರಿಸದೆ ಕಾದುವುದು ದಿಟಕ್ಕಿದು ಮಂತ್ರಂ ೧೪

ಎಂದು ನಾರಾಯಣನೀರಜಭವನಾಕಪತಿಗಳೇಕಚಿತ್ತರಾಗಿ,

ಶೌರ್ಯಮದೀ ಪೊಳ್ತಲ್ಲಂ
ವೀರ್ಯಾಧಿಪನೆನಿಪ ತಾರಕನ ಸಂಧಾನಂ
ಕಾರ್ಯಮಿದೆನುತುಂ ತ್ರಿದಶಾ-
ಚಾರ್ಯನ ಮುಖಮಂ ನಿರೀಕ್ಷಿಸುತ್ತಿಂತೆಂದರ್ ೧೫

ಸಕಳಕಳಾಪೂರಿತಮನ-
ನಕಳಂಕಚರಿತ್ರನಮರಗುರು ನೀಂ ಘನಸಾ-
ತ್ತ್ವಿಕನದುಕಾರಣದಿಂ ತಾ-
ರಕನಲ್ಲಿಗೆ ಪೋಪುದೊಲ್ದು ಮಾಳ್ಪುದು ನಯಮಂ ೧೬

ವಿನಯಮನಾಡುವುದಾಳೋ-
ಚನೆಗೆಯ್ವುದು ಚಿತ್ತದೊಳಗನಾರಯ್ವುದು ನೀ-
ನನುಕೂಲನಂತೆ ಪೊರ್ದುವು-
ದನವದ್ಯಂ ಸಾಮದಿಂ ಮರಳ್ಚುವುದವನಂ ೧೭

೧. ದಿಟಕ್ಕಿವೆ (ಅ). ೨. ವೀರ್ಯಾಧಿಕ (ದಾ).

ಅದು ಸಲ್ಲದೊಡಾತನ ನೇ-
ಹದ ಗೋತ್ರಸುಮಿತ್ರರಾಜಪುತ್ರಸಚಿವಸಂ-
ಘದ ಕಿವಿಗೇನಾನುಮನೀ-
ವುದನಾಡುತೆ ಭೇದದಿಂ [೧]ಕೆಳಲ್ಚುವುದವಸಂ ೧೮

ಆ ನಯವಾ[೨]ಗದೊಡಸುರಂ-
ಗಾನತವಚನಾಗಿ ಬಲ್ಪುಗುಂದದೆ ಬಯಸಿ-
ತ್ತೀನೆಂದುಮನನುಸರಿಸುವ
ದಾನದೊಳಂ ಸಂತವಿಡುವುದಾತನ ಮನಮಂ ೧೯

ಈ ಪೇಳ್ದಂದಮನೊಲ್ಲದೆ
ಚಾಪಳವೃತ್ತಿಯೊಳೆ ಮಿಾಱ ನುಡಿದೊಡೆ ಸಮರ-
ವ್ಯಾಪಾರದಲ್ಲಿ ಕಾಣ್ಬಂ
ಕೋಪಾವಿಷ್ಟಪ್ರಚಂಡದಂಡಕ್ರಮಮಂ ೨೦

ಎಂದು ರಾಜೀವಸಂಭವಾದಿಗಳೋಜೆಯಂ ರಾಜನೀತಿಯಂ ಕಲ್ಪಿಸಿ ಕಳಿಪೆ,

ಮಹಾಸ್ರಗ್ಧರೆ.

ಭರದಿಂ ಬೀಳ್ಕೊಂಡು ವಾಚಸ್ಪತಿ ಗಮನವ[೩]ಶಂ ಪುಷ್ಪಕಾರೂಢಕಾಯಂ
ಸ್ಥಿರಚಿತ್ತಂ ಸರ್ವಕಾರ್ಯಸ್ಥಿತಪರಿಣತಸಜ್ಞಾನಮೇಘಾನಿಳಂ ಭಾ-
ಸುರತೇಜಂ ರಾಜಪೂಜ್ಯಂ ನುತಸಕಳಕಳಾಮಾರ್ಗಸಂಗಂ [೪]ಸುಖಾಂಗಂ
ಹರಪಾದಾರಾಧಕಂ ತಾರಕನ ನಗರಿಯಂ ಪೊಕ್ಕನುತ್ಸಾಹದಿಂದಂ ೨೧

ಅಂತು ಪೊಕ್ಕು ಪುರವೀಥಿಯಂ ನಿರೀಕ್ಷಿಸುತ್ತುಂ ನೂತನನಿಕೇತನಯೂಥಕ್ಕೆ ಕೌತುಕಚಿತ್ತನಾಗಿ,

---

೧. ಮುರಳ್ಚು ( ಗ ). ೨. ಮೊಲ್ಲ ( ದಾ ). ೩. ರತಂ ( ಶಾ. ಬೆ. ದಾ. ). ೪. ವರಾಂಗಂ ( ಬ ).

ಉತ್ಪಲ.

ಬಂದು ವಿಮಾನದಿಂದಿಳಿದು ರಾಜಗೃಹಪ್ರತಿಹಾರದೇಶದೊಳ್
ನಿಂದು ಸುರೇಂದ್ರಮಂತ್ರಿ ನಡೆತಂದನೆನಿಪ್ಪುದನಂದು ಪೇಳೆ ಸಾ-
ರ್ತಂದು ಕವಾಟಮಂ ತೆಱೆಯೆ ಕಂಡನನಂತಸಮುದ್ಭಟಾವಳೀ-
ವಂದಿತಪಾದಪದ್ಮಯುಗರಾಜಿತನಂ ಘನತಾರಕಾಖ್ಯನಂ ೨೨

ಕಂಡುಪಚರಿಸಿದೊಡಸುರಂ
ಕೊಂಡಾಡುತ್ತುನ್ನತಾಸನಮನೀಯುತ್ತಾ-
ಖಂಡಲಮಂತ್ರಿಯನಸುಹೃ-
ನ್ಮಂಡಲರವಿರಾಹುಸನ್ನಿಭಂ ಬೆಸಗೊಂಡಂ ೨೩

ಸುರಪತಿಗೆ ಕುಶಲಮೇ ಪಂ-
ಕುರುಹಭವಂ ಕ್ಷೇಮಿಯೇ ಸರೋರುಹನಾಭಂ
ಸ್ಥಿರನೇ ನೀವಿಂತಿಲ್ಲಿಗೆ
ಬರವೇನೆಂದಱಿಪುವರ್ಥವಾವುದು ಕಜ್ಜಂ ೨೪

ಎನೆ ಸುರಗುರುವೆಂದಂ ನಾ-
ಗನಿಕರಮುಂ ಮರ್ತ್ಯನಿಕರಮುಂ ತರದಿಂ ದೇ-
ವನಿಕರಮುಂ ನಿಮ್ಮೊಳಿಗ-
ಮನೆ ಭರದಿಂ ಪುಯ್ಯಲಿಕ್ಕೆ ಕಳುಪಿದರೆನ್ನಂ ೨೫

ಮಹಾಸ್ರಗ್ಧರೆ.

ಬಿದಿಯುಂ ದೈತ್ಯಾರಿಯುಂ ವಜ್ರಧರನುಮೆನಿಪೀ ಮೂವರುಂ ಕೂಡಿ ಮೂಲೋ-
ಕದ ಶೋಕಾನೀಕಮಂ ಕೇಳ್ದತಿಕೃಪೆ ಮನದೊಳ್ ಪುಟ್ಟೆ ನಿನ್ನಲ್ಲಿಗೆನ್ನಂ
ಪದೆಪಿಂದಂ ಪೋಗವೇಳ್ದಟ್ಟಿದರಿದುವೆ ನಿಮಿತ್ತಂ ದಿಟಂ ಬಂದೆನೀ ಕಾ-
ರ್ಯದ ಭಾರಂ ನಿನ್ನದೆಂತುಂ ನಿನಗೆ ಧುರದೊಳಾರ್ ಪಾಟಿ ಪೇಳ್ ದೈತ್ಯರಾಜಾ ೨೬

೧. ತೆಗೆಯೆ (ಬ. ಯು. ಅ.) ೨. ಚರಿಸಿದನಸುರಂ (ಕಾ. ಯು.) ೩. ಸಾಟಿ (ಕಾ. ಬೆ. ಯು. ಸೆ.)

ವರಗಂಭೀರಂ ಧೀರಂ
ಪರಸೈನ್ಯಾರಣ್ಯದಾವನೆನಿಸಿದ ನಿನಗೊಂ-
ದರಿದುಂಟೆ ಪೇಳೆನುತ್ತುಂ
ಸುರಗುರು ಮಿಗೆ ಪೊಗಳೆ ತಾರಕಂ ನಗುತೆಂದಂ ೨೭.

ನಯಮಿಂತೇಕೆ ಬೃಹಸ್ಪತಿ
ಜಯಮಂ ಮುಂತಿಟ್ಟು ಬಂದವಂಗೆನಗತಿನಿ-
ಶ್ಚಯಬುದ್ಧಿಯಿಂದೆ ಮೇಲತಿ-
ಶಯಸಂಗರವಿಕ್ರಮಂಗಳುಳ್ಳೊಡೆ ಪೇಳಾ ೨೮

ಎಂದು ತಾರಕಂ ನಯಮನೊಲ್ಲದೆ ನಿರಾಕರಿಸಿ ನುಡಿಯೆ ಸುರಗುರುವಿಂತೆಂದಂ,

ಮಹಾಸ್ರಗ್ಧರೆ

ನಯಮಂ ನೀನೊಲ್ಲೆ ಬುದ್ಧಿಪ್ರದಸಚಿವಕುಲಂ ನೋಡೆ ತಾನಿಲ್ಲ ನಿಸ್ಸಂ-
ಶಯದಿಂದಂ ಮಂತ್ರಿಗಳ್ ಪೇಳ್ದತಿಹಿತವಚಮಂ ಕೇಳೆ ಮತ್ತಾರುಮಂ ಸಂ-
ದೆಯದಿಂದಂ ನಂಬೆ ನಂಬಿರ್ದತಿಹಿತಜನಮಂ ಪೊರ್ದಿ ಮಾತಾಡೆ ಮೇಲ-
ಪ್ಪ ಯಶೋವಿಸ್ತಾರಮಂ ಭಾವಿಸೆ ತನುಮುದದಿಂ ತಾರಕಾ ಮೇರೆಗೆಟ್ಟಯ್ ೨೯

ಎಂದು ವಾಚಸ್ಪತಿ ಸಾಮಮಂ ಬಿಟ್ಟು ಭೇದಮಂ ನುಡಿಯೆ ತಾರಕಂ ದರಸ್ಮಿತ-
ಮುಖನಾಗಿ,

ಎಂತೆಂತು ಗುರುವೆ ನೀನೆ-
ನ್ನಂತರಮಂ ನೋಡದಿಂತು ನುಡಿವರೆ ಸಮರ-
ಪ್ರಾಂತದೊಳೆನಗೆ ವಿಚಾರಮೆ
ಸಂತಮಿರತಿಮಥನಮೇಕೆ ತಾರಕನಿದಿರೊಳ್ ೩೦

ಹಿತರೆನಗಿನ್ನಾರ್ ವಾಚ-
ಸ್ಪತಿ ನೀನೆಂದಂತಿರಹಹ ಹುಸಿಯೆಲ್ಲಲ್ತು-
ನ್ನತಸಂಗರದೊಳಗಱಿಯಯ್
ಹಿತರೆನ್ನ ನಿಶಾತಖಡ್ಗಮುಂ ನಿಡುದೋಳುಂ ೩೧

೧. ಸಂ । ಶಯದಿಂದಂ (ಶಾ. ದಾ. ಯು.); ಸಂ । ದೆಯದಿಂ ನೀಂ (ಬ.) ೨. ಯಲ್ಲಲ್ತು (ಯು. ಕೊ.)

ಇಂತೆಂದು ನುಡಿದ ತಾರಕ-
ನಂತಸ್ಥಮನಱಿದು ಸಾಮಭೇದಂಗಳುಮಂ
ಪಿಂತಿಕ್ಕಿ ನಿರ್ಜರಾಚಾ-
ರ್ಯಂ ತಡೆಯದೆ ನುಡಿದನುಚಿತದಾನಕ್ರಮಮಂ ೩೨

ಉತ್ಪಲ.

ಕೇಳಲೆ ತಾರಕಾಸುರ ಸರೋಜಭವಾದಿಗಳಾಜಿರಂಗದೊಳ್
ಕಾಳೆಗಮಂ ನಿಮಿರ್ಚಲಣಮಾಱದಿರರ್ ದಿಟಮೆಂಬ ಯುದ್ಧಸ-
ಲ್ಲೀಳೆಯದಿರ್ಕೆ ನಿನ್ನ ಮನದೊಳ್ ಬಯಸಿರ್ದುದನೇನನಾದೊಡಂ
ಪೇಳದನಿತ್ತಪರ್ ಒಡವರಲ್ಲೊಡೆಯರ್ ಕನಕಾದ್ರಿಗಾವಗಂ ೩೩

ನೀಡಾಗದೆ ರಣರಂಗ-
ಕ್ರೀಡೆಯನುಳಿದೆಳಸಿದನಿತುಮಂ ದೇಶಮನೀ-
ಡಾಡಲ್ ಸಮರ್ಥರದಱಿಂ
ಜೇಡೊಲ್ದು ಸಮುದ್ರಮುದ್ರಿತಾವನಿಯೆಡೆಯೊಳ್ ೩೪

ಎನೆ ತಾರಕಂಗೆ ಕೋಪಂ
ಮನದೊಳ್ ಪುಟವೆಳ್ದು ಮುಖದೊಳವತರಿಸಿ ವಿಲೋ-
ಚನದೊಳ್ ಪಸರಿಸಿ ಪುರ್ಬಿನ
ಕೊನೆಯೊಳ್ ಕುಡಿಗೊಂಡು ನಿಮಿರೆ ನಡುಗುತೆ ನುಡಿದಂ ೩೫

ಸಡಿಫಡ ಸುರೇಂದ್ರಮಂತ್ರಿಯೆ
ಬೆಡಂಗಿದೇಕೆನ್ನ ಕೂಡೆ ನೆನೆಯದ ಮುನ್ನಂ[೧]
ಪೊಡವಿಯನೆನ್ನಯೆ ಕೆಯ್ಯೊಳ-
ಗಡಗಿರ್ದುದನೆನಗೆ ಕುಡುವೆನೆಂಬುದು ಚಿತ್ರಂ ೩೬

---

೧. ಮುನ್ನೀ ( ಅ. )

ಉತ್ಪಲ.

ಎನ್ನೊಡನೇಕೆ ನಿನ್ನ ಮೆಱೆ[1] ನಿನ್ನ ಮದಾಂಧತೆ ನಿನ್ನ ಮತ್ಸರಂ
ನಿನ್ನ ನಯೋಕ್ತಿ ನಿನ್ನ ಹೃದಯೋಗ್ರತೆ ನಿನ್ನಯೆ ಬುದ್ಧಿ ನಿನ್ನ ಸಂ-
ಪನ್ನತೆ ನಿನ್ನ ಮಂತ್ರಗತಿ ನಿನ್ನಯೆ ವಕ್ರತೆ ನಿನ್ನ ವಿಸ್ತರಂ
ನಿನ್ನಯೆ ನೀತಿ ನಿನ್ನ ಬಗೆ ನಿನ್ನ ತಿರಸ್ಕರಣಂ ಬೃಹಸ್ಪತೀ ೩೭

ಧರೆಯೊಳಗೆ ತಾರಕಂಗೆನ-
ಗರಿಮೇಘಮಹಾಬಲಂಗೆ ಸಮರಾಂಗಣದೊಳ್
ಹರಿಗಿರಿ ರವಿಗಿವಿ ಶಿಖಿಗಿಖಿ
ಸುರಪತಿಗಿರಪತಿಯಜಂಗಿಜಂ ತೆಗೆ ಸರಿಯೇ * ೩೮

ನೆಟ್ಟನೆ ಕಾಳೆಗಮನೊಡಂ-
ಬಟ್ಟಂ ಕೇಳಮರಗುರುವೆ ಅಮರಾವತಿಯಂ
ಬಿಟ್ಟೋಡಿ ನಿಮ್ಮ ಬೆಳ್ಳಿಯ
ಬೆಟ್ಟದ ಗುಹೆಗುಹೆಗಳೊಳಗೆ ಮಾಡುವುದಿಂಬಂ ೩೯

ಎಂದು ನುಡಿದ ತಾರಕನ ವೀರಾಳಾಪಮಂ ವಾಚಸ್ಪತಿ ಕೇಳ್ದು ಕೌತುಕಮ-ನಾಳ್ದು ನಿರ್ವೇದದೊಳ್ ಬಿಳ್ದು ಭಯರಸದೊಳಳ್ದು ಧೈರ್ಯದೊಳೆೞ್ದಂತಾನುಂ ಸಂತಯ್ಸಿಕೊಂಡು ಸಾಮಭೇದದಾನಂಗಳನುಲ್ಲಂಘಿಸಿದ ಕರ್ಕಶನಪ್ಪ ರಕ್ಕಸರರಸ-ನೊಳ್ ದಂಡಮೆಂದುಂ ಹಸನಾಗದೆಂದು ಮನದೊಳಳ್ಕುತುಂ ಮಾತಿನೊಳ್ ಬಲ್ಪು-ಗಿಡದೆ ತಾರಕನಂ ಬೀಳ್ಕೊಂಡು,

---

೧. ಮಱೆ (ಶಾ.) ೨. ಮದೋನ್ನತಿ (ಶಾ. ಬೆ. ಯು.); ಮದೋದ್ಧತೆ (ಬ. ದಾ.) ೩. ವಕ್ರತೆ (ಅ.) ೪. ದೊಳುಬ್ಬಿದ್ದು (ಅ.) ೫. ತಾರಕನಿಂ (ಸ.) * ೩೮ ನೆಯ ಪದ್ಯದ ಮುಂದೆ ಗೊ. ಸೆ. ಪ್ರತಿಗಳಲ್ಲಿ— ಗುದಜನಿತಂ ಭಗಪಾತಕ । ರೊದವಿದ ಕೆಲಸಕ್ಕೆ ನೀಂ ಸಹಾಯನಹೆಯಯ್ ॥ ಪದುಳಂ ಪೋಗು ಬೃಹಸ್ಪತಿ । ಮುದದಿಂದಂ ಪೇಳು ಕಂಡ ಕಾರ್ಯದ ಹದನಂ ॥ ಎಂಬ ಪದ್ಯವಿದೆ.

ಮೋ[೧]ನದೆ ನಡೆತಂದಂ ಸಂ-
ಧಾನವಿಹೀನಪ್ರಧಾನಚಿಂ[೨]ತಾಭರಿತಂ
ಮಾನಮುನಸ್ಸಂಗತವಿಧು-
ರಾನನವಿಗತಪ್ರಥೈರ್ಯನಮರಾಚಾರ್ಯಂ ೪೦

ಬರೆವರೆ ಸರೋಜಭವನುಂ
ಹರಿಯುಂ ವಾಸವನುಮಮರರುಂ ನೆರೆದಿರ್ದಾ-
ತುರದಿಂದೆ ಬರ್ಪ ಮಂತ್ರಿಯ
ಬರವಂ ನೆರೆ ಕಂಡು ತಮ್ಮೊಳಂದಿಂತೆಂದರ್ ೪೧

ಕೊರಗಿದುವು ಲೋಚನಂ ಭಾ-
ಸುರಮುಡುಗಿತು ಭಾಳಲೇಖೆ ಕಂದಿತು ಗಂಡಂ
ವರವಕ್ತ್ರಂ ಕಳೆಗುಂದಿತು
ಗುರುತರಸಂಧಾನಮಿಲ್ಲ ಗುರುವಿನ ಮುಖದೊಳ್ ೪೨

ಎಂದಾಗಳ್ ನುಡಿಯುತ್ತಿರೆ
ಬಂ[೩]ದೆಲ್ಲರ್ ನಮಿಸಲಮರಗುರು ಕುಳ್ಳಿರ್ದಿಂ-
ತೆಂದಂ ರಕ್ಕಸನೊಡನೆ-
ಲ್ಲಂದದೊಳಂ ಪೇಳ್ದೆ ನಾವ ಮಂತ್ರಮನೊಲ್ಲಂ ೪೩

ಕ್ರಮದೊಳ್ ಸೆ[೪]ಲ್ಲಂ ಸಂಧಾ-
ನಮನೊಲ್ಲಂ ಸಂಗರಾನುಸಂಧಾನಮೆ ತ-
ನ್ನ ಮನಂ ತಾರಕನೊಡನ-
ಶ್ರ[೫]ಮದಿಂ ಕಾದುವುದೆ ಮಂತ್ರಮಿಂತಿದೆ ಕಜ್ಜಂ ೪೪

---

೧. ಮೌನದೆ (ಕಾ. ಬೆ. ಯು. ಅ.). ೨. ಚಿಂತಾಭರದು । ಮ್ಲಾನ (ಅ.). ೩. ಬಂದೆಲ್ಲರ್ಗೆರಗುತಮರ ( ಕಾ. ಬ. ಯು. ಗ. ಡ. ಗೊ. ಅ. ಕ. ).೪. ಬಲ್ಲಂ ( ಬ. ). ೫. ಕ್ರಮದಿಂ( ಕ. ಡ. ಗ. ).

ಅತಿನಿಷ್ಠುರನತಿ ನಿಷ್ಕೃಪ-
ನತಿನೀರಸನತಿನಿರಾಶ್ರಯಂ ತಾರಕನಿಂ-
ತತಿದುಷ್ಕರನತಿದುರ್ಜನ-
ನತಿದುರ್ಗುಣನತಿದುರಾತ್ಮನತಿದುಶ್ಶೀಲಂ ೪೫

ಅಂತುಮಲ್ಲದೆ,

ಅಪರಿಮಿತತುರಗಕುಲದಿಂ
ದಪರಿಮಿತೇಭಪ್ರತಾನದಿಂ ತಾರಕನಿಂ-
ತಪರಿಮಿತಪತ್ತಿಯಿಂದ-
ಶ್ವಪತಿಗೆ ಗಜಪತಿಗೆ ನರಪತಿಗೆ ಮಿಗಿಲೆನಿಪಂ ೪೬

ಸಿಡಿಲಿಂದರಣ್ಯಶಿಖಿಯಿಂ
ವಡಬಾನಳನಿಂ ಲಯಾಗ್ನಿಯಿಂ ತಾರಕನಿ-
ರ್ಮಡಿ ಮೂವಡಿ ನಾಲ್ವಡಿಯ-
ಯ್ವಡಿ ಭರದೊಳ್ ಬಲದೊಳುಷ್ಣದೊಳ್ ತೀವ್ರತೆಯೊಳ್ ೪೭

ಎಂದು ವಾಚಸ್ಪತಿ ತಾರಕಾಸುರನ ಪಟುತರಪ್ರತಾಪವಂ ಪೇಳುತಿರ್ಪ ಸಮಯದೊಳೊರ್ವ ಗಂಧರ್ವನಾಯಕನತಿತ್ವರಿಗತಿಯಿಂ ಪರಿತಂದು

ಉತ್ಪಲ

ಏತಱ ಮಾತಿದೇತಱ ವಿಚಾರತೆಯೇತಱ ಮಂತ್ರಶಕ್ತಿಯಿ-
ನ್ನೇತಱ ಸತ್ವಮೇತಱ ಬಲೋನ್ನತಿಯೇತಱ ವೀರವೃತ್ತಿ ತಾ-
ನೇತಱ ಬುದ್ಧಿಯೇತಱ ಪರಾಕ್ರಮದುತ್ಸವನೇತಱಾಜ್ಞೆ ವಿ
ಖ್ಯಾತನ ತಾರಕಾಸುರನ ಬೀಡು ಬಿಡುತ್ತಿದೆ ನೋಡಲದ್ಭುತಂ ೪೮

---

೧. ದುರ್ಗುಣಿಯುತಿ (ಶಾ. ಯು. ಅ. ಕ.). ೨. ಬಲದೊಳ್ ಚಲದೊಳುಷ್ಣದೊಳ್ (ಶಾ. ಜಿ.). ೩. ತೀವ್ರದೊಳಂ (ಅ). ೪. ಪರಿದು ಬಂದು (ಶಾ. ಕ. ದಾ. ಗೊ. ಸೆ.). ೫. ವಿಚಾರವದೇತಱ (ಬ. ಅ.).

ಮಹಾಸ್ರಗ್ಧರೆ.

ಧರೆಯಿಂಬಿಲ್ಲಬ್ಧಿಯಿಂಬಿಲ್ಲಚಲವಿತತಿಯಿಂಬಿಲ್ಲ ದಿಕ್ಚಕ್ರಮಿಂಬಿ-
ಲ್ಲ ರಥವ್ರಾತಕ್ಕೆ ಘೋಟಪ್ರತತಿಗೆ ಗಜಯೂಥಕ್ಕೆ ಪಾದಾತಿವೃಂದ-
ಕ್ಕುರಿದಾರ್ಗಂ ರೇಣು ಪಂಕಂ ಶಿಥಿಲತೆ ದೆಸೆಗೆಟ್ಟಿತ್ತು ತಾನೆಂಬಿನಂ ಸಂ-
ಗರಕಾಲಾಭೀಳಭೃತ್ತಾರಕನಖಿಳಬಳಂ ತೀವಿ ಪರ್ವಿತ್ತದೆತ್ತಂ ೪೯

ಎಂಬ ಸಂಭ್ರಮೋಕ್ತಿಯನಂಬುಜಾಕ್ಷಂ ಕೇಳ್ದು ಕೋಪಮಂ ತಾಳ್ದು,

ನಡೆ ಸುರಪತಿ ನಡೆ ಪಾವಕ
ನಡೆಯಂತಕ ನಡೆ ನೃವಾಹ ನಡೆ ಜಳಧೀಶಾ
ನಡೆ ಮಾರುತ ನಡೆ ವಿತ್ತಪ
ನಡೆ ವೃಷಭಾರೂಢ ಗಾಢತರವಿಕ್ರಮದಿಂ ೫೦

ಸುರರುಂ ಕಿನ್ನರರುಂ ಖೇ-
ಚರರುಂ ಗಂಧರ್ವರುಂ ಗರುಡರುಂ ವಿದ್ಯಾ-
ಧರರುಂ ರಾಕ್ಷಸರುಂ ಯ-
ಕ್ಷರುಮೊಂದೊಂದೆಸೆಯೊಳೊಡ್ಡನೊಡ್ಡುಗೆ ರಣದೊಳ್ ೫೧

ಎಂದು ಬೃಹಸ್ಪತಿಗತಿಭರ-
ದಿಂದಂ ಬೆಸಸುತ್ತುಮಿರ್ಪ ಸಮಯದೊಳೊರ್ವಂ
ಸಂದಣಿಪ ನುಡಿಗಳೊಗುತಿರೆ
ನಿಂದುರ್ಬುತೆ ಭಾಷೆಗೊಟ್ಟನಚಳಿತವೀರಂ ೫೨

ಚಂಪಕ.

ಎನಗಿದಿರಾದ ತಾರಕಬಳಂ ಕಬಳಂ ಕಬಳಂಬೊಲಿಂದು ಪೊ-
ಕ್ಕನವಧಿಸಾಹಸಪ್ರಕರವಂ ಕರವಂ ಕರವಂತೆ ಪೊರ್ದಿ ಭೋಂ-
ಕನೆ ಕರವಾಳ್ ಕಡಂಗಿದವನಂ ದವನಂ ದವನಂಜೆವೊಯ್ದು ಪೋ-
ಳ್ದನಿಮಿಷರಾರೆ ವೈರಿಬಲವಂ ಬಲವಂ ಬಲವಂದು ಗೆಲ್ದಪೆಂ ೫೩

---

೧—೧. ಗಂಧರ್ವಗರುಡರುನ್ನತ ( ಅ. ) ೨. ಪನ್ನಗರುಂ ( ಅ. ) ೩—೩. ಸಂಪಣಿಯೊಳ್ ತೂಗುತ್ತಿರೆ ( ಅ. ) ೪. ರಾಶಿ ( ಕಾ. ); ರಾರಿ ( ಅ. )

ಎಂದು ನಿಂದಾಸುರದಿಂ ಭಾಷೆಗುಡುತ್ತಿರ್ಪ ವೀರಾಳಾಪಮಂ ಕೇಳುತ್ತಮರಪತಿ ಸಮರೋತ್ಸಾಹಭೇರಿಯಂ ಪೊಡೆಯಿಸೆ.

ಮತ್ತೇಭ.

ಧರೆಯಲ್ಲಾಡೆ ಸಮುದ್ರಮುರ್ಕೆ ದಿಗಧೀಶರ್ ಬೆರ್ಚೆ ದಿಕ್ಕುಂಜರಂ
ಕರಮಳ್ಕುತ್ತಿರೆ ಸೀಳೆ ಶೈಳಮಹಿರಾಜಂ ಬಳ್ಕೆ ಕೂರ್ಮಂ ಭಯಾ-
ತುರಘೂರ್ಣಾನನನಾಗೆ ಮೇಗಣುಡುವೃಂದಂ ಬೀಳೆ ಕೋಳಾಹಳೋ-
ತ್ಕರನಿಸ್ಸಾಳಧಳಂಧಳಂಧಳರವಂ ಪರ್ಬಿತ್ತು ಮೂಲೋಕಮಂ ೫೪

ಅನಂತರದಲ್ಲಿ,

ಮತ್ತೇಭ.

ಉರುನಿಸ್ಸಾಳಧಳಂಕೃತಂ ನೆಗೆದುದೇಳೇಳ್ ಭೀಕರಾಕಾರಮಾ-
ಗಿರೆ ಪೆಣ್ಣಾನೆಯನಾರ್ದು ಹಲ್ಲಣಿಸು ವಾಹವ್ಯೂಹಮಂ ಕೂಡೆ ಪೂ-
ಡು ರಥವ್ರಾತಮನೆಯ್ದೆ ಕೆಯ್ದುಗೊಳವೇಳ್ ಪಾದಾತಿಯಂ ಬೇಗಮೆಂ-
ಬ ರವಂ ಪರ್ವಿತು ನಾಕಲೋಕದಿವಿಜಾನೀಕಪ್ರಧಾನಾಖ್ಯರೊಳ್ ೫೫

ಇಂತು ಕೊರ್ಬಿ ಪರ್ಬಿದ ಕೋಳಾಹಳದ ಸಂಭ್ರಮಮಿಂಬುವಡೆಯೆ, ಸುರಕುಲಂ ಸಡಗರಿಸಿ ಘುಡುಘುಡಿಸಿ ನಡೆನಡೆದು ಪರಿದು ನೆರೆದು ಮುಂಗುಡಿಗೆದಱಿ ಸಂಗರಭೂಮಿಯೊಳೊಡ್ಡಿ ನಿಂದೆಡ್ಡಮಾಗಿ ಬಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು ತೊಲಗದ ಕಂಭದ ಹುಲಿಯ ಬಚ್ಚಣೆಯ ಗಜಮುಖದ ಭುಜಬಳಗರುಡನ ಗಜಕೇಸರಿಯ ಬಿರುದ ಶರಭನ ಗಂಡರ ದಾವಣಿಯ ಭಂಡಣವಿಜಯನ ವೈರಿಜಗದ್ದಳನನ ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ ವಿಳಸದ ಗೆಜ್ಜೆಯ ಅಭಯಹಸ್ತದ ಉಭಯಸತ್ತಿಗೆಯ ಹಗಲ ಕೆಯ್ದಾವಿಗೆಯ ಘಟಸರ್ಪನ ಕಟಕಸೂಱೆಗಾಱನ ಅಸುರಕೋಳಾಹಳನ ದೈತ್ಯಮರ್ದನನ ದಾನವಾರಿಯ ರಕ್ಕಸಜೂಜಿನ ಪಚ್ಚೆಯ ಪರಿಗೆಯ ಪಸರದ ಪಾರಿಯದೊಯ್ಯಾರದ ಕೆಂದಟ್ಟಿನ ಪಂತಿಯ ಪೊಂಬಟ್ಟೆಯ

೧. ನೆಗೆದುದುದ್ಧತ್ ( ಕಾ. ಕ. ) ೨. ವಾಜಿ ( ಕಾ. ಬಿ. ಯು. ) ೩. ನೆಡೆತಂದು ) ಕಾ. ಕ. ) ೪. ಚಂಡರಣವಿಜಯದ ( ದಾ. ) ೫. ಗಜವಿವಳನ ( ದಾ. ) ೬. ಉಭಯಚ್ಛತ್ರದ ( ಕಾ. ಕ. ) ೭-೭. ಪಚ್ಚೆವರಿಗೆಯ ಪಸದನದ ( ದಾ. )

[೧]ಹಾದಿಯ ಕಾಳಿಕೆಯ ಜಾಳದ ನೀಲದ ಸಾಲಶಂಖದ ತಟ್ಟನೊಟ್ಟಜೆಯ ಕಟ್ಟು-ಬ್ಬಟಿಯ ಬಿರುದಿನ ಹರಿಗೆಕಾಱರ [೨]ಪೆರಿವೀಥಿಯೊಳಂ; ಮತ್ತಮಾ ಹರಿಗೆಕಾಱರಿಕ್ಕೆಲ-ದೊಳ್ ಕೋಡಕೆಯ್ಯೊಳುಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟಿಯ ಕಿರ್ಗಟ್ಟಿನ ಸುರಗಿಯ ಕಟ್ಟದ [೩]ಚಿಂದಿಯ ತೊಟ್ಟ [೪]ಕಂಚುಳಿಕೆಯ ಹಿಡಿದ ಬಿಲ್ಲ ಬಲಗೆಯ್ಯ ಸರಳ ಬೆನ್ನ ಬತ್ತಳಿಕೆಯೆ ಸುತ್ತಿದ ಹೀಲಿಯ ಮುಡಿಗಟ್ಟಿನ ಪಟ್ಟೆಯ ಮಲಯಜದ ಮಂಗಳಬೊಟ್ಟಿನ ಕಟ್ಟಣಕದ ಸಿಂಗರಂಜೆರಸಿ ಬೀರಸಿರಿಯಂ ಬೀಱಿ ನಂಜಿನ ಪುಂಜದಂತೆ ಕುಳಿಕನ ಕುಲದಂತೆ ಜವನ ಜಂಗುಳಿಯಂತೆ ಬಯ್ದು ಕೊಲ್ವ ಬಕನ ಬಳಗದಂತೆ ನಿಂದ ಬಿಲ್ಲ ಬಲ್ಲಣಿಯ ಹಿಂಗಟ್ಟನೊಳ್ ಮುಂಕಣಿಸಿ ನೆಗೆಪಿದ ಸಬಳಂ-ಗಳ ಮೊನೆಯ ನೊತ್ತಮಿನಕಿರಣಂಗಳನೊತ್ತರಿಸಿ ಮಿಸುಗುವ ತಪನನ ಬಿಸಿಯ ಬಿಂಬದೊಳ್ ಮಾರ್ಪೊಳೆದು ತಳತಳಿಸಿ ಸಿಡಿಲ ಬಳಗಂ ತಳಿರ್ತಂತೆ ಗಗನತಳದೊಳ್ ತುಱುಂಗಿ ನೆರೆ ಮೆಱಿಯೆ ನಭಕ್ಕೆ ಚಿಮ್ಮಿ ಕುರುಳ್ಚಿ ಕೆಯ್ಮಾಡುವ ಕೊಂತಗಾಱರ ತಿಂತಿಣಿಯ ನಡುವೆ ಪಿಡಿದ ವಜ್ರಮುಷ್ಟಿಯ ಮುಸೆದಿಟ್ಟಿಯೆಸೆವ ಗಂಡಗತ್ತಿಯ ಕೂರಲಗಿನ ಭಾರಿಸಂಕಲೆಯ ಪಟ್ಟಿಯದ ಪರಶುವಿನ ಚಕ್ರದ ಕಕ್ಕಡೆಯ ಕರನಾಳ ಕಠಾರಿಯ ಕತ್ತಿಯ ಕರಗಸದ ಗಂಡಗತ್ತರಿಯ ಶೂಲದ ಕಾಲ ತೊಡರ ರಕ್ಕಸರ ಹಾಹೆಯ ತಡೆಯದ ಲವುಡಿಯ [೫]ಚಾವುಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಱಿದು ಮಸಗಿ ದುವ್ವಾಳಿಸುವ ಗೋವಳಗಟ್ಟಿಯ ಗೊಂದಣಂಗೂಡಿ ಗಗನಂ [೬]ಕವಿದಂತೆ ದೆಸೆಗಳ್ ಉಗಳ್ವಂತೆ ಭೂಮಿ ಬೆಸಲಾದಂತೆ ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ; ಮತ್ತಮಾ ಪದಾತಿಬಲದ ಪೆಡಮೆಟ್ಟನೊಳ್ ಹೂಡಿದ ಕುದುರೆಯ ನೀಡಿ ನೆಗೆದ ಪಳವಿಗೆಯ ಕಟ್ಟಿದ ಚಮರ್ದ ನೆಟ್ಟ ತಿಸುಳದ ಕೀಲಿಸಿದ ಕೀಲ್ಗಳ ತಿರುಗುವ ಚಕ್ರದ ಸುತ್ತಿಬಿಗಿದ ಲೋಹಬಂಧದ ತೆತ್ತಿಸಿದ [೭]ಸೂಲಿಗೆಯ ಹೇಱಿದ ಶಸ್ತ್ರವೇಱಿದ ಸಾರಥಿಯ ಮಿಱಿ ನಿಂದ ಜೋದರ ಭೀಕರರೂಪು ಲೋಕಕ್ಕೆ ಪೊಸತಾಗೆ ಚಕ್ರಚೀತ್ಕೃತಿಗೆ ದಿಕ್ಕರಿಗಳ್ ಬೆರ್ಚೆ ಸೂತರ ಕಳಕಳಕ್ಕೆ ಭೂತಳಂ ಸಡುಗೆ ಜವನ ಜಕ್ಕಂದೊಳಲಿಯಂತೆ ಮಾರಿಯ ಮುಸಕದಂತೆ

---

೧. ಹಳದಿಯ (.ಕಾ. ಬೆ. ಯ.) ೨. ಪರಿವಿಡಿ (ಕಾ. ಯ.) ೩. ಚಿಂದರಿಯ (ಕಾ.) ೪. ಕಂಚುಕಿಯ (ಯ. ಬ.) ೫. ಚವುರಿಯ (ಅ.) ೬. ಬಿಳ್ದಂತೆ (ಅ.) ೭. ಸೂನಗಿಯ (ಕಾ. ಕ. ಬೆ. ಯ)

ಪಸರಿಸಿ ನಿಂದ [೧]ರಥಿಕಪ್ರತಾನದೊಳಂ; ಮತ್ತಮಾ ಸ್ಯಂದನವೃಂದಮಂ ಮುಂದು-ಗೊಂಡ ಸೊನ್ನ ಹಲ್ಲಣದ ರನ್ನದ [೨]ಪಕ್ಕರಕ್ಕೆಯ ಕಟ್ಟಿದ ಗೆಜ್ಜೆಯ ಸೂಟಿಯ ರವದ ಪೊರ್ಕುಳ ಗಂಟೆಯ ಮೋಹಿಸುವ ಮೊಗವಡದ ರೂಹಿಸುವ ನೊಸಲ ಕನ್ನಡಿಯ ಕಡುಚೆಲ್ವ ಕೊಡಂಕೆಯ ಲಂಬಿಸುವ ಚಮರದ ಚಾರುತರಭೂಷಣಂ ಭೀಷಣ-ಮಾಗೆ ಕಂಬಿಯ ಕಡಿಯಣದ ಕೀಲಣದ ಹೋರಟೆಯ ಘಾರಾಘಾರಿಯೊಳ್ ಜೋಳಿಸುವ ಲಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ ಹರಿಣ-ಚರಣಮಂ ಚೆಲ್ಲವಾಡುವ ಗರುಡನಂ ಪರಿಹಾಸಂಗೆಯ್ವ ಪವನನಂ ಪರಿಭವಿಸುವ ಮನಮನಸುಗೆಡಿಸುವ ದಿಟ್ಟಿಗಳ ನಿಟ್ಟಣಿಸಿ ದಾಂಟುವ ಕಡುವೇಗದಿಂ ಮೆಱೆದ ಚರ್ಮದಂಡದ ನೆಮ್ಮುಗೆಯಿಲ್ಲದೆ ದನಿದೋಱುವನುಮಾನಂ ಪೊರ್ದದೆ ಮಡಸನ್ನೆ ಮನದೊಳಂಕುರಿಸುವಲ್ಲಿಂ ಮುನ್ನಂ ಪರಿದು ಶರಧಿಯನೆಡಗಲಿಪ ಗಗನಮನಡರ್ವ ಜಾತ್ಯಶ್ವಂಗಳ ವಳಯಮಂ ಸೊಂಕದಂಕಣಿಯ ಹಂಗಿಲ್ಲದೆ ಭೋಂಕನೇಱಿ ಸುಳಿವ ಮಿಂಚಂ ಸೆಳೆದು ಸಿಮಿರ್ಚಿ ಕರತಳದೊಳಮರ್ಚಿದಂತೆ ಮಿಗೆ ಪಿಡಿದು ಹೆಗಲೊಳಿಟ್ಟ ಪಟ್ಟಿಗಳ ಬೆಳಗಗೆಯೆಳ್ದು ಗಗನಮನಪ್ಪಿ ಗಾಡಿಕೆಯಿಂದೊಪ್ಪುವ ಭುಜಪೂಜೆಯ ವೀರ-ನಿವಾಳಿಯ ಬಿರುದಿನೇಳ್ಗೆಯ ತರದ ದೌಡೆಯ ಹೀಲಿದಳೆಯ ಮಾಲೆಗೊಂಡೆಯ [೩]ಚೆಲ್ಲುವ ಚಾಮರದ ಸೂಸುವ ಸೀಗುರಿಯ ಸೂರ್ಯಸೋಮವಂಶದ ರಾಜಪುತ್ರರ ರಾಯ-ರಾವುತರ ದಿವ್ಯವಾಹಕರ ರಾಘೆಗಿಂಬುಗೊಟ್ಟು ವಾಘೆಗಳವಟ್ಟು ಪ್ರಳಯಸಮಯ-ದೊಳ್ ಮೇರೆಯಂ ಮೀಱಿದ ವಾರಿನಿಧಿಯ ತರಂಗಕುಲದಂತಿರ್ದ ತುರಂಗಬಲ-ದೊಳಂ; ಮತ್ತಮಾ ತುರಂಗಬಲದಪರಭಾಗದೊಳ್ ಹಮ್ಮಿದ ಗುಳದ ಹೂಡಿದ ಱಿಂಚೆಯದ ಕಾಲ ಕಂಭದ ದಂಡೆಯ ಬರಿಕೆಯ್ಯ ಪಟ್ಟೆಯದ ಕೋಡ ಮೊನೆಯ ಕೀರ್ತಿಮುಖದ ಅಗ್ರಸಲ್ಲವದ ಪತ್ರಗತಿಯ ತಲೆಯೊಳೊಟ್ಟಿದ ಕುಂಕುಮದ ಕಪೋಳದೊಳ್ ಸುರಿವ ಮದಜಲದ ಜೆನ್ನ ಮೇಲಿಳಿವ ಬಿಳಿಯ ಚವರದ ಮುಂತಣ ಮಾವಂತರ ಪಿಂತಣ ಬಡಿಗೆಗಾಜರ ನಡುವಣ ವೀರಜೋದರ ಮುಗಿಲನಳ್ಳಿಱಿವ ಕದಳಿಯ ಕಂಭದ ಬೊಬ್ಬೆಗುಡುವಾರೆಕಾಜರ ಘುಳುಘುಳಿಸುವ ವೀರವೃಂದದ ಘುಡುಘುಡಿಸುವ ದೌಡೆಯ ಕೋಳಾಹಳದಬ್ಬರಮಾಗೆ ಸೂರ್ಯಮಂಡಲಮಂ

೧. ರಥ ( ಅ. ) ೨. ಪಕ್ಕರಿಕೆಯ ( ಶಾ. ಅ. ಕ. ) ೩. ಚಿಮ್ಮುವ ( ಶಾ. )

ಸೆಳೆವ ಸಿಡಿಲಂ ಪಿಡಿವ ದಿಕ್ಕರಿಗಳನೆಳ್ಬಟ್ಟುವ ಕಡುಗಾಯ್ಪಂ ತಳೆದು ನೀಲಾಚಳಂ ಸಾಲಿಟ್ಟಂತೆ ಅಂಜನಗಿರಿಯೊಯ್ಯಾರಂ ಬಡೆದಂತೆ ನಿಂದ ಗಜಘಟಾಪಟಲದೊಳಂ; ಇಂತೊಡ್ಡಿ ನಿಂದ ಹಸ್ತ್ಯಶ್ವರಥಪದಾತಿಯೆನಿಪ ದೇವರ್ಕಳ ಚಾತುರಂಗಬಲದ ಕಟ್ಟಿದಿರೊಳೊಡ್ಡಿ ನಿಂದ ತಾರಕಾಸುರನ ಚಾತುರಂಗಬಲವೆಂತಿರ್ದುದೆಂತೆಂದೊಡೆ ಪೆರ್ಬುಲಿಯೊರ್ಬುಳಿಯಂತೆ ಸಿಂಗದ ಸಂಗರದಂತೆ[1] ಶರಭಂಗಳ ನೆರವಿಯಂತೆ ಭೇರುಂಡನ ಹಿಂಡಿನಂತೆ ಕುಳಿಕನ ಕುಳದಂತೆ ನಂಜಿನ ಪುಂಜದಂತೆ ಸಿಡಿಲ ಗಡಣ-ದಂತೆ ಕಾಳ್ಕಿರ್ಚಿನ ಗೂಳೆಯಂತೆ ವಡಬಾಲನ ಪಡೆಯಂತೆ ಕಾಲಾಗ್ನಿಯ ಮಾಲೆ-ಯಂತೆ ಮಾರಿಯ ಮೊರಿಯಂತೆ[2] ಮೃತ್ಯುವಿನ ಕೊತ್ತಳಿಯಂತೆ ಅಂತಕನ ಸಂತತಿ-ಯಂತೆ ಭೈರವನ ಬಳಗದಂತೆ ಮುಂತಿರ್ದ ರಕ್ಕಸವಡೆಯ ನಡುವೆ ನಿಂದ ವೀರ-ತಾರಕಾಸುರಂ ತನ್ನ ಬಲಕ್ಕಿದಿರಾದ ನಿರ್ಜರಬಲಮಂ ನಿರೀಕ್ಷಿಸಿ ರಾಕ್ಷಸಗುರುವಪ್ಪ ಭಾರ್ಗವನ ಮುಖಮಂ ನೋಡಿ,

ಒಟ್ಟೈದ ನಿರ್ಜರಬಲದೊಳ್
ಕಟ್ಟಿದಿರಾಗಿರ್ದು ನಿಂದರಾರಾರವರಂ
ನೆಟ್ಟನೆನಗಱಿಪವೇಳ್ಕೆನೆ
ನಿಟ್ಟಯಿಸಿಯೆ ನುಡಿದನಸುರಕುಲಗುರು ಭರದಿಂ ೫೬

ಮತ್ತೇಭ.

ನಡೆತಂದುನ್ನತವಕ್ತ್ರನಾಗಿ ಸುರರಂ[3] ಗಂಧರ್ವರಂ[3] ಯಕ್ಷರಂ[3]
ಎಡೆಗೊಂಡೊಪ್ಪುವ[4] ರತ್ನಕೋಟಿ[5]ರುಚಿರಪ್ರಖ್ಯಾತಕೋಟೀರಮಿ-
ರ್ಪಡಿ ದಿವ್ಯಪ್ರಭೆಯಾಯೆ ಜೆಳ್ಗೊಡೆಯ ವೀರಚ್ಛಾಯೆಯೊಳ್ ವಜ್ರಮಂ
ಪಿಡಿದೈರಾವತಮೇಱಿ ನಿಂದನವನಿಂದ್ರಂ[6] ಕೇಳ್[6] ದನುಪ್ರೋದ್ಭವಾ ೫೭

ಆತನ ಕೆಲದೊಳ್ ಚಂಡ-
ವ್ರಾತಂ ಸಿಡಿಲೇಳ್ಗೆಯೆಳ್ವ ಬಲ್ದಗರೇಱಿ-
ರ್ದಾತಂ ಸಕಳಜಗದ್ವಿ-
ಖ್ಯಾತಂ ಹುತವಹನೆನಿಪ್ಪನವಧರಿಸಸುರಾ ೫೮

---

೧. ಪಂಗಡ ( ಕಾ. ); ಸಂದಣಿ ( ಬ. ) ೨. ಬಳಗ ( ಬೆ. ); ಮುಡಿ ( ಯ. ) ೩. ರಿಂ ( ಕಾ. ಯ.ಬೆ.) ೪ ನಡೆ (ಕಾ ಯ. ಬೆ.) ೫. ಖಚಿತ (ದಾ.) ೬–೬. ನಿಂದವನೆ ದೇವೇಂದ್ರಂ (ಅ.ದಾ.ಗ. ಕೊ.)

ಉರುತರ ಭೀಕರವಕ್ತ್ರಂ
ಕರತಳದಿಂ ಕಾಲದಂಡಮಂ ಕಡುಪಿಂದಂ
ತಿರಿಪುತ್ತಿರ್ಪವನಂತಕ-
ನರಿದೆನಿಪ ಉಲಾಯವಾಹನಂ ದನುಜೇಂದ್ರಾ ೪೯

ಅಸಮಬಳನತುಳವಿಕ್ರಮ-
ನಸುರಕುಲೋತ್ತಂಸನಾಜಿಮುಖಹಸನಂ ಮಾ-
ನಸನಂ ಪಾಯ್ದೇಱದ ರೆ-
ಕ್ಕಸರರಸಂ ನಿರೃತಿ ನಿರುತವೆಲೆ ದನುಜೇಂದ್ರಾ ೫೦

ಅವಧರಿಸೆಲೆ ತಾರಕ ಮಕ-
ರವನೇಱ ವಿಶಾಲಪಾಶಮಂ ಪಿಡಿದತ್ಯು-
ತ್ಸವದಿಂದಂ ನಿಂದಾತಂ
ನವರತ್ನಾಭರಣನಿಕರಕಿರಣಂ ವರುಣಂ ೫೧

ಸಂದಣಿಪ ಕುರುಳ ಕುಂತದ
ಮುಂದಣ ಸಾಮಂತರಾಜಪುತ್ರೋತ್ಕರದಿಂ
ಗೊಂದಣಿಸಿ ಪರ್ವಿ ರಣದೊಳ್
ನಿಂದಿರ್ಪವನೇಣವಾಹನಂ ಪವಮಾನಂ ೫೨

ತುರಗವನೇಱ ಮಯೂಖಾ-
ವರಣಸಿತಚ್ಛತ್ರಮೆಸೆಯೆ ಗರುಡರ ಗಂಧ-
ರ್ವರ ಯಕ್ಷರ ಸಂದಣಿಯೊಳ್
ಬರುತೊಪ್ಪುವ ಭೀಕರಂ ಕುಬೇರಂ ದನುಜಾ ೫೩

---

೧. ಕುಲೋತ್ತುಂಗ (ದಾ). ೨–೨. ಕ। ಕ್ಕಸರಕ್ಕಸನಸನೆ ನಿರುತಿ ನಿರುತಃ ದನುಜಾ (ಯು.); ಕ। ರ್ಕಶರಕ್ಕಸನಸನೆ ನಿರುತಿ ನಿರುತಂ ದನುಜಾ(ಬೆ. ಪಾ. ಕೊ); ಕ। ರ್ಕಶನಸನೆ ನಿರುತಿಯಾಕ್ಷಿಸಸುರಾಧೀಶಾ (ಅ.) ೩. ವರಣಕಿರಣವರಣಂ (ಶಾ.)

ನಂದಿಯನೇಱಿ ಗಣಂಗಳ
ಮುಂದೆ ವೃಷಧ್ವಜಮನೆತ್ತಿ ಸಮರೋತ್ಸಾಹಾ-
ನಂದದೊಳೆ ಬಂದು ಮುಂದಂ
ನಿಂದವನೀಶಾನನೆಂಬನೊರ್ವಗಣೇಶಂ ೬೪

ವರಚಕ್ರಂ ಶಾರ್ಙ್ಗಂ ಗದೆ-
ಯುರುತರಭೀಕರಮನೀಯೆ ಸಂಗರರಂಗ-
ಕ್ಕುರವಣಿಸುತ್ತುಂ ಬರ್ಪಂ
ಗರುಡಧ್ವಜನಸುರಮರ್ದನಂ [೧]ಕೇಳರಸಾ ೬೫

[೨]ಸುತ್ತಿರ್ದ ತಳೆಯ ದಿವಿಜರ
ಮೊತ್ತದ ಗಂಧರ್ವಕುಲದ ನಡುವೆ ವಿಳಾಸಂ
ಬೆತ್ತತಿಸಂಭ್ರಮದಿಂದೆ ಬ-
ರುತ್ತಿರ್ಪಂ ಹಂಸವಾಹನಂ ಚತುರಾಸ್ಯಂ ೬೬

ಎಂದು ತಾರಕಾಸುರಂಗೆ ಭಾರ್ಗವಂ ಬೇಱೆವೇಱೆ ಮಾಱೊಡ್ಡಿ ಮಿಾಱಿ ನಿಂದ ಗೀರ್ವಾಣಮುಖ್ಯರಂ ತೋಱುತ್ತಿರ್ಪ ಸಮಯದೊಳಮರಪತಿ ಸಮರಕ್ಕೆ ಸನ್ನದ್ಧವಾದ ತನ್ನ ಬಲಕ್ಕೆ ಸನ್ನೆದೋಱೆ ಹೊಯ್ವ ನಿಸ್ಸಾಳದ ಭೇರಿಯ ತಂಬಟದ ಚಂಬಕದ ವೀರವೃಂದದ ದಾಡೆಯ ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ ಹೊನ್ನ [೩]ಬೊಂಬುಳಿಯ ರನ್ನದ ಕೊಂಬಿನ ಕೋಳಾಹಳಂ ನೆಗಳೆ ಮುಸಗಿ ಬೊಬ್ಬಿಟ್ಟು ದೆಸೆದೆಸೆಗೆ ಪರಿದು ಮೂದಲಿಸಿ ಮುಂಗುಡಿ-ಗೆದಱಿ ಮೊಗ್ಗರಂಬೊಯ್ದುಗ್ಗಲಿಸಿ ನಡೆದು ಬಗ್ಗಿಸಿ ಬಯ್ದೊಗ್ಗುಗೆಡದೆ ಮುಂಕಣಿಸಿ ಭೋಂಕನೆ ನೂಂಕಿ ಪದಾತಿಬಲಂ ಪಡಿತಳಿಸಿ ರಥವ್ರಾತಮುಂ ತುರಂಗಸಂಘಮುಂ ಗಜ-ಘಟಾಪಟಳಮುಂ ಸಂಗಡಿಸಿ ಪಿಂಗದೊತ್ತರಿಸಿ ತನಗಿದಿರಂ ಬರ್ಪ ಚತುರಂಗಬಲದ ಭಾರದುರವಣೆಯಂ ತಾರಕಾಸುರಂ ಕಂಡು ಕೋಪಮನೆಡೆಗೊಂಡಾಸ್ಫೋಟಿಸಿ ಬಾಹಾ-ಸ್ಫಾಲನಂಗೆಯ್ದು ಗಜಱಿ ಗರ್ಜಿಸಿ ಗದ್ದುಗೆವೊಯ್ದಿರ್ದ ಪೊರ್ದಿ ನಿಂದು ಮಿಕ್ಕು ಮಿಾಱುವ ರಕ್ಕಸವಡೆಗೆ ಕಾಯ್ದು ಕಡುಕೆಯ್ದು ಮೆಯ್ದೋಱಿ ಕೆಯ್ವೀಸಿದಾಗಳ್,

೧. ಕೇಳಸುರಾ (ಕಾ. ಕ. ಅ. ದಾ. ಗೊ.) ೨. ಸುತ್ತಿಡಿದ ಕಳಿಯು (ಅ.) ೩. ಬೊಬ್ಬುಳಿಯು (ಕಾ. ಕ.)

ಚಂಪಕ

ಚರಣದ ಧೂಳಿ ಬಾಂದೊಱೆಗೆ ಚಾಸಣಮಾಗಿರೆ ಹೇಷಿತಂ ದಿಶಾ-
ಕರಿಗಳನೆಬ್ಬಿ ಬೃಂಹಿತಮಜಾಂಡಮನಾಂತಿರೆ ಚೀತ್ಕೃತಂ ಧರಾ-
ಧರಮ[1]ನದಿರ್ಪೆ ತಾಗಿದು ಪದಾತಿ ಪದಾತಿಯೊಳಶ್ವಮಶ್ವದೊಳ್
ಕರಿ ಕರಿಯೊಳ್ ರಥಂ ರಥದೊಳದ್ಭುತಮಾಹವಭೂಮಿಗಪ್ಪಿನಂ ೬೭

ಅಂತು ತಾಗಿದಾಗಳ್,

ಚಂಪಕ.

ಬೆರಸಿ ಪದಾತಿ ನೆಕ್ಕು ನೆಱಿಲೆಂಬ [2]ನೆಳಿಲ್ ನೆಳಿಲೆಂಬ ಘಾರು ಘ-
ರ್ಘರ ಘರಿಲೆಂಬ ದೊಪ್ಪುಧಡಲೆಂಬ ಬುದಿಲ್ ಬುದಿಲೆಂಬ ಸಂಭ್ರಮಂ
ನೆರೆದು ಖಣಿಲ್ ಖಟಿಲ್ ದೊಗಹು ಧೊಕ್ಕು ದುಡುಮ್ಮು ತಟಿಲ್ ನೆಟಿಲ್ ಪಟಿಲ್
ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ ೬೮

ಅನಂತರದಲ್ಲಿ,

ಚಂಪಕ.

ಗಿರಿಗಿರಿಯೊಳ್ ಪಳಂಚುವವೊಲೆಯ್ದಿ ರಥಂ ರಥದೊಳ್ ಪಳಂಚೆ ಸೂ-
ತರ ರಥಚಕ್ರಸಂಚಯದ ಕಾರ್ಮುಕವೀಧಿಯ ಮುಕ್ತಮಾರ್ಗಣೋ-
ತ್ಕರದ ವಿಶಾಲಹುಂಕೃತಿ ಸಮುದ್ಧತಚೀತ್ಕೃತಿ ಚಾರುಟಂಕೃತಿ
ಸ್ಫುರಿತನವೀನಭೀಂಕೃತಿ ಚಮತ್ಕೃತಿಯಾಯ್ತು ಮಹಾಜಿರಂಗವೊಳ್ ೬೯

ಅಂತು ತಾಗಿದ ರಥಪ್ರತಾನದ ಕಾಳೆಗಮಂ ಕಂಡು,

ಚಂಪಕ.

ಜಳಧಿತರಂಗಸನ್ನಿಭತುರಂಗಬಲಂ [3]ಮುಳಿದೇಱೆ ವಾಹಕಾ-
ವಳಿಯ ನಿಶಾತಖಡ್ಗದ ಖಣಿಲ್ ಖಟಿಲೆಂಬ ಮಹಾರವಂ ಮುಖೋ-
ಚ್ಛಳಿತರವಂ ಖುರೋದ್ಗತರವಂ ಕಳಿಕೋಚ್ಚರವಂ ಕಶಾರವಂ
ಬಳಸಿ ನಭಃಸ್ಥಲಕ್ಕೆ ಬಳೆಯುತ್ತಿರೆ ತಾಗಿದುದಾಜಿರಂಗದೊಳ್ ೭೦

---

೧. ನವುರ್ಚೆ ತಾಗಿತು ( ಕ. ) ೨. ನಿಳಿಲ್ ನಿಟಿಲೆಂಬ ( ಕಾ. ಬಿ. ಕ. ) ೩. ಮುಳಿದೇಱು ( ಡಾ ); ಮುಳಿದೆತ್ತಿ ( ಕಾ. ); ಮುಳಿದೆಯ್ದಿ ( ಅ. )

ಚಂಪಕ.

ನೆರೆದು ಬುಬೆಂಬ ಕಟ್ಟೆದಿರ ತಟ್ಟಿನ ರಾವುತರೊಳ್ ಕಡಂಗಿ ಮ-
ಚ್ಚರಿಸಿ ಮರಳ್ದು ಮೂದಲಿಸಿ ಕೂರಸಿಯಿಂ ತಲೆ ಪಾಱೆ ಬೀಳ್ವಿನಂ
ಸರಿಬೆಸನಾಗಿ ಪೊಯ್ಯೆ ತಲೆ ಮಾರ್ತಲೆಯೊಳ್ ನಿಮಿರ್ದಟ್ಟೆಯಟ್ಟೆಯೊಳ್
ಹರಿಹರಿಯೊಳ್ ಪಳಂಚಿ ಪೊಸತಾದುದು ಸಂಗರರಂಗಭೂಮಿಯೊಳ್ ೭೧

ಆ ಕಾಳೆಗದ ಕಡುಪಂ ಚಂಡಗಜಾರೋಹಕರ್ ಕಂಡು,

ಉತ್ಪಲ.

ಮುಂಕಣಿಸುತ್ತೆ ಚಪ್ಪರಿಸುತುಂಗುಟದಿಂದೊದೆದಾರ್ದು ಸಾರ್ದು ಕೂ-
ರಂಕುಸಮಿಟ್ಟು ಭೈ ಭಲರೆ ಭೈಯೆನುತುಂ ಕಡುಪಿಂದೆ ನೂಂಕೆ ನಿ-
ಶ್ಶಂಕತೆಯಿಂದೆ ತೂಳ್ದು ಘಟಿಯೊಳ್ ಘಟಿ ಜೋಡಿಸಿ ದಂತಜಾಲದೊಳ್
ಭೋಂಕನೆ ಪೊಣ್ಮಿ ತೋರಕಿಡಿ ಸೂಸೆ ಕಱುತ್ತುಱಿ ತಾಗಿತಾಜಿಯೊಳ್ ೭೨

ಆಗಳ್,

ಭರಿಕೆಯ್ ಭರಿಕೆಯ್ಯೊಳ್ ನಿ-
ಷ್ಠುರದಂತಂ ದಂತದೊಳ್ ಮುಖಂ ಮುದಮುಖದೊಳ್
ವರಜೋದರ್ ಜೋದರೊಳೊ-
ತ್ತರಿಸಿದರಾರೋಹಕರ್ಕಳಾರೋಹಕರೊಳ್ ೭೩

ಮುಂತಿದಿರೊಳ್ ನೂಂಕಿದ ಮಾ-
ವಂತರ ಗಳಗರ್ಜನಕ್ಕೆ ಕಡುಮುಳಿಯುತ್ತ-
ತ್ಯಂತಂ ಪೊಣ್ಮಿತು ದಂತಾ-
ದಂತಿ ನಖಾನಖಿಯೆನಿಪ್ಪ ಕಾಳೆಗಮಾಗಳ್ ೭೪

ಅಂತು ಪೋಗದೆ ನಿಂದು ತಾಗಿ ತಳ್ತಿಱಿದು ರಕ್ಕಸವಡೆಯೊಳ್ ಮಿಕ್ಕು ಮಿಱುವ ದೇವರ್ಕಳ ದೆಖ್ಖಾದೆಖ್ಖಿಯ ಕಾಳೆಗಮಂ ಕಂಡು ಕಡುಮುಳಿದು ತಾರಕಾಸುರಂ ವಾರಣಾರೂಢನಾಗಿ ತನ್ನ ಕೆಲಬಲದ ಪಿಂತಣ ಮುಂತಣ ಚತುರಂಗಬಲಂ ^೧^ಬೆರಸಿ ಬಿಲ್ಲನುಗಿದು ^೧^ನಿಲ್ಲದೆ ನೂಂಕಿದಾಗಳ್

೧–೧. ಬೆರಸು (ಕಾ); ಬೆರಸೊಲ್ಲನುಲಿದು (ಬ); ಬೆರಸೆಲ್ಲರಂ ನುಲಿದು (ಯ); ಬಲಂಬೆರಸೊಲವಿಂ (ಬೆ.ಕೊ)

ಚಂಪಕ

ಅರರೆ ಚತುರ್ಬಲಂಬೆರಸು ಭೋಂಕನೆ ನೂಂಕಿದ ವೀರತಾರಕಾ-
ಸುರನೊಳದಾವನೇಱುವನದಾವನಮರ್ಚುವನಾವನೆಯ್ದೆ[1] ಮ-
ಚ್ಚರಿಸುವನಾವನೊಡ್ಡುವನದಾವನೊಡರ್ಚುವನಾವನಾಂತು ನಿ-
ತ್ತರಿಸುವನಾವನಣ್ಮಿ ತಲೆದೋರ್ಪನದಾವನಿದಿರ್ಚಿ ತಾಗುವಂ ೭೫

ಎಂಬ ಸಂಭ್ರಮಮಂತರಿಕ್ಷದೊಳೀಕ್ಷಿಪ ಯಕ್ಷಕುಲದೊಳ್ ನೆಗಳೆ,

ಚಂಪಕ

ಕುಳಿಕನ ಕೂರ್ಪೊ ಬಾಡಬನ ತೀವ್ರತೆಯೋ ಸಿಡಿಲೇಳ್ಗೆಯೋ ದವಾ-
ನಳನ ಪೊಡರ್ಪೊ ಭೈರವನಳುರ್ಕೆಯೊ ಕಾಲನ ಕಾಯ್ಪೊ ತದ್ದಿಶಾ-
ನಿಳನತಿವೇಗಮೋ ಪರಿವ ಮೃತ್ಯುವಿನುಗ್ರತೆಯೋ ಮಹಾಲಯ-
ಜ್ವಲನನ ದಾಳಿಯೋ ತಿಳಿಯೆ ಪೇಳೆನೆ ನೂಂಕಿದನುಗ್ರತಾರಕಂ ೭೬

ಅಂತು ನೂಂಕಿದತುಳಬಳವೀರತಾರಕನ ಚತುರಂಗಬಲದುರವಣೆಗಿರಲಾಱದೆ ಸುರರ ಪದಾತಿಬಲಂ ಪರಿಭವಂಬಡೆದು ರಥಾನೀಕಂ ವಿರಥಮಾಗಿ ತುರಂಗಕುಲಂ ತರಹರಿಸಲಾಱದೆ ಗಜದೊಡ್ಡು[2] ಗಂಡುಗೆಟ್ಟು ಬೆಂಗೊಟ್ಟು ನಿಲ್ಲದೋಡಿ ಕಲೆಯುಂ[3] ಕವಿಯುಮಾಗೆ

ಉತ್ಪಲ

ಕಂಡತಿವೀರತಾರಕನಣಂ ಪರಿಹಾಸಮನಾಳ್ದು ಮಿಾಱಿ ಬೆಂ-
ಕೊಂಡು ಭಯಾಕುಳವ್ರಜದ ಬೆಂಬಳಿಯಂ ನೆಱೆ ಬಿಟ್ಟು ನಿಂದು ವೇ-
ದಂಡಮನೋಜೆಯಿಂ ತಿರುಪಿ ನೂಂಕಿ ಮರಳ್ದು ರಣಾಗ್ರರಂಗಭೂ-
ಮಂಡಳಮಂ ನಿರೀಕ್ಷಿಸುತೆ ಪೋದನಪಾರಗಭೀರವಿಕ್ರಮಂ ೭೭

ಅಂತು ಪೋಗೆ,

---

೧. ನೆಯ್ದೆ ( ಶಾ. ) ೨ ಚತುರಂಗ ಬಲಂ ( ಅ. ) ೩. ಕಲಿಯುಮಾಕಲಿಯುಮಾಗೆ ( ಬ. ); ಯುಂ ಕಲ್ಲಿಯುಂ ದಲ್ಲಿವಿಲ್ಲಿಯುಮಾಗೆ ( ಶಾ.) ಚಿಲ್ಲಾಪಿಲ್ಲಿಯುಮಾಗಿ ( ಯ ); ಯುಂ ತಲ್ಲೆಯುಂ ದಲ್ಲಿವಿಲ್ಲಿಯುಮಾಗಿ (ಬೆ); ಕತ್ತಲೆಯುಂ ಕವಿಯುತಮಾಗೆ (ಅ); ಕಂಗೆಟ್ಟೆಲ್ಲಿಯುಂ ಕಲ್ಲಿಯುಮಾಗೆ(ದಾ.)

ಉತ್ಪಲ

ಇತ್ತಲನಂತರಂ ತ್ರಿದಶರೋಡಿ ಸುರಾದ್ರಿಹರಾದ್ರಿಯೊಳ್ ಭಯಂ-
ಬೆತ್ತು ಮಹಾಗುಹಾವಳಿಗಳಂ ಘನಗಹ್ವರಘೋರವೀಧಿಯಂ
ಸುತ್ತಿದರಣ್ಯದಂಧತಮಮಂ ತವಕಂ ಮಿಗೆ ಸಾರ್ದು ಪೊಕ್ಕು ಶಾ-
ಯೊರ್ತ್ತರರಿರ್ದರಪ್ರತಿಮತಾರಕಸಂಗರರಂಗಭಂಗಿತರ್ ೭೮

ಓಡಿದರಡಗಿದರಗಿದರ್
ಕೋಡಿದರನುಗೆಟ್ಟರಳ್ಕಿದರ್ ಸೊರ್ಕಿಳಿದರ್
ಬಾಡಿದರಂಜಿದರಮರರ್
ಪಾಡಳಿದರ್ ಮಣಿದರಳ್ದರಳಿದರ್ ಕಳಿದರ್ ೭೯

ಇಂತು ಭಯಾಕುಳರಾಗಿ ಮೇರುಗಿರಿಯ ರಜತಾದ್ರಿಯ ಗುಹೆಗಹ್ವರಂಗಳಂ ಪೊಕ್ಕು ಗಾಡಿಗೆಟ್ಟು ಗಂಡುಡುಗಿರ್ದ ದೇವರ್ಕಳನಲ್ಲಲ್ಲಿ ಕರೆದು ಮೆಲ್ಲಮೆಲ್ಲನೆ ನೆರೆಪಿ ಸುರಕುಲಂಬೆರಸು ಹಿರಣ್ಯಗರ್ಭನುಂ ಜಿಷ್ಣುವುಂ ವಿಷ್ಣುವಿರ್ದ ತಾಣಕ್ಕೆ ಜಾಣಿಂ ಬಂದು ಕಂಡು ಕುಳ್ಳಿರ್ದು ಕಾಳೆಗದಿಂ ನೊಂದಾಳೋಚನಂಗೆಯ್ವಲ್ಲಿ ಮುನ್ನಿನಂತಲ್ಲ-ದಿನ್ನೊರ್ಮೆ ಸಂಗರಮಂ ಸಮುಕಟ್ಟಲ್ವೇಳ್ಕುಮಾನಿರ್ದಪೆಂ ನೀವಿರ್ದಪಿರಜನಿರ್ದಪ-ನಂಜಲೇತರ್ಕೆಂದು ಶಕ್ರಂ ಮಿಕ್ಕು ನುಡಿಯೆ,

ನೆನೆದು ವಿಚಾರಿಸಿ ನಿಶ್ಚಯ-
ಮನನತುಳೋಪಾಯಕೋವಿದಂ ಸ್ಥಿತಿಕರ್ತಂ
ವನಜಾಕ್ಷಂ ಘನನಿರ್ಮಲ-
ನನಾಗತಜ್ಞಾನಿ ಶಕ್ರನೊಡನಿಂತೆಂದಂ ೮೦

೧. ಓಡಿದರಂಜಿವರಗಿದರ್ ( ಮ. ಬ. ಯ. ಕ. ಡ. ಸೆ. ); ಓಡಿದರಂಜಿದರಡಗಿದರ್ ( ಅ. ) ೨. ಸೊರ್ಕಳಿದರ್ ( ದಾ. ಕ. ) ೩. ಬಾಡಿದರಳ್ಗಿ ( ಬ ); ಬಾಡಿದರಳ್ಕಿ ( ದಾ. ಕೊ. ಕ. ) ೪. ಗೆಯ್ಯುದ್ದ ವಿಚಾರಿಸುಪಲ್ಲಿ ( ಕಾ. ಕ. ಬೆ. ಯ. )

ಆನಿರ್ದುಂ ತಾನಿರ್ದುಂ
ನೀನಿರ್ದುಂ ಮೂವರಿರ್ದುಮೇನಾದುದು ಪೇಳ್
ನಾನಾನಿಷ್ಠುರತಾರಕ-
ಸೇನಾಮುಖನಿಖಿಳಭುವನವಿಧ್ವಂಸನದೊಳ್ ೮೧

ಅಂತುಮಲ್ಲದೆ,

ಅಯ್ದುಂ ಮುಖದ ಭವಂಗೀ-
ರಯ್ದುಂ ಭುಜದೀಶ್ವರಂಗೆ ಷಣ್ಮುಖನುದಯಂ-
ಗೆಯ್ದೇಳನೆಯ ದಿನಂ ಬಂ-
ದೆಯ್ದಿದೊಡತ್ಯುಗ್ರತಾರಕಾಸುರನಳಿವಂ ೮೨

ಎಂದಬ್ಜಜನಿತ್ತಾದೇ-
ಶಂ ದಿಟಮದುಕಾರಣಂ ಕಪರ್ದಿಯ ತಪಮಂ
ಭಂದಂಗೆಡಿಸುವ ವೀರನ-
ನಿಂದೆ ವಿಚಾರಿಸಲೆ ವೇಳ್ಪುದಿಂತಿದೆ ಕಜ್ಜಂ ೮೩

ಕಾಳೆಗದ ಮಾತನಾಡದಿ-
ರಾಳಾಪಂಗೊಳ್ಳನಸುರನತಿಬಳನದಱಿಂ
ಸೂಳಿಯ ತಪಮಂ ಚಲಿಯಿಸು-
ವಾಳಾಪಂಗೆಯ್ವುದುಚಿತಕಾರ್ಯಂ ಶೌರ್ಯಂ ೮೪

ಎಂದು ಚಕ್ರಧರಂ ಶಕ್ರನೊಳ್ ತಕ್ಕಳಿದು ನುಡಿಯೆ ತಮ್ಮೊಳೊಂದಾಗಿ ವಚನನಿಚಯದಿಂ ವಿಚಾರಿಸಿ ನೋಡಿ ಸಕಳಜಗಜ್ಜನವಶೀಕರಣಪಟುತರಕುಸುಮ-ಕೋದಂಡಟಂಕಾರಪ್ರತಾಪಮುಖಂ ಮಕರಪತಾಕನೆಂದಚ್ಚರಿ ಮಿಗೆ ನಿಶ್ಚಯಿಸಿ

೧. ಪೇ । ಳಾ ನಿಷ್ಠುರತರತಾರಕ ( ಶಾ. ಕ. ) ೨. ವಿಧ್ವಂಸಕನೊಳ್ ( ಅ. ಕ. ) ೩. ಎಂದ ಜ್ಞಾಜ್ಞಿನಿತ್ತುಪದೇಶಂ ( ದಾ. ಸ. ) ೪. ನಿಂತು ( ಶಾ. ಬಿ. ) ೫. ಗೆಯ್ವಕಾರ್ಯಮನುಚಿತದ ಶೌರ್ಯಂ ( ಶಾ. ಕ. ) ೬. ಶಕ್ರನೊಳಕ್ಕಳಿದು ( ಬಿ. )

ಪಂಚೇಶುವಿಂದಲ್ಲದೆ ಪಂಚಮುಖನ ತಪಂ ಸಂಚಲಿಸದೆಂಬ ಸಂಚಮನಱಿದು ಕಾಮನಂ ಕರೆಯಿಸಲ್ವೇಡಿ ಸರಸಿಜಾಕ್ಷಂ ಪುರಂದರನ ಮುಖಮಂ ನೀಡಾಗದೆ ನೋಡಿದಾ ಪ್ರಸ್ತಾವದೊಳ್,

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ **೮೫.**

ಗದ್ಯ.

ಇದು ಸಮಸ್ತಸುರಾಸುರನಿಕರಮುಕುಟಖಚಿತದಿನಕರಕರಾಧಿಕ್ಯಮಾಣಿಕ್ಯ-ಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕ-ರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ತಾರಕಾಸುರಯುದ್ಧವರ್ಣನಂ ಷಷ್ಠಾಶ್ವಾಸಂ



# ಸಪ್ತಮಾಶ್ವಾಸಂ

## ವಸಂತೋದ್ಯಾನಮದನಪ್ರಯಾಣಪ್ರಾರಂಭವರ್ಣನಂ

ವರಸುರನರೋರಗವ್ರಜ-
[೧]ಕಿರೀಟಪದಯುಗನತಿಸ್ವತಂತ್ರಂ ಶರ್ವಂ
ಹರನಧಿಕಾಕ್ಷಂ ಸಲೆ ಭ-
ಕ್ತಿರಸಮನೆಮಗೀಗೆ ಹಂಪೆಯ ವಿರೂಪಾಕ್ಷಂ ೧

ಪುರುಹೂತಂ [೨]ಹರಿ ನೋಡಿದ
ಪರಿಯಂ ತಾನಱಿದು ಮಂತ್ರಿವಾಚಸ್ಪತಿಯಂ
ಕರೆದೀಗಳೆ ಕಾಮನನತಿ-
ಭರದಿಂದೊಡಗೊಂಡು ಬರ್ಪುದೆಂದಿಂತೆಂದಂ ೨

ಇರ್ದೀ ತೆಱನಿದು ನೀನಱಿ-
ದಿರ್ದದೆ ನಿನಗಱಿಪಲಿಲ್ಲ ಕಾರ್ಯ[೩]ಸ್ಥಿತಿಯಿಂ
ಸಾರ್ದತಿವೇಗದೆ ಶೂರ್ಪಕ-
ಮರ್ದನನಂ ತರ್ಪುದಾವ ತೆಱದಿಂ [೪]ಜೀವಾ ೩

ಎಂದು ಬೆಸಸುತ್ತುಮಿಱೆ ನಡೆ-
ತಂದಂ ಗುರು ಮದನನಲ್ಲಿಗಮಲಿನದೇಹಂ
ಸಂದ ಕಳಾವ್ಯೂಹಂ ಗುಣ-
ಸಂದೋಹಂ ಗಗನಗಮನಪುಷ್ಪಕವಾಹಂ ೪

ನಡೆತಂದು ಮುಂದೆ ಚೆಲ್ವಿಂ-
ದಿಡಿದ ರತೀಶ್ವರನ ರಾಜಧಾನಿಯನೊಳಪೊ-
ಕ್ಕೆಡೆಯುಡುಗದೆ ನೆರೆದರಮನೆ-
ಗೆಡೆಯಾಡುವ ಲಲನೆಯರ್ಕಳಂ ನೋೞ್ಪಾಗಳ್ ೫

---

೧. ಸುರುಚಿರಕೋಟೀರಪಾದಪದ್ಮಂ ಶರ್ವಂ ( ಅ ). ೨. ಹರಿಯಾಡಿದ ( ಶಾ. ಬೆ. ). ೩. ಸ್ಥಿತಿಯುಂ ( ಅ. ಗ. ). ೪. ಜವದಿಂ ( ಓ ).

ತೆಗೆದೆಸುವ ಪುಷ್ಪಚಾಪನ
ಮುಗಳಂಬಿಂಗೆಣೆಯೆನಿಪ್ಪ ವಧುವೊರ್ವಳ್ ಮೆ-
ಲ್ಲಗೆ ಬಂದಳ್ ಮನ್ಮಥನೋ-
ಲಗಕ್ಕೆ ಶತಪತ್ರದಾತಪತ್ರದ ನೆಳಲೊಳ್ ೬

ನೇವುರದ ಮುದ್ರಿಕೆಯ ಮಧು-
ರಾವರಣಧ್ವನಿ ಬೃಹಸ್ಪತಿಯ ಕಿವಿವುಗೆ ಸದ್-
ಭಾವಕಿಯೊರ್ವಳ್ ಬಂದಳ್
ಕಾವನ ಸಭೆಗೆಸೆವ ರತ್ನಮುಕುರದ ತೆಱದಿಂ ೭

ಬಿಸರುಹದಳದೊಳ್ ಚಂದನ-
ರಸಮಂ ನೆಱೆ ತೀವಿಕೊಂಡು ಮೆಲ್ಲಡಿಯಿಡುತುಂ
ಪೊಸಜವ್ವನೆ ನಡೆತಂದಳ್
ಕುಸುಮಾಸ್ತ್ರನ ಗಟ್ಟಿವಳ್ತಿಯೊರ್ವಳ್ ಬೆ(೨)ನದಿಂ ೮

ಇಂಬಾಗಿರೆ ವರಹಿಮಕರ-
ಬಿಂಬದ ಬೆಂಬಳಿಯೊಳಿಳಿವ ತಣ್ಗದಿರ್ಗಳೆನಲ್
ಪೊಂಬಾಳೆಯ ಚೆ(೩)ಮರಮುದಾ-
ಲಂಬಿಸೆ ಪಿಡಿದೊರ್ವಚಂದ್ರಮುಖಿ ನಡೆತಂದಳ್ ೯

ಪ್ರಬಳನವರತ್ನರೋಚಿಃ-
ಶಬಳಿತದರ್ಪಣಮನಾಂತು ಮುಂದೆಯ್ತಂದಳ್
ನಿಬಿಡತರಸುಕರಪುಷ್ಪ-
ಸ್ತಬಕದ ಜೆಳ್ಗೊಡೆಯ ನೆಳಲೊಳಂಗನೆಯೊರ್ವಳ್ ೧೦

ಅಂತವರ ನಿರತಿಶಯಸ್ವಭಾವಸೌಂದರ್ಯಸೌಕುಮಾರ್ಯಂಗಳಂ ಕಂಡು ಬೃಹಸ್ಪತಿ ಮನದೊಳಳಿಪುತ್ತುಂ ಬುದ್ಧಿಯೊಳ್ ಬೆದಱುತ್ತುಂ ಚಿತ್ತದೊಳ್ ಕೌತುಕಂ

---

೧. ನೋ । ಲಗಕಂ ( ಅ ). ೨. ಭರದಿಂ ( ಕಾ. ಕ. ಅ. ಬ. ಡ ಓ. ). ೩. ಚಾಮರಮಾ ( ಅ ).

ಬಡುತ್ತುಂ ನಡೆತಂದರಮನೆಯ ಮುಂದೆ ಪುಷ್ಪಕಮನಿಳಿದೊಪ್ಪುವ ದರ್ಪಭೂಷಣ-ಮೆನಿಸಿದ ದರ್ಪಕಾಸ್ಥಾನಮಂ ಪುಗುತೆರ್ಪಲ್ಲಿ,

ಸ್ರಗ್ಧರೆ.

ಮುಂತಿರ್ದಂ ಪುಷ್ಪಮಾಲಾನಿಚಯರಚಿತಸೌರಭ್ಯಲೋಲುಪ್ತಭೃಂಗೀ-
ಸಂತಾನಾಬದ್ಧಧಾರಾನಿಳಯವಳಯಮಧ್ಯಪ್ರದೇಶಪ್ರರತ್ನಾ-
ನಂತಪ್ರದ್ಯೋತವೀಥೀಪ್ರಯುತನಿಯತಸಿಂಹಾಸನಾರೂಢತಾಸಿ-
ಶ್ಚಿಂತಂ ಶೃಂಗಾರಕಾಂತಂ ಜನವಿನುತರತೀನಾಥನಾನಂದಯೂಥಂ ೧೧

ಅಂತಿರ್ದ ಮದನಭೂಭುಜನಂ ತ್ರಿದಶಾಚಾರ್ಯಂ ದೂರದಿಂ ನಿರೀಕ್ಷಿಸುತ್ತುಂ ಬರ್ಪಾಗಳ್ ಮುಂದೆ ಮುಗಿಮುಗಿಪ ಕದಂಬಕುಸುಮದ ಪೊಸಗಂಪಿಂ ಪೊರೆದು ಸಾರ್ವರ್ತುಕಮೆನಿಸಿ ಕೊರ್ಬಿ ಬೆಳೆದ ಕೇಳೀವನದ ನಡುವೆ ನಿಂದ ನೀಲದ ನೆಲೆ-ಗಟ್ಟಿಂಗೆ ನೆಲೆಯಾದ ಮುತ್ತಿನ ಬೆಳಗಿನ ಬೆಳ್ದಿಂಗಳ ಭಿತ್ತಿಗಳ ಮೇಲೆ ತರತರದಿಂ ಪರಪಿದ ಕೈರವದ ನುಣ್ಣೆಸಳ ಸಣ್ಣ ಜಂತೆಗಳನಾಂತ ಕೇತಕಿಯ ನೀಳ್ದ ದಳದ ಪೆಟ್ಟಿಗೆಗಳೊಟ್ಟಜೆಗಳಿಂ, ಮತ್ತಂ ಮುತ್ತಿ ಮತ್ತವಾರಣಮಂ ನವೀನಗ್ರಂಥದಿಂ ತವೆ ಪೊರೆದ ದವನದ ದಾರವಂದದೊಳಜ್ಯೋತಿ ಬೆಚ್ಚಂತಿರ್ದ ಲಾಮಂಚದ ಮುಚ್ಚುಳಮಂ ನೆಮ್ಮಿ ನಿಂದಿರ್ದ ಪಡಿಯಜಗೋಗಿಲೆಗಳಿಂ, ಮತ್ತಂ ರವಿಕರಕೆಡೆ-ಗುಡದಿಡಿದಿಡಿದು ಸುತ್ತಿ ಮುತ್ತಿ ಕವಲಿಜಿದು ಕವಿದ ಲತಾಂತಜಾಳದ ತಳ್ತ ನೆಳಲಿಂ ಕಳ್ತಲಿಸುವ ಓಲಗಸಾಲೆಯೊಳ್ ಬಂದುಗೆಯ ಬಣ್ಣದ ತಿಣ್ಣವೆಳಗುಂ ಕಣ್ಣ ಬೆಳಗುಂ ತಮ್ಮೊಳಿರ್ಮಡಿಸೆ ಮೆಯ್ದೋಱೆ ಕೆಯ್ದಾವಿಗೆವಿಡಿದಿರ್ಪ ಖೇಚರಾಂಗನೆಯರಿಂ, ಕಾಮನ ರತಿಯ ನನೆಯ ಸಿಂಹಾಸನದಿರ್ಕೆಲದೊಳ್ ನಿಂದು ಮರುಗದ ಪೊಂ-ಬಾಳೆಯ ಸೀಗುರಿಯ ಚಾಮರಂಗಳಂ ಪಿಡಿದಿರ್ಪ ಹಸ್ತಿನಿಯರಿಂ, ನೆರೆದು ನಿಂದ ಕೇಳಿ-ಳಿಗೆ ಕಾಮಾದ್ವೈತಶಾಸ್ತ್ರಸೂತ್ರಮಂ ಪಾಠವೋದಿಪ ಪರಿಜ್ಞಾನದಿಂ ಮೆಱೆವ ಚಿತ್ರಿನಿ-ಯರಿಂ, ಮೇಲೆ ಬೀಳ್ವ ಕಾಮದೇವನ ಕಟಾಕ್ಷಕಂಜಿ ರತಿದೇವಿಗಡಿಗಡಿಗೆ ಕೆಯ್-ಮುಗಿದು ಕೆಲಸಾರ್ದಿರ್ಪ ಶಂಖಿನಿಯರಿಂ, ಮತ್ತಂ ಶತಸತ್ರದೋಳಮೃತರಸಮನೋವಿ

೧. ತರ್ಪಾಗಳ್ ( ಅ. ದಾ. ). ೨. ಕಾಂತಾ. ( ಕಾ. ಬೆ. ಯ ). ೩-೩. ದ್ವಾರಬಂಧದೊಳ್ ಜ್ಯೋತಿ ಬೆಚ್ಚಂತಿರ್ದ ( ಅ. ). ೪. ವಿಡಿದಂತಿರ್ಪ ( ಕ. ). ೫. ಕಮಳಪತ್ರ ( ದಾ. ಕೊ. ಅ. ).

ತೀವಿ ಮುದದಿಂ ಪಿಡಿದಿರ್ಪ ಪದ್ಮಿನೀನಾಯಕಿಯರಿಂ, ಹಂಸೆವಿಂಡಿಂಗೆ ನಡೆಗಲಿಪ ಮದಕರಿಯಾನೆಯರಿಂ, ನವಿಲನಾಡಿಪ ನರ್ತಕಿಯರಿಂ, ಮತ್ತಂ ಮಧುಕರಮಂಡಳಿಗೆ ಮಾರಭೂಪನ ಬಿರುದಿನೇಳ್ಗಳ ಗೀತಗೋಷ್ಠಿಯನೀವ ನೂತನಗಾಯಕಿರಿಂ, ಶತಪತ್ರವೀಜನಸಮಾಜದಿಂ ರಥಾಂಗಮಿಥುನದ ಸುರತಶ್ರಾಂತಿಯನಾದರದಿಂದಾರಿಸುವ ಚಕ್ರಕುಚೆಯರಿಂ, ಹರಿಣಿಗಳ ಮುಳಿಸಂ ತಿಳಿಪಿ ಹರಿಣಂಗಳನೊಡಗೂಡುವ ಹರಿಣಾಕ್ಷಿಯರಿಂ, ಅಶೋಕೆಯನೊದೆದಂಕುರಮಂ ಪುಟ್ಟಿಪ ಪದ್ಮಮುಖಿಯರಿಂ, ಕುರುವಕಮಂ ಪರಿರಂಭಣದಿಂ ಪೂರೆಯೇಱಿಸುವ ತರುಣಿಯರಿಂ, ಕುಸುಮರಸಗಂಡೂಷದಿಂ ವಕುಳಕುಳಮಂ ಕೋರಕಿತಂ ಮಾಳ್ಪ ಸಾರಸಮುಖಿಯರಿಂ, ಹೂವಿನ ಬಿಲ್ಲನೊಚ್ಚತಂಗೊಂಡರ್ಚಿಸುತ್ತಿರ್ಪ ನಿಡುವುರ್ವಿನ ನೀರೆಯರಿಂ, ನನೆಯಂಬಂ ಕೆಯ್ಗೆಯ್ವ ಸವಿನೋಟದ ಸಾಧಾರಣೆಯರಿಂ, ಮತ್ತಂ ಮಕರಕೇತನನ ಕೇತಕಿಯಲಗಂ ಪರಾಗದ ಸಾರಣೆಯೊಳ್ ಪರಿಮಳದ ಹೊಗರೆತ್ತುವಳಿಕುಂತಳೆಯರಿಂ, ನನೆಯ ಕಠಾರಿಯಂ ಸಿಂಗರಿಪ ಸಂಗಡದ ಮುಗ್ಧೆಯರಿಂ, ತಳಿರ ತೋಮರಮಂ ತಿರ್ದುವ ಕಳಕಂಠನಿನಾದೆಯರಿಂ, ಕೈರವದ ಸಬಳಮನೊಪ್ಪವಿಡಿವ ಕುಮುದಾಕ್ಷಿಯರಿಂ, ಚಕೋರಿಯ ಕುಳಕ್ಕೆ ಬೆಳ್ದಿಂಗಳನೂಡುವ ರೋಹಿಣೀವಿಳಾಸಿನಿಯರಿಂ, ಪೂಗೊಳನಂ ಸಾಗಿಪ ಭೋಗವತಿಯರಿಂ, ಬನಮಂ ಬಳೆಯಿಸುವ ವನಲಕ್ಷ್ಮಿಯರಿಂ, ಮತ್ತಂ ವಿರಿಂಚಿಯ ಹಾಹೆ ಕಾಲೊಳೆಳಲೆ ನಿಂದಿರ್ಪ ನಾಯಕಿಯರಿಂ, ಇಂದ್ರನ ಮೆಯ್ಗಣ್ಣ ಬಾವುಲಿಯ ದರ್ಪಾಯಿತಿಯರಿಂ, ಕುಬೇರನ ರೂಪು ನೇವುರದೊಳೆಳಲ್ವ ಚಾಪಳೆಯರಿಂ, ಜಿತೇಂದ್ರಿಯರಂ ಗೆಲ್ವ ವಿಜಯಧ್ವಜದ ವೀರೆಯರಿಂ, ತಳಿರ ಗದ್ದುಗೆಯೊಳ್ ಕೆಳಗೆ ಕುಳ್ಳಿರ್ಪ ವಸಂತರಾಜನಿಂ, ಬೆಳ್ದಿಂಗಳ ಹಸೆಯೊಳ್ ಬಳಿಸಿ ಕುಳ್ಳಿರ್ಪ ಕಳಾಮಾಳೆಯರಿಂ, ಅರಸಾಳ್ವೆಸನಂ ಸಾರ್ದಿರ್ಪ ಮಳಯಾನಿಳನಿಂ, ಕೆಲದೊಳ್ ನಿಲಿಸಿಕ್ಷುಚಾಪದಿಂ, ಮಲಂಗಿಸಿದ ಪುಷ್ಪಬಾಣಂಗಳಿಂ, ಸಮಸ್ತವಸ್ತುವಿಸ್ತಾರವಿಳಸದ್ವಿಲಾಸವಿಭ್ರಮಮಂ ಪಡೆದು ಪರಾಗಮಂ ಪಸರಿಸುವ ಸರಸೀರುಹದೆಸಳ ತುಱುಂಗಲ

೧. ಮಧುಕರ (ಕ); ಮಂದ (ಗೊ). ೨. ನೃಮುಖವೆಯರಿಂ (ಕಾ. ದಾ); ಮದಮುಖಿಯರಿಂ (ಬ). ೩-೩ ಕೋಗಿಲೆಗಳ ಕೊರಲಂ ಬಕುಳಮುಂ (ಅ). ೪. ಸಾರಸೆ (ಅ). ೫. ಕುಡು (ಕಾ. ಬ.). ೬. ರಸಾಧಾರೆಯರಿಂ (ಅ). ೭. ಯೋಗಾಂಗನೆಯರಿಂ (ಅ). ೮. ದರ್ಪಾಯಿಯರಿಂ (ಕಾ); ದರ್ಪೋನ್ನತಿಯರಿಂ (ಯು. ಬಿ.). ೯. ಅರಸಾಳ್ವನಂ (ಕಾ). ೧೦. ಪೊರ್ದಿರ್ಪ (ಅ. ಯು. ಪಾ.); ಪಾರ್ದಿರ್ಪ (ಬ). ೧೧. ವಿಳಸದ್ವಿಭಾಸ (ಕಾ.).

ಇಸುವೆನ್ನಿಂ ಮನಮಂ ಪ್ರೇ-
ರಿಸುವೀತನೆನಖಿಳಲೋಕಗುರುವಂ ಭರದಿಂ-
ದಸಮಾಕ್ಷನನಿರದಾರ್ದಿಸು-
ವಿಸಮಾಸ್ತ್ರರ್ ಜಲಧಿವಸನೆ ವಸುಧೆಯೊಳುಂಟೇ ೨೯

ತಿಳಿಯದೆ ಶೂಲಿಯ ತಪಮಂ
ಚಲಿಯಿಸು ನೀನೆಂಬುದಹಿತಮೆನಗೆ ಹೆಜರ ಮ-
ಕ್ಕಳನಿಕ್ಕಿ ನೆಲೆಯನಜುವುದ-
ನಿಳೆಯೊಳಗೆನ್ನಲ್ಲಿ ಮಾಳ್ಪರೇ ಕಮಲಾಕ್ಷಾ ೩೦

ಅಂತುಮಲ್ಲದೆ,

ಹರಿಯಲ್ಲಿಗೆ ತಮಮಂ ಕೇ-
ಸರಿಯಲ್ಲಿಗೆ ಕರಿಯನಭ್ರಶಿಖಿಯಲ್ಲಿಗೆ ಕೇ-
ಳುರಗನನಟ್ಟುವ ತೆಱದಿಂ
ಹರನಲ್ಲಿಗೆ ತಂದೆ ಕಳಿಪುವರೆ ನೀವೆನ್ನಂ ೩೧

ಎಂದೊಡೆ ಮುಕುಂದನೆಂದಂ
ಕಂದರ್ಪ ಬಹೂಕ್ತಿಯಿಂದಮೇನಪ್ಪುದು ನಿ-
ನ್ನಿಂದಂ ಸಕಳಜಗಂ ಸುಖ-
ದಿಂದಿರ್ಪೊಡೆ ಹರಣದೊಂದು ಹುರುಳಜಿಸುವರೇ ೩೨

ಏನೆ ಕಂದರ್ಪಂ ಸಕಳಭು-
ವನಮೆನ್ನಿಂ ಪರಮಸುಖದೊಳಿರ್ಪುದು ಗಡಮಾ-
ನೆನಿತಜಿವನೆನ್ನ ಹರಣಂ
ಘನವೇ ತೆಗೆಯಿಂದೆ ನೂಱು ತೀವಿತ್ತೆಂದಂ ೩೩

೧-೧. ಇಸುವೆಂ ನಿಮ್ಮ ಮನಂ ಪ್ರೇ | ರಿಪಿದೀಶನ (ಅ.) ೨-೨. ವಸಮಾಸ್ತ್ರತೆ ಜಲಧಿಶಯನ (ಶಾ. ಬಿ. ಯ.); ವ ಸಮರ್ಧರ್ ಜಲಧಿವಸನ (ಬ.) ವಸಮಾಕ್ಷರ್ ಜಲಧಿವಸನ (ಕ.) ೩. ರುದ್ರನ (ಕ. ಪ.) ೪. ತನ್ನ (ಅ.) ೫. ಮುರಮಥನಾ (ಬ. ಅ.); ೬. ನಾ (ದಾ.) ೭. ತುಂಬಿತ್ತೆಂದಂ (ಅ. ಬ.)

ಎಂದು ಮೀಱಿ ನುಡಿಯುತ್ತೊಡಂಬಟ್ಟು ಬೀಳ್ಕೊಂಡು ನಡೆತಂದು ಪೊಱಗಿಕ್ಕಿದ ಸಿಂಹವಿಷ್ಟರನುನವಷ್ಟಂಭಿಸುತುನ್ನತಚಿತ್ತಂ ಪುಷ್ಪಧನ್ವಂ ತನ್ನೊಳಿಂತೆಂದಂ *

ಚಂಪಕ

ಪೊಡವಿಯೊಳುಳ್ಳ ಮುಖ್ಯಮುನಿಗಳ್ ಮನುಗಳ್ ಜಿತಕಾಮರುಂ ಸಮಂ-
ತೆಡೆಗುಡದೆನ್ನ ಕಾರ್ಮುಕದ ಟಂಕೃತಿಮಾತ್ರದೊಳತ್ತಲಿತ್ತಲುಂ
ಸಿಡಿದು ಸುರುಳ್ದುರುಳ್ದು ರತಿಯುನ್ನತಿಯಿಂ [೧]ರತರಪ್ಪರೆಂದೊಡೀ
ಸಡಿಫಡ ಶೂಲಿಗೀಲಿಯ ತಪಂಗಿಪಮೊಡ್ಡಿಪುದೇ ರತೀಶನೊಳ್ ೩೪

ಎಂದು ದರ್ಪಕಂ ತನ್ನೊಳ್ ತಾನೆ ಗಜಱಿ ಗರ್ಜಿಸಿ ಮಧುದೂತಿಯೆನಿಪ್ಪದಿರ್ಗಂತಿಯಂ ಕರೆದು ವಸಂತಾದಿಚತುರಂಗಬಲಮಂ ಬರಲ್ವೇಳೆಂದು ಕಳಿಪುವ ಸಮಯಮೆ ವಸಂತಸಮಯಮಾಗೆ,

ಶಿಶಿರದ ತವುದಲೆಯುಂ ನವ-
ವಸಂತಸಮಯಪ್ರವೇಶಮುಂ ತನ್ಮೊಳ್ ಸಂ-
ದಿಸೆ ಬಣ್ಣಿಸಲರಿದಾದೊಡ-
ಮೆಸೆವಾ ಋತುಸಂಧಿಯಂ ವಿಭಾಗಿಸಿ ಪೇಳ್ವೆಂ ೩೫

ಅದೆಂತೆಂದೊಡೆ,

ಚಂಪಕ

ಪೊಳೆವದಿರ್ಗಂತಿಯುಣ್ಮೆ ಮಧುಮಾಸನೊಡರ್ಚಿದುದನ್ಯಪುಷ್ಪಸಂ-
ಕಳರುತಿ ಹತ್ತೆಸಾರ್ದುದು ನವಾಮ್ರಕುಳಂಗಳೊಳಂಕುರಸ್ಥಳಂ
ತಳೆದುವು ತಂಬೆಲರ್ ಜನಿಯಿಸಿರ್ದುದು ಬಾಲ್ಯದೊಳತ್ತ ಮಾರನ-
ಗ್ಗಳಿಸುವ ಮಾರ್ಗಣಂಗಳನೆ ಚಿಂತಿಸುತಿರ್ದನಿದಾವ ಕಾಲನೋ ೩೬

ಆ ಸಮಯದೊಳ್,

---

೧. ನತರಪ್ಪ ( ಬ. ಕೊ. ಅ. ದಾ. ); ನೆರೆದಪ್ಪ ( ಕಾ. ಬೆ. ಯು. ) ೨. ಡಾರ್ ( ದಾ. )
* ಈ ವಚನವು ಕ. ಪ್ರತಿಯಲ್ಲಿಲ್ಲ.

ತಾನುಂ ವಾಚಸ್ಪತಿಯುಂ
ನಾನಾವಿಧಕಾರ್ಯಗತಿಗಳಂ ನುಡಿಯುತ್ತುಂ
ಸಾನಂದಂ ಹರಿಯುಜರಾ-
ಸ್ಥಾನನಿಕೇತನದ ಮುಂದೆ ಬಂದಿಳಿತಂದರ್ ೧೯

ಉತ್ಪಲ

ಬಂದೊಳಪೊಕ್ಕು ಚಕ್ರಿಗೆ ವಿರಿಂಚಿಗೆ ವಜ್ರಧರಂಗೆ ವಂದನಾ-
ನಂದಶರೀರರಾಗಿ ಕುಸುಮಾಯುಧನುಂ ರತಿಯುಂ ಪ್ರಸಿದ್ಧ ಸಂ-
ಕ್ರಂದನಮಂತ್ರಿಯುಂ ಮುದದೆ ಕುಳ್ಳಿರೆ ಕಾಮನನೀಕ್ಷಿಸುತ್ತೆ ಗೋ-
ವಿಂದನನಿಂದಿತಂ ನುಡಿದನಾತ್ಮಗತಾರ್ಥವಿಚಾರಸಾರಮಂ ೨೦

ಕೇಳಲೆ ದರ್ಪಕ ತಾರಕ-
ನೊಳಿಗದಿಂದುರಗ ಮರ್ತ್ಯ ನಿರ್ಜರಲೋಕಂ
ಗೋಳುಂಡೆಗೊಳುತುಮಿದೆ ವೀ-
ರಾಳಾಪಂಗೊಳ್ಳದಸುರನತ್ಯಧಿಕಬಲಂ ೨೧

ಆರಿಂದಂ ಸಾಯಂ ತ್ರಿಪು-
ರಾರಿಗೆ ಪುಟ್ಟಿದ ಕುಮಾರನಿಂದಲ್ಲದನಂ
ತೀರಂ ತಾರಕನಂತದು-
ಕಾರಣದಿಂ ಮಾಳ್ಪ ಕಜ್ಜಮುಂಟೀ ಪದದೊಳ್ ೨೨

ಹರನತ್ಯಧಿಕತಪೋವಿ-
ಸ್ತರಮುನನಾಗಿರ್ದಪಂ ಮದನ ತತ್ತಪಮಂ
ಕೆರಗಿಸಿ ವರಗಿರಿಸುತೆಯೊಳ್
ನೆರೆಪಲ್ಲಿಗೆ ನೀನೆ ಬಲ್ಲೆ ನೀನೆ ಸಮರ್ಥಂ ೨೩

---

. ನಿಕೇತನನುಮುಖಕ್ಕೆ ( ದಾ. ಕೆ. ) ೨. ಪೀಠಃ ( ಕಾ. ಬೆ. ಯ. ಸ. )

ತಪಮಂ ಕೆಡಿಪುದು ಮಾಡುವ
ಜಪದಕ್ಷರದೊಳಗೆ ನಿನ್ನ ನನೆಯಂಬಂ ಕೀ-
ಲಿಪುದಾ ಗಿರಿಜಾವಧುಸಾ-
ಖ್ಯಪದಾವರಣಾತ್ಮನೆನಿಸುವುದು ಶಶಿಧರನಂ ೨೪

ಅಂತುಮಲ್ಲದೆ

ಪುರುಷರ್ ವಧುಗಳ್ಗೆ ವಧೂ-
ತ್ವಮನಾ ಪುರುಷರ್ಗೆ ಸೋಲ್ವುದುಚಿತಮದಿಲ್ಲೀ
ಧರೆಯೊಳ್ ಮದನ ವರಸ್ತ್ರೀ-
ಪುರುಷರ್ ನೆರೆ ನಿನಗೆ ಸೋಲ್ವುದೆನಗಿದು ಚಿತ್ರಂ[1] ೨೫

ಇಂತಪ್ಪ ನಿನಗೆ ಮನ್ಮಥ
ಮುಂತಿದಿರಪ್ಪವರದಾರೊ ಶಶಿಚೂಡನ ತ-
ಚ್ಛಾಂತಿಯನುಡುಗಿಸಿ ಗಿರಿಜಾ-
ಕಾಂತೆಯ ಸಮಸುಖಸಮುದ್ರಮಧ್ಯದೊಳಿರಿಸಯ್ ೨೬

ಎನೆ ಮದನಂ ನುಡಿದಂ ನಿಜ-
ಜನಕನೊಳಕ್ಕಕ್ಕಿದಪ್ಪುದಪ್ಪುದು ಸರ್ವೇ-
ಶನನನವಧಿಗುಣನಂ ಶ-
ರ್ವನನೆಸುವುದನೆನಗೆ ಬೆಸಸುವುದು ನಿಮಗರಿದೇ ೨೭

ಶ್ರುತಿಗಳ್ ಕಾಣದ ಮನುಗಳ
ಮತಿಯೆಯ್ದದ ಮುನಿಗಳಱಿವು ನಿಲ್ಕದ ಶಾಸ್ತ್ರ-
ಪ್ರತತಿ ನೆಱೆಯಱಿಯದಪ್ರತಿ-
ಹತರೂಪನನೆಂತು ಕಾಣ್ಬೆನೆಂತಾನೆಸುವೆಂ ೨೮

---

೧. ಸೋಲ್ವರೆನಗಿದು ( ಬಿ. ಬ. )

ಸಿಂಹಾಸನದೊಳ್ ಸುರತರುವಂ ಮಲಂಗಿ ವಸಂತನ ಮೇಲೆ ಕಾಲಂ ನೀಡಿ ಶೀತಕರನಿಂ ಶ್ರೀಹಸ್ತಮನೊತ್ತಿಸಿಕೊಳುತ್ತುಂ ನಳಿನಗುಣದುಕೂಲದ ಮಲ್ಲಗಂಟುಂ ಮೊಲ್ಲೆಯ ಮುಗುಳ ಕಂಕಣಮುಂ ಮಲ್ಲಿಗೆಯ ನೆನೆಯ ಹಾರಮುಂ ಬಂದುಗೆಯ ಬಾಹುಪೂರಮುಂ [೧]ದಾಡಿಮೀಬೀಜದ ಕರ್ಣಾವತಂಸಮುಂ ಚಂದನತಿಲಕಮುಂ ಶ್ಯಾಮವರ್ಣಮುಂ ಕೋಮಲಾಂಗಮುಂ ಕಣ್ಣ ಬೆಳಗುಂ ಮುಖದ ಕಾಂತಿಯುಂ ಮಿಗೆ ಸೊಗಸಂ ಮೂವಡಿಸೆ ಮೂಱುಂ ಜಗಮಂ ಮೀಱಿ ಗೆಲಲೆಂದು ಸಂಗಡಿಸಿ ಶೃಂಗಾರರಸಮುಂಗಂಬಡೆದಂತೆ ಸುಕುಮಾರತೆ ಸಾಕಾರಂಗೊಂಡಂತೆ ಸೊಬಗು ಸಂದಣಿಸಿದಂತೆ ನಳನಳಿಕೆ ಬಳೆದಂತೆ ಕಣ್ಗಳ ಭಾಗ್ಯಂ ಕವಲ್ತಂತೆ ಮನೋರಥಂ ಮದವೇಱಿದಂತೆ ಪುಟವಿಟ್ಟ ಪುಣ್ಯಂ ಪುರುಷಾಕಾರಮಾದಂತಿರ್ದ ಕಂದರ್ಪರಾಜನ ಕಮನೀಯರೂಪಂ ಬೃಹಸ್ಪತಿಯ ಕಣ್ಗಳೊಳಪೊಕ್ಕು ಮನಮನಲ್ಲಾಡಿಸೆ ಬುದ್ಧಿ ಬೆದಱಿಯಹಂಕಾರವಳಿದು ಚಿತ್ತಂ ಸೂಸಿ ಮದನವಿಕಾರದ ಜಮ್ಮು ಜಕ್ಕುಲಿಸಿ ಹಮ್ಮದಂಬೋಗಿ ಜೀವಂ ಸುಖದ ಜೀವಕಳೆಯ [೨]ಕೆಳಾಸದ ಕುಣಿಕೆ ಕಳಲ್ಚಿ ತನ್ನನಱಿಯದಿದಿರನಱಿಯದೆ ಬಂದುದಂ ಮಱೆದು ಕಜ್ಜಮಂ ತೊಱೆದಿನಿತುಂ ಬೇಗಂ ಸುಖದ ಸೊಂಕಿಂದುರ್ಕುವ ಕಾಮರಸದ ತೆರೆಯೊಳ್ ತೇಂಕಾಡುತಿರ್ದೆಂತಾನುಮೆಳ್ಚತ್ತು ಸಂತೈಸಿಕೊಂಡು;

ಮಱೆಯುತ್ತೆಳ್ಚಱುತುಂ ಕುಱು-
ಕುಱುಮೆಟ್ಟುತ್ತಡಿಯನೆತ್ತಿ ತಾನೆಂದಿದಿರೆಂ-
ದಱಿಯದೆ ಕಾಮವಿಕಾರಂ
ನೆಱೆ ಪತ್ತಿ ಸುರೇಂದ್ರಮಂತ್ರಿ ದಡದಡಿಸುತ್ತುಂ ೧೨

ಮೆಲ್ಲನೆ ಮೆತ್ತನೆ ನಡೆತರು-
ತಲ್ಲಲ್ಲಿ ಕುನುಂಗಿ ಕುರ್ಗಿ ಪಂಚಶರಂಗು-
ತ್ಫುಲ್ಲನವಕುಸುಮ[೩]ಸಂಕುಳ-
ವಲ್ಲರಿಯಂ ಕಾಣ್ಕೆಯಿತ್ತನಮರಾಚಾರ್ಯಂ ೧೩

ಮತ್ತಮನಂತರಂ,

---

೧. ದಾಡಿಮದ ( ಅ ); ದಾಡಿಮ ( ದಾ. ). ೨. ವಿಳಾಸದ ( ಶಾ. ). ೩ ಪರಿಮಳ ( ದಾ ).

ಕಂಪಂ ಕೆಯ್ಕೊಳುತುಂ ಮೆಯ್-
ಜೊಂಪಿಸಿ ಬೀಳ್ವಳಿನಿಕಾಯಸಹಿತಂ ಜೀವಂ
ಪೆಂಪಿನ ಸೊಂಪಿನಲಂಪಿನ
ಸಂಪಗೆಯಲರ್ದೊಂಗಲಂ ರತೀಶಂಗಿತ್ತಂ ೧೪

ಅಂತು ಕಾಣ್ಕೆಯಿತ್ತು ಕುಳ್ಳಿರ್ದ ವಾಚಸ್ಪತಿಯ ಮುಖಮುಂ ಮಕರಧ್ವಜಂ ನೋಡಿ,

ಸುರಪತಿ ಸರಸಿಜಭವ ಸಂ-
ಕರುಹಾಕ್ಷರ್ ಸುಖದೊಳಿರ್ದಪರೆ ತಾರಕಸಂ-
ಗರಮೇನಾದುದು ಸುರಕುಲ-
ಗುರುವೇ ನೀಂ ಬಂದ ಕಜ್ಜಮೇನೀ ಪದದೊಳ್ ೧೫

ಎನೆ ಗುರುವೆಂದಂ ತಾರಕ-
ನನುವರಮಂ ಮಾಣ್ದು ಮೇರುಗಿರಿತಟದೊಳ್ ಶ-
ಕ್ರನುಮಜನುಂ ಸರಸಿಜನಾ-
ಭನುಮೇಕಾಂತದೊಳಗಿರ್ದು ಕಳುಪಿದರೆನ್ನಂ ೧೬

ಅತುಳತರಗುಪ್ತಕಾರ್ಯ-
ಸ್ಥಿತಿಯಾಳೋಚನೆಗಳುಂಟು ನೀಂ ಚೆಚ್ಚರಮ-
ಪ್ರತಿಮಂ ಕಾಮುನನೊಡಗೊಂ-
ಡು ತರ್ಪುದೆನೆ ಬಂದೆನಿದೆ ಪದಂ ನಡೆ ಮದನಾ ೧೭

ಎನುತುಂ ಗುರು ನುಡಿಯೆ ಸುಖಾ-
ಸನದಿಂದಿದಿರೆಳ್ದು ಶಶಿವಸಂತಾದಿಗಳಂ
ಬನದೊಳ್ ಪಿಂತಿರಿಸುತೆ ಭೋಂ-
ಕನೆ ರತಿವೆರಸೇಱಿ ದರ್ಪಕಂ ಪುಷ್ಪಕಮಂ ೧೮

---

೧. ಕಾರ್ಯವೇನೀ ಪಥದೊಳ್ (ದಾ) ೨. ಗುರು ನುಡಿದಂ (ದಾ ಕೊ.). ೩-೩. ಗೊಂ | ಡತಿವೇಗದೆ ಬರ್ಪುದೆನಲ್ ಬಂದೆಂ (ಕಾ. ಬೆ. ಯು. ಗೊ.); ಗೊ | ಳ್ಳುತೆ ಬರ್ಪುದೆನಲ್ಕೆ ಬಂದೆನೀ ಪದಂ (ಅ).

ನನೆಯಂ ಪೆತ್ತುದು ಮಾಧವಿ
ನೊನೆಸಿದುವಂಕುರಿಪ ತಾಣಪಿವಮ್ಮಾವುಗಳೊಳ್
ಜಿಸುಗಿದುವು ಕೊರಲೊಳಗೆ ಪಿಕ-
ನನಂತರಂ ಬಿಲ್ಗೆ ಮದನನನುವಾಸಿಸಿದಂ ೩೭

ಮತ್ತೇಭ.

ಮುಳೊತ್ತಿತ್ತದಿರ್ಗಂತಿಯಂಕುರಿಸಿತಾನ್ಸ್ರಂ ಬಂದು ಮಂದಾನಿಳಂ
ಪುಗುತೊಂದೊಂದಡಿಯಿಟ್ಟನನ್ಯಭೃತನಂತೋರೊರ್ಮೆ ಕೂಗಿತ್ತು ಮೆ-
ಲ್ಲಗೆ ಬಿಲ್ಲಂ ಗೊಲೆಗೆತ್ತಿ ಹೂಡಿದನಮೋಘಾಸ್ತ್ರಗಳಂ ದರ್ಪಕಂ
ದಿಗಿಲೆಂದಿತ್ತು ವಿಯೋಗಿವೃಂದಹೃದಯಂ ವಾಸಂತಿಕಾಮಾಸದೊಳ್ ೩೮

ಚಂಪಕ.

ಕಳಿಮದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ
ತಳವೆಳಗಾಯ್ತು ಪಾಂಥಜನಮೊಲ್ದವರೊಳ್ ನವಭೋಗದುಜ್ಜುಗಂ
ನೊಳೆತುವು ಕಾಮನೇಸು ಗುಜುಗಂಡುದು ತಂಡದೆ ನಿಂದ ನಂದನಂ
ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಜೆಳ್ಪಿನಂದಮಂ ೩೯

ಆ ಸಮಯದೊಳ್,

ಚಂಪಕ

ಜನವನುರಾಗಮೇಜು ಲಲನಾಜನಮಂ ತೆಗೆದಪ್ಪಿ ಮಿಾಜು ಸ-
ನ್ಮುನಿನಿಕರಂ ಜಪಂ ತಪಮನೋವದೆ ಬಿಟ್ಟತಿಪೈಸ್ಯದಿಂ ವಧೂ-
ಸ್ತನತಟವಕ್ಷರಾಗೆ ಮೃಗವೀಥಿ ಮೃಗೀಕುಲದತ್ತ ಸಾರ್ದು ಜಿ-
ನ್ನನೆ ಮಿಗೆ ಪೋಗೆ ಪರ್ಚಿತಳೆಯಲ್ಲಿ ವಸಂತವಿಶಾಲಸಂಪದಂ ೪೦

ಆಗಳ್,

ಮತ್ತೇಭ.

ಮುದದಿಂದಂ ಮಧುದೂತಿಯಂ ನೊಗಮಲರ್ಚುತ್ತುಂ ವಿರಾಜಿಪ್ಪ ಚೂ-
ತದ ಮೆಯ್ಯೊಳ್ ಪುಳಕಂಗಳಂ ನೆಗೆಪುತುಂ ಸಾರ್ದನ್ಯಪುಷ್ಪಕ್ಕೆ ಕಂ-
ಠದ ಕಾಕಂ ನೆಲೆವೆರ್ಚಿಸುತ್ತೆ ವನಮಂ ವೈವರ್ಣಮಂ ಮಾಡುತು-
ರ್ವಿದಲಂಪಿಂದೆ ವಸಂತರಾಜನೊಸೆದೇಳ್ತಂದಂ ಜಗದ್ವಲ್ಲಭಂ ೪೧

೧ ನನವರತಂ ( ಕಾ. ಬಿ ಬ. ) ೨. ಸಾರಂ ( ಕ ). ೩ ಜನದೊಳ್ ( ಬ ).

ಚಂಪಕ

ನಡುಗಿ ವಿಯೋಗಿಗಳ್ ಸೆಡೆದು ಜೀವಮನೊಪ್ಪಿಸೆ ದರ್ಪಕಂಗೆ ಮುಂ-
ತಡಿಯಿಡಲಾಱದೊತ್ತರಿಸೆ ಪಾಂಥಜನಂ ಕಳೆಗುಂದಿ ನಿಂದು ಪಾ-
ವಡರ್ದವೊಲಾಗುತುಂ ಬೆದಱೆ ನಲ್ಲರ ಮೆಯ್ಸಿರಿ ನವ್ಯಭೋಗದೊಳ್
ತೊಡರ್ದಿರೆ ಬಂದನಿಂದುಕಳೆಯಂ ದಳವೇಱಿಸುತುಂ ವಸಂತಕಂ ೪೨

ಇಂತು ವಸುಮತಿಯ ಪೆಂಪಿನ ಸಂಪದಮಂ ಸೊಂಪೇಱಿಸುತುಂ ನವ್ಯವಸಂ-ಗಳ್ಗೆ ನಳನಳಿಕೆಯನೀಯುತುಂ ಚೂತದ ಮೆಯ್ಯೊಂಕುರಮನಾಗಿಸಿ ಕೋಗಿಲೆಗಳ ಕೊರಲಂ ಕೆಳೆಯೇಱಿಸುತುಂ ಅಶೋಕೆಯೊಳ್ ಪಲ್ಲವಮಂ ಪಡೆದು ಕಾಂತಾಜನದ ವಣ್ಣ ಪುಣ್ಯಮಂ ಕವಲ್ವರಿಯಿಸುತುಂ ಲತಾವಿಸರದೊಳ್ ಕುಸುಮಕುಲಮಂ ಪಸರಿಸಿ ಮಧುಕರಂಗಳ ಮನೋರಥಂಗಳಂ ಪಡೆಯುತುಂ ತರುನಿಕರಕ್ಕೆ ನವೀನಫಲಮಂ ಕೊಟ್ಟು ಶುಕಂಗಳ ಜಹ್ವೆಯ ವಿಕಸನಮಂ ಮಾಡುತ್ತುಂ ಪೂಗೊಳನಂ ತಿಳಿ-ಯಿಟ್ಟು ನೀರ್ವಕ್ಕಿಗಳಂ ನೆಲೆವೆರ್ಚಿಸುತ್ತುಂ ರವಿಕಿರಣಂಗಳಂ ಪುಟವಿಟ್ಟು ರಥಾಂಗಮಂ ನಲವೇಱಿಸುತ್ತುಂ ನಳಿನಕುಲಮನಲರ್ಚಿ ಕಲಹಂಸಂಗಳಂ ತಣಿ-ಪುತ್ತುಂ ನದೀಜಳಮಂ ನಿರ್ಮಳಮಂ ಮಾಡಿ ಮೃಗಪಕ್ಷಿಕುಳಮಂ ಮಿಗೆ ತುಷ್ಟಿ-ವಡಿಸುತ್ತುಂ ಚಂದ್ರಕಳೆಯಂ ದಳವೇರಿಸಿ ಚಕೋರಮಾಲೆಗೆ ಸುಖಮಂ ಕೊಡುತ್ತುಂ ಇಳೆಯೊಳ್ ಬೆಳ್ದಿಂಗಳಂ ಪಸರಿಸಿ ವಿರಹಿಗಳಂ ವಿರಥರಂ ಮಾಡುತ್ತುಂ ಕಾಮನ ಬಾಣಕ್ಕೆ ಕಂಪನಿತ್ತುಂ ಕಾಮಿಗಳನಿರ್ಮೆಯ್ಯಾಗ್ಗಣಿಸುತ್ತುಂ ಮಳಯಾನಿಳಂಗೆ ಶೈತ್ಯಸೌರಭ್ಯ-ಮಾಂದ್ಯಮನಿತ್ತು ಸುಖಮಿಥುನದ ಸುರತಶ್ರಾಂತಿಯನಾಱಿಸುತ್ತುಂ ಮುನಿಗಳ ಮನಮನನ್ವಿತಂ ಮಾಡಿ ವನಿತಾಜನದ ವದನಮನಲರ್ಚುತ್ತುಂ ಸಕಳಭುವನಕ್ಕೆ ರಾಗಾಂಧತೆಯನಿತ್ತು ಸತೀಜನಮನೇವೊಳ್ತುಂ ನೆರೆಪುತ್ತುಂ ಇಂತು ತನ್ನ ಬರವಿನುರ-ವಣೆಯನುರಾಗಕ್ಕೆ ಅನುರಾಗವೇಱೆ ಮನ್ಮಥರಾಜಂ ರತಿಯನಾಲಂಗಿಸಲನುಗೆಯ್ಯು-ತ್ತಿರೆ ವಸಂತಂ ಸಂತಸದಿಂ ನಡೆತಂದೆಳಗೆಂಪಂ ಪಸರಿಪ ಕಿಸಲಯವಿಸರಮಂ ಕಂಪಂ ಕವಲ್ವರಿಯಿಸುವ ಕುಸುಮಮಂಜರಿಯಂ ಮಧುರರಸಮಂ ತೆರೆಮುಸಗಿಪ ನವ್ಯಫಳಂ-ಗಳಂ ಮಕರಪತಾಕಂಗೆ ಕಾಣ್ಕೆಯಿಕ್ಕಿ ಮೆಯ್ಯಿಕ್ಕಿ ಕೆಯ್ಯಂ ಮುಗಿದು ನಿಂದು,

---

೧. ಕಂದಿ (ಶಾ. ಬೆ. ಬ. ಯು. ದಾ. ಕ. ಗ.) ೨. ಕಳೆಯೇಱಿಸುತಂ (ಅ. ಓ.) ೩. ನೂಡುತ್ತುಂ (ಶಾ. ಕ.) ೪. ರಾಗೋನ್ನತಿ (ಅ); ಕಾಮಾಂಧತೆ (ಕೊ.)

ಇದೆ ಚತುರಂಗಬಲಂ ಬಂ-
ದುದು ಮನ್ಮಥಭೂಪ ನೋಡು ಚಿತ್ತವಿಸೆಸುತುಂ
ಸದಮಳಮೋಹನಜನಕಾ-
ಸ್ಪದಸೇನೆಯನೊಲ್ದು ತೋಱುತಿರ್ದಂ ಚೈತ್ರಂ ೪೩

ಅದೆಂತೆಂದೊಡೆ,

ಮಿಳಿ ಲತೆ ಗುಳಮೇ ಪತ್ರಂ
ಫಳರಸಮೆ ಮದಾಂಬು ನೀಳ್ದ ಕೊಂಬೆ ಕರಂ ಪೂ-
ತೆಳಗೊಂಬುಗಳೇ ದಂತಂ
ಕಳಕಂಠನಿನಾದಮೆಸೆವ ಬೃಂಹಿತನಾದಂ ೪೪

ವಿಪುಳೋನ್ನತಪಲ್ಲವಮ-
ಗ್ರಪಲ್ಲವಂ ಡಿಂಡಿಮಸ್ವನಂ ಮತ್ತಾಳೀ-
ಚಪಳಸ್ವನಮೆನೆ ಚೂತ-
ದ್ವಿಪಘಟೆಯಂ ತೋಱಿದಂ ಸಮಂತು ವಸಂತಂ ೪೫

ವರಮುಖರಾಗದ ಮೊಗವಡ-
ದುರುಕಾಂತಿಯ ವಾಘೆ ಚರಣದಂಕಣಿಯಿಂ ಭಾ-
ಸುರಪಕ್ಷದ ಪಚ್ಚೆಯ ಪ-
ಕ್ಖರಿಯೆಸೆವ ಶುಕಾಶ್ವವೀಥಿಯಂ ಕಾಣಿಸಿದಂ ೪೬

ಎರಡುಂ ಪಕ್ಷಂ ಚಕ್ರಂ
ಪೊರೆದಾಲಿಂಗನಮೆಯಚ್ಚು ಚಂಚುಪುಟಂ ಪೊ-
ತ್ತಿರಿಸುವ ಮುಂಕಣಿಯಾಗಿರೆ
ಸೆರೆದಿರ್ದ ರಥಾಂಗರಥಮನೊಪ್ಪಿರೆ ತಂದಂ ೪೭

೧. ಪತಾಕಾ (ಅ); ಪತಾಕಂ (ಒ.) ೨. ರಾಗಂ (ದಾ.) ೩. ಗಳ್ (ಕಾ. ಬೆ. ಮು. ಕ.); ಯಿಂನೆ (ಕೆಒ.) ೪. ರಥಂಗಳಂ ತೋಱುಸಿದಂ (ಅ.)

ಇಂತು ವಸಂತಂ ಹಸ್ತ್ಯಶ್ವರಥಂಗಳಂ ತೋಱಿದ ಸಮನಂತರದೊಳ್ ಪದಾತಿಬಲಂ ಬರುತಿರ್ದುದದೆಂತೆಂದೊಡೆ,

ಪಾಡುವ ತುಂಬಿಯ ತಲೆಯ-
ಲ್ಲಾಡುತ್ತಿರೆ ಬಂದಳಮನು ಕೃಷ್ಣನ ಮನಮಂ
ಷೋಡಶಸಹಸ್ರಭಾಗಂ-
ಮಾಡಿದ ಮನ್ಮಥನ ಮೊನೆಯ ನಾಯಕಿಯೊರ್ವಳ್ ೪೮

ಅನವದ್ಯಕಳಾಕೋವಿದ-
ನೆನಿಸಿಯುಮಾತ್ಮಜೆಯೊಳೊಲ್ದು ಬೆರಸಿದ ಚತುರಾ-
ಸ್ಯನ ರೂಪು ಕಾಲ ಪೊಸಪೂ-
ವಿನ ಹಾಹೆಯೊಳೆಳಲೆ ಬಂದಳಂಗನೆಯೊರ್ವಳ್ ೪೯

ಭಾಸುರತರಸುಕುಮಾರೆ ವಿ-
ಲಾಸದೆ ನಡೆತಂದಳಂದಹಲ್ಯೆಯ ಕತದಿಂ
ಸಾಸಿರಕಣ್ಣಂ ಮಾಡಿದ
ವಾಸವವಿಜಯಧ್ವಜಪ್ರತಾಪದಿನೊರ್ವಳ್ ೫೦

ಮತ್ತಮಲ್ಲದೆ,

ನೆರೆದು ಪಳಂಚುವ ಕಾಲುಂ-
ಗುಱದ ರವಂ ಮುಂದೆ ಡಾಡೆವಱಿಯಂ ಪೊಯ್ಯು-
ತ್ತಿರೆ ಕುಸುಮಾಸ್ತ್ರನ ಮದವತ್-
ಕರಿಯಂತೆ ಕರೀಂದ್ರಯಾನೆ ಬಂದಳದೊರ್ವಳ್ ೫೧

ಮತ್ತಂ ವಸಂತಂ ಪದಾತಿಬಲಮಂ ತೋಱುತಿರ್ದನದೆಂತೆಂದೊಡೆ,

---

೧. ಳಱದು ( ಬ. ದಾ. ) ೨. ಪೋಲು ( ಕಾ. ಬಿ. ಯ. )

ಅದೆ ಸನೆಯ ಕಠಾರಿಯ ಮರು-
ಗದ ಹಱಿಗೆಯ ತಾಮರಸದ ಘಂಟೆಯ ಮುಡಿವಾ-
ಳದ ಚಮರಿಯ ಕುಮುದದ ಕೊಂ-[1]
ತದ ಕೇತಕಿಯೆಸಳ ಸುರಗಿಯಬಳಾನೀಕಂ ೫೨

ತಳಿರ್ಗಳ ಚಕ್ರದ ಕದಳೀ-
ದಳಫಲಕದ ಸುರಗಿಯರಲ ಕೌಕ್ಷೇಯದ ಪ-
ಡ್ವಳಿಗಳ ಸಬಳದ ಬಂದುಗೆ-
ಗಳ ತಿಸುಳದ ಮೊಲ್ಲೆಯಿಟ್ಟಿಗಳ ಕಾಮಿನಿಯರ್ ೫೩

ಸುರಹೊನ್ನೆಯ ಮುಗುಳ್ಗಳ ತೋ-
ಮರದ ಲತಾವಳಿಯ ಸೆಲ್ಲೆಹಂಗಳ ಪೊಸಪಾ-
ದರಿಗಳ ಬಲ್ಲೆಹದೆಸವಂ-
ಕುರವೀಧಿಯ ವಜ್ರಮುಷ್ಟಿಯಂಗನೆಯರ್ಕಳ್ ೫೪

ದವನದ ಸೀಗುರಿಗಳ ಪೊ-
ಣ್ಮುವ ಪೊಂಬಾಳೆಗಳ ಚಾಮರಂಗಳ ಕಂಪೇ-
ಱುವ ಸಂಪಗೆಗಳ ಸತ್ತಿಗೆ-[2]
ಯ ವಿಚಕಿಲನಿಕಾಯಕೇತುದಂಡದ ಸತಿಯರ್ ೫೫

[3]ತರದಿಂದಂ ಕ್ಷೀರಾಬ್ಧಿಯ
[4]ತರಂಗದಂತೆಸೆವ ಶಶಿಯ ಹಾದಿಯವೋಲ್ ಸುಂ-
ದರಿಯರ ಮೋಹರಮಿಂತೊ-
ತ್ತರಿಸೆ ನಿರೀಕ್ಷಿಸುತೆ ದರ್ಪಕಂ ಬೆಱಗಾದಂ * ೫೬

ಇಂತು ಬೆಱಗಾಗುತ್ತುಮಿರೆಯಿರೆ ಮತ್ತಂ ಕಂದರ್ಪರಾಜನ ಮುಂದೆ *

---

೧. ಕುಃ (ಶಾ.) ೨. ಸತ್ತಿಗೆ । ಯುವರ ನಿಕಾಯಕ್ಕೆ ಕಮಳದಂಡದ ಸತಿಯರ್ (ಅ.) ೩. ತರತರದಿಂ (ಶಾ. ಬೆ. ಬ. ಗ. ದಾ. ಗೊ.) ೪. ತೆರೆ ಕವಿದಂತೆಸೆವ (ಬ.) * ಇವು ಅ. ಪ್ರತಿಯಲ್ಲಿಲ್ಲ.

ಚಂಪಕ.

ನಳನಳಿಪಿಕ್ಷುದಂಡದ ಧನುವ್ರಜದಿಂ ಶತಪತ್ರಸೂತ್ರದಿಂ
ತೊಳಗುವ ನಾರಿಯಿಂ ತಳಿರ ಕೆಯ್ಪೊಡೆಯಿಂ ಕುಸುಮಾಸ್ತ್ರಮಾಲೆಯಿಂ-
ದಳವಡೆ ನಿಂದು ನೀಡಡಿಗೆ ನೀಡಡಿ ಸೇರ್ದಿರೆ ಸಾರ್ದು: ಬೊಬ್ಬೆಗೊ-
ಟ್ಟೆಳೆ ಬೆಱಗಾಗೆ ನಾರಿಯರ ಬಿಲ್ಪಡೆ ತೋಱಿತು ಮಿಾಱಿ ಲೋಕಮಂ ೫೭

ಅಂತುಮಲ್ಲದೆ,

ತೊಳತೊಳಪಮೃತಮಯೂಖಂ-
ಗಳನೊಸೆದೆಣ್ದೆಸೆಗೆ ಪಸರಿಸುತ್ತೆ ಚಕೋರಾ-
ವಳಿ ಬಳಸೆ ನೆರೆದ ಕೈರವ-
ಕುಳದೊಳ್ ನಡೆತಂದನಮುಮ ತಾರಾಧೀಶಂ * ೫೮

ಕ್ರಮದಿಂದೆ ಶೈತ್ಯಸೌರ-
ಭ್ಯಮಾಂದ್ಯಮೆಂದೆಂಬ ತನ್ನ ಗುಣದೊಳ್ಪು ರತೀ-
ರಮಣನನೆಲ್ಲಾಡಿಸೆ ಮಂ-
ದಮಾರುತಂ ಮೋಹಿಸುತ್ತೆ ಮುಂದೆಯ್ತಂದಂ ೫೯

ಇಂತು ಸಹಕಾರಸಾಮಜಸಮಾಜಮಂ ಕೀರಕದಂಬತುರಂಗಸಂಘಮಂ ರಥಾಂಗರಥವ್ರಾತಮಂ ಸುದತೀಸಮೂಹಪದಾತಿಕುಲಮಂ ನಿರೀಕ್ಷಿಸುತ್ತುಂ ಪರಮಾನುರಾಗದಿಂ ಕಂತುರಾಜಂ ಸಂತಸಮನೆಯ್ದುವಾಗಳ್ ವಸಂತನಿರ್ದಿತ್ತ-ಲವಧರಿಸೆಂದು ನವೀನವಚೋವಿಳಾಸೋನ್ಮತ್ತತೆಯಿಂದಿಂತೆಂದಂ,

ಕಿಸಲಯದ ಕುಸುಮವಿತತಿಯ
ಪೆಸರೇಕಾ ಸ್ಥಾಣುವಿನ ವಿನಿಶ್ಚಲಮನಮಂ
ಬೆಸುಗೆಗಳೆದೊಡೆದು ಮೂಡಲ್
ಮಿಸುಪಂಕುರವೊಂದೆ ಸಾಲದೇ ಮದನನೃಪಾ ೬೦

---

೧. ಜಾಲದಿಂ ( ಅ. ) ೨. ನಳ್ಕಾಡಿಸೆ ( ಬ. ) ೩–೩. ರಥಾಂಗವರೂಥವೀಥಿಯಂ ( ಬಿ. ಬ )
* ಈ ಪದ್ಯವು ಓ. ಪ್ರತಿಯಲ್ಲಿಲ್ಲ.

ಎಸೆವ ನವಾಂಕುರ[1]ರಸದಿಂ
ಮಸೆದೀ ಕೋಕಿಲನ ಕೊರಲ ಮಧುರಧ್ವನಿಯೊಂ-
ದೆ ಸಮರ್ಥಂ ಶೂಲಿಯ ತಪ-
ದೆಸಕಮನುಡುಗಿಸುವೊಡುಳಿದ ಪರಿಕರವೇಕಯ್ ೬೧

ಇಳೆಯೊಳ್ ಸರ್ವೇಶನ ನಿ-
ಶ್ಚಳತಪದುರವಣೆಯ ತೇಜಮಂ ದೊರೆಗೆಡಿಸಲ್
ಕಳರವದಿಂ ಬಗ್ಗಿಸುವರ-
ಗಿಳಿಗಳ [2]ಚಪ್ಪರಣೆಯೊಂದೆ ಸಾಲದೆ ಮದನಾ ೬೨

ಇಂತಿವರ್ಕೆ ಸೆಡೆಯದೆ ಕಡುಸಿಂದಿದುಧರಂ ನಿಂದನಪ್ಪೊಡೆ

ಅರಗಿಳಿಗಳ ಪವಮಾನನ
ತರುಣೀನಿವಹದ ಫಳಪ್ರತಾನದ ಪುಷ್ಪೋ-
ತ್ಕರದನುಪಮಶಬ್ದಸ್ಪ-
ರ್ಶರೂಪರಸಗಂಧದಿಂದೆ ಶಿವನಂ ಗೆಲ್ವೆಂ ೬೩

ಅಂತು ಸಕಲಜಗಜ್ಜನಮನೋನುರಾಗಜನನಕಾರಣಕರ್ತೃವಪ್ಪ ವಸಂತಂ ಭಾಷೆಗೊಟ್ಟ ಸಮನಂತರದಲ್ಲಿ,

ಭರದಿಂದೆ ಬಂದು [3]ನುಡಿದಂ
ವರಹಿಮಕರನೆಸೆವ ಚಂದ್ರಕಾಂತದ ಕಲ್ಲಂ
ಕರಗಿಸುವೆನ್ನ ಸುಧಾಮಯ-
[4]ಕರಂಗಳಿಂ ಹರನ ಚಿತ್ತಮುಂ ಕರಗಿಸುವೆಂ[4] ೬೪

ಆ ಸಮಯದೊಳುರವಣಿಸಿ ನಡೆತಂದು ಮುಂದೆ ನಿಂದ ಚಂದ್ರಮುಖಿಯರೊಳೊರ್ವಳ್,

೧. ದಿಂದಂ (ಗ.) ೨. ರವನೊಂದೆ ಸಾಲದೇ ಕಂದರ್ಪಾ (ಅ.) ಚಪ್ಪರಣೆ ಸಾಲದೇ ಮದನನೃಪಾ (ಕ. ಪ) ೩. ನಿಂದಂ (ಕ.) ೪–೪. ಕಿರಣಂಗಳ್ ಹರನ ಚಿತ್ತಮುಂ ಕರಗಿಸುಗುಂ (ಅ.)

ತ್ರಿಣಯನ ತಪಮಂ ಕಿಡಿಸಲ್
ಕ್ಷಣವೇಧಿಗಳೆನಿಸುವೆನ್ನ ತರಳಕಟಾಕ್ಷೇ-
ಕ್ಷಣಯುಗಮಿರ್ದಂತೀ ನನೆ-
ಗಣೆಗಳ್ ಪರ್ಯಂತವೇಕೆ ಮಕರಪತಾಕಾ ೬೫

ಮತ್ತಮೊರ್ವಳ್,

ಮಾರನೃಪ ನಿಜಧನುಷ್ಟಂ-
ಕಾರಮನಾರಾಂಪರಂತದಿರ್ಕೆನ್ನಯ ಮಂ-
ಜೀರದ ಮಧುರಧ್ವನಿಯಿಂ
ಘೋರತಪೋಮಯನನಭವನಂ ಪರಿಭವಿಪೆಂ ೬೬

ಎಂದು ಮಿಱು ನುಡಿವ ನೀಱೆಯರ ನಡುವಣ ಭಾಮಿನಿಯೊರ್ವಳ್ ಭಾಷೆ-ಗುಡುತ್ತುಮಿರ್ದಳದೆಂತೆಂದೊಡೆ,

ಚಂಪಕ.

ಮದನನೃಪಾಲ ಕೇಳ ಭುವನತ್ರಯಮಂ ಕ್ಷಣದಿಂದೆ ಗೆಲ್ದು ಪಿಂ-
ಗದ ಘನಕೀರ್ತಿಯಿಂ ತೊಳಗುವಿಕ್ಷುವ ಚಾಪದ ಪುಷ್ಪಬಾಣದ-
ಗ್ಗದ ನುಡಿಯಿಲ್ಲಿಗೇಕೆ ಮಿಸುಪೆನ್ನಯ ಪುರ್ವಿನ ಕರ್ವುವಿಲ್ಲ ನೋ-
ಟದ ನನೆಗೋಲ ಲೀಲೆಯೊಳೆ ಸೋಲಿಸುವೆಂ ಜಿತಕಾಲಶೂಲಿಯಂ ೬೭

ಎಂದಿಂತು ಸಂದಣಿಸಿ ಭಾಷೆಗೊಟ್ಟ ವಸಂತಾದಿಸಂಮೋಹನಬಲಮುಖ್ಯರ ಸುಧಾರಸಪೂರಿತಚಾರುವಚನರಚನೆಗಳಂ ಕೇಳ್ದು ಕುಸುಮಾಯುಧಂ ವಿಶಸನ-ವಿಜಯಿಗಳಪ್ಪ ನಿಜಭುಜದಂಡಯುಗಳಮಂ ನೋಡಿ ಮದೋನ್ಮತ್ತವೀರಾಳಾಪ-ಮುಖರಮುಖನಾಗಿ,

---

೧. ಗಣ (ದಾ). ೨. ಘೂ (ಕಾ. ಜೆ. ಬ. ಯು); ಪೂ (ದಾ). ೩. ಗಣೆಗಳ (ಕಾ).

ಇನ್ನಿರ್ಪನಿರ್ಪನಭವಂ
ಸನ್ನುತತಪದಿಂದಮಿರದೆ ಮಾಣ್ಬಂ ಕಾಣ್ಬಂ
ತನ್ನಗ್ಗದ ವೈರಾಗ್ಯದ
ಬಿನ್ನಣಮುಮನೆನ್ನ ಪಂಚಬಾಣದ ಬಲಮಂ[೧] ೬೮

ಚಂಪಕ

ಗಣಿದಮದೇವುದಿಕ್ಷುಧನುವುಂ ಕುಸುಮಾಸ್ತ್ರಮುಮೆನ್ನ ಕೆಯ್ಗೆ ಸಂ-
ದಣಿಸೆ ಬಳಿಕ್ಕಮೆತ್ತಣ ತಪೋಮುಯರೆತ್ತಣ ಶಾಂತಿಭೂಪರೆ-
ತ್ತಣ ಜಿತಕಾಮರೆತ್ತಣ ದಿಗಂಬರರೆತ್ತಣ ಕರ್ಮನಿಷ್ಠರೆ-
ತ್ತಣ ಬುಧರೆತ್ತಣಾತ್ಮವಿದರೆತ್ತಣ ನಿಸ್ಪೃಹರೆತ್ತಣುತ್ತಮರ್ ೬೯

ಅಂತುಮಲ್ಲದೆ,

ಪರಿಮಳಮನೆಣ್ದೆಸೆಗೆ ಬಿ-
ತ್ತರಿಸುವ ನನೆಗಣೆಗಳಿಂದೆ ಗಿರಿಪತಿತನಯಾ-
ವಿರಹಾತಪಮೊಗೆಯಲ್ ಶಂ-
ಕರನ ತಪಶ್ಛತ್ರದಂಡಮಂ ಖಂಡಿಸುವೆಂ ೭೦

ಅತಿಭೀಮರ್ ಜಿತಕಾಮರ್
ನುತನಾಮರ್ ಮದನನಿದಿರೊಳಿಲ್ಲೆನೆ ಹೋಹೋ
ಸತಿ ಕಾಮಿತಮನದಿಂ ಪಾ-
ರ್ವತಿ ಬಳೆವನ್ನೆವರಮಿರ್ಪ ತಪಮೊಪ್ಪಿಪುದೇ ೭೧

ಅಂತುಮಲ್ಲದೆ,

ಸೊಂಪಿಂ ಮುದದಿಂ ಮೋಹನ-
ದಿಂಪಿಂ ಸಂತಾಪದಿಂ ವಶೀಕರಣೋದ್ಯತ್-
ಸಂಪದದಿಂದಂ ನೆಱೆ ತೋ-
ರ್ಪೆಂ ಪಂಚಮುಖಂಗೆ ಪಂಚಬಾಣದ ಸವಿಯಂ ೭೨

೧. ಬಲುಹಂ ( ಅ. ಬ. ; ); ಬಲ್ಪಂ ( ಶಾ. ಬಿ. ಗೊ )

ಎಂದಿಂತು ನಿಜಭುಜಪ್ರತಾಪಾಲಂಕೃತವೀರಾಳಾಪಮಂ ಮಾರನೃಪಂ ನುಡಿಯುತ್ತುಂ ನಳಿನಗುಣವಿರಚಿತನವ್ಯದುಕೂಲಮಂ ತೆಗೆದು ಬಿಗಿದುಟ್ಟು ದಿವ್ಯಚಂದನಮನುದ್ವರ್ತನಂಗೆಯ್ದು ಪರಾಗದ ತಿಲಕಮನಿಟ್ಟು ಕೇತಕೀದಳದ ಕೂರಲಗಂ ಕಿಗ್ಗಟ್ಟಿನೊಳಳವಡಿಸಿ ವಸಂತಂ ಪೊಸಮಲ್ಲಿಗೆಯ ನುಣ್ಣನಪ್ಪ ಸಣ್ಣನನೆಯ ವೀರಸೇಸೆಯಂ ಸೂಸೆ ವನಲಕ್ಷ್ಮಿ[1] ಪಳಿಕಿನ ಪರಿಯಾಣದೊಳ್ ಬಂದುಗೆಯ ಕುಸುಮದ ವಿಜಯಾರತಿಯನೆತ್ತಿ ಮಜ್ಜಯ್ಯ ಘೂತುರೆ ಎಂದು ಸರಸಿಜಾಕ್ಷಂ ಪರಸೆ ಲಕ್ಷ್ಮೀದೇವಿಯರ್ ಮೊದಲಾದ ಲಲನಾಜನಂ "ವೀರವಿಭ್ರಮ ವಿಜಯೀಭವ" ಎಂದು ಗೆಲ್ವನೀಯೆ ಚತುರಾಸ್ಯನುಮಿದ್ರಾದಿದಿಗ್ವರರುಂ ಮುಂದೆ ಉರಾವುರೇ ಎಂದು ಮೆಯ್ಯಾಂತು ಕೆಯ್ವಾರಿಸೆ ಕಳಾಮಾಳಿ ಕೆಯ್ಗುಡೆ ಗರ್ವಪರ್ವತಮನೇಱುವಂತೆ ಮುಂದೆ ನಿಂದ ಮಾಕಂದಮತ್ತಮಾತಂಗಮಂ ಭೋಂಕನೇಱಿ ಪಶ್ಚಿಮಾಸನದೊಳ್ ರತೀದೇವಿಯನಿರಿಸಿ ಹೊಳೆಹೊಳೆವ ಚಂದ್ರಮನ ಬೆಳ್ಗೊಡೆ ಮೇಲಲರೆ ಗಂಧವಹಂ ಸುಗಂಧದ ಸೀಗುರಿ ಚಾಮರವನಿಕ್ಕೆ ಕರ್ಬಿನ ಬಿಲ್ಲುಮನಲರ ಸರಲುಮಂ[2] ರೋಹಿಣೀದೇವಿ ಪಿಡಿದಿರೆ ಕೆಲಬಲದೊಳ್ ಶುಕಾವಳೀ ತುರಂಗಸಂಘಂ ಸಂದಣಿಸೆ ರಥಾಂಗಘನರಥಂ ಮೇಳಯ್ಸೆ ಚೂತಗಜಂ ವೀಧಿಗೊಳೆ ಮುಂದೆ ಸುದತೀಕುಲಪದಾತಿಬಲಂ ಮುಂದಯ್ಸೆ ನೆಗೆಪಿದ ಮಕರಧ್ವಜಂ ಗಗನಮಂ ಚುಂಬಿಸೆ ದರ್ಪಂ ಕೆಯ್ಮಿಕ್ಕು ದರ್ಪಕಭೂಭುಜಂ ಶೂರ್ಪಕಮರ್ದನಂ ಶಂಬರಸೂದನಂ ನತಜಿತೇಂದ್ರಿಯವಿತಾನಂ ಮುನಿಜನಮನೋಹಾರಿ ಯತಿವ್ರಜವಾರಣಪಂಚಾನನಂ ಕಾಂತಾಕುಲಚಕ್ರವರ್ತಿ ಅಪ್ರತಿಹತವಿಕ್ರಮಂ ಕಾಮದೇವಃ ಹೇಮಕೂಟಾಭಿಮುಖನಾಗಿ ನಡೆತರ್ಪಾಗಳ್,

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೭೩

---

೧. ಹರಿವಾಣದೊಳ್ ( ಕಾ. ಕ. ) ೨. ಬಿಲ್ಲನರಲ ( ಕಾ. ಯು. ) ೩. ಜನ ( ಕಾ. ಬಿ. ಯು. )

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ವಸಂತೋದಯಮದನಪ್ರಯಾಣಪ್ರಾರಂಭವರ್ಣನಂ ಸಪ್ತಮಾಶ್ವಾಸಂ



# ಅಷ್ಟಮಾಶ್ವಾಸಂ

## ಕಾಮದಹನವರ್ಣನಂ

ಗರಳಧರನುರಗಭೂಷಂ
ಸರಸಿಜಭವಮಸ್ತಕಪ್ರಯುಕ್ತಕರಂ ಭೀ-
ಕರಭಾಳಲೋಚನಂ ಭ-
ಕ್ತಿರಸಮನೆಮಗೀಗೆ ಹಂಪೆಯ ವಿರೂಪಾಕ್ಷಂ ೧

ಉತ್ಪಲ

ಕೀರತುರಂಗಸಂಘಮಯಮಿಾ ಧರೆ ಪುಷ್ಪಚಯಾಸ್ತ್ರಶಸ್ತ್ರವಿ-
ಸ್ತಾರಸುಗಂಧವೃಂದಿಮಯಮಿಾ ಕಕುಭಂ ಮಕರಂದಸಾಂದ್ರ ಸಂ-
ಚಾರರಜೋನಿಕಾಯಮಯಮಿಾ ನಭಮೆಂದೆನೆ ಕೌತುಕಪ್ರದಂ
ಮಾರನೃಪಾಲಸೇನೆ ನಡೆದತ್ತು ಜಿತೇಂದ್ರಿಯಚಿತ್ತಶೋಷಣಂ ೨

ಇಂತು ನೆರೆದು ನಡೆವ ಕುಸುಮಕೋದಂಡನ ಕಮನೀಯ ಬಲದ ಹಿಂದೆ,

ಘಳಿಲೆನೆ ಕಂಪನದಿಂ ಮುನಿ-
ಗಳ ಕರತಳದಕ್ಷಮಾಲೆ ಬೀಳುತ್ತಿರೆ ಕೋ-
ಕಿಳಕುಳನಿಸ್ಸಾಳಧಳಂ
ಧಳಂ ಧಳಂ ಧಳನಿನಾದಮುಣ್ಮಿತ್ತಾಗಳ್ ೩

ಅನಂತರದಲ್ಲಿ,

ಮಹಾಸ್ರಗ್ಧರೆ.

ಮುನಿಚಿತ್ತಾಕರ್ಷನೀ ಬಂದನೆ ಋಷಿವಿಮಳಾಚಾರಸಂಹಾರಿಯಾ ಬಂ-
ದೆನೆ ಧರ್ಮಜ್ಞಾರಿಯಾ ಬಂದನೆ ಜಿತವಿಷಯವ್ರಾತವಿಧ್ವಂಸಿಯಾ ಬಂ-
ದನೆ ಶಾಂತಾರಾತಿಯಾ ಬಂದನೆ ಯತಿಹರನೀ ಬಂದನೀ ಬಂದನೀ ಬಂ-
ದನೆಯೆಂದಲ್ಲಲ್ಲಿ ಭೃಂಗೀಬಹುವಿಧಕಹಳಾನಾದಮುಣ್ಮಿತ್ತುದೆತ್ತಂ ೪

---

೧-೧. ವಿಶಾಲಗಂಧ (ಯ.) ೨. ವಿ । ಸ್ತಾರ (ಕಾ. ಕ.) ೩. ಮುಂಡೆ (ಕಾ. ಬೆ. ಯ. ಅ. ಗೊ )
೪. ಸಂಹಾರ ನೀ ( ಕಾ. ) ೫. ವಿಧ್ವಂಸನೀ ( ಕಾ )

ತೊಲಗೆಲೆ ಸಹಸ್ರಲೋಚನ
ತೊಲಗೆಲೆ ವಾಣೀಶ ತೊಲಗೆಲೇ ಪಾವಕ ನೀಂ
ತೊಲಗು ಬೃಹಸ್ಪತಿ ಕೃಷ್ಣನೆ
ತೊಲಗೆನುತುಣ್ಮಿದುವು ಬಹಳಕಹಳಾನಾದಂ ೫

ಇಂತು ಬಿರುದೆತ್ತಿ ಕರೆವ ಬಹಳಕಹಳಾನಾದಂಗಳ ನಡುವೆ.

ಚಂಪಕ.

ನಡೆದುದು ಸೈನ್ಯಮೊಪ್ಪವರಸನ್ನವಗಲ್ದರ[1] ಜೀವಶೂನ್ಯವಾ-
ರ್ದಡಸಿತು ಕೂಡೆ ಕಾಮಿನಿಯರಾಡೆ ಜಿತೇಂದ್ರಿಯರೋಡೆ ನೋಡೆ[2] ಬಿ-
ಲ್ವಿಡಿದ ರತೀಶನಪ್ರತಿಮವೇಶನಸೂನವರಪ್ರಕಾಶನು-
ರ್ಕುಡುಗೆ ವಿಯೋಗಿಗಳ್ ವಿಗತಭೋಗಿಗಳುದ್ಘಸಿದೋಘಯೋಗಿಗಳ್ ೬

ಮುನಿಗಳ ಧೈರ್ಯಭೂಮಿ ರಜಮಪ್ಪಿನೆಗಂ ಮನುಜೇತಸಾದ್ರಿ ಭೋಂ-
ಕನೆ ಪುಡಿಯಪ್ಪಿನಂ ಯತಿಚರಿತ್ರತರಂಗಿಣಿ ಪಂಕಮಪ್ಪಿನಂ
ಘನವಿಮಳವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀ-
ಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ ೭

ಕೊರಗಿದರಾ ಯತಿಪತಿಗಳ್
ಹರಣಂಗಳೆದರ್ ವಿಯೋಗಿಗಳ್ ಮನುಮುನಿಗಳ್
ಶರಣೆಂದರ್ ಜಿತಕಾಮರ್
ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ ೮

ಇಂತು ಸಕಳಭುವನಮಂ ಭಂಗಿಸುವ ಚತುರಂಗಸೇನೆಯ ನಡುವೆ ಕಡುಸಿಂಗಡೆತಂದು ಭೂಮಿಗೆ ಮೆರೆವ ಸೋಮಧರನಿರ್ಪ ಹೇಮಕೂಟಪ್ರಾಂತದೊಳ್ ನಿಂದು ನಗಾಗ್ರಮಂ ನೋಡಿ ಕಡುಮುಳಿದು ಕಾಮಭೂಪಂ ಉನ್ನತಮಪ್ಪ ತನ್ನ ಸೇನೆಗೆ ಕೆಯ್ವೀಸಿದ ಸಮಯದೊಳ್ ಗಿಳಿಗಳ್ ಚಪ್ಪರಿಸೆ ತುಂಬಿಗಳ್ ಮೊರೆಯೆ ಕೋಗಿಲೆಗಳ್ ಕರೆಯೆ ಮಂದಾನಿಳಂ ಮೇರೆವರಿಯೆ ಚಂದ್ರ ಬೆಳಂಗಳಂ ಬೀಱೆ[3]

---

೧. ನಾ ( ಅ. ) ೨. ಚೆ ( ಬ. ) ೩. ನೋಲ್ಪರಿಯಿ ( ಕಾ. ಬೆ. ಮ. ಬ. ); ನೊಲ್ಲರಿಯಿ ( ಕ. )

ಚಕೋರಿಗಳ್ ನಲಿದುಲಿಯೆ ಕುಸುಮಕುಲಂ ಕಂಪನೊತ್ತರಿಸೆ ಸಹಕಾರಂ ಸಂದಣಿಸೆ ಕಾಮಿನಿಯರ್ ಜಡಿಯೆ ರಥಾಂಗಂ ಸಂಗಡಿಸಿ ನೂಂಕೆ ಮಕರಧ್ವಜಂ ಗಗನದೊಳ್ ಕುಣಿಯೆ ಮತ್ಸ್ಯಪತಾಕೆಯುಚ್ಚರಿಯೊಳಾಡೆ ಮಾಕಂದಗಜಘೂತ್ಕಾರಂ ರಥಾಂಗ-ರಥಚೀತ್ಕಾರಂ ಶಿಳೀಮುಖಝುಂಕಾರಂ ಹಂಸಕುಲಕ್ರೇಂಕಾರಂ ಝಷಕೇತನ-ಪಟತ್ಕಾರಂ ತರುಣೀಚಗಣಮುದ್ರಿಕಾಟಣತ್ಕಾರಂ ತತ್ಕಟಕಮಂಜೀರಝಣತ್ಕಾರಂ ಕಳಕಂಠವೀಥೀಧಿಕ್ಕಾರಂ ಬೆರಸಿ ಬಳೆದಾಗಸಮಂ ಮುಸುಂಕೆ ಸರ್ವಬಲಮೊಬ್ಬುಳಿಸಿ ಬೊಬ್ಬಿಟ್ಟಬ್ಬರಿಸಿ ಪರ್ಬಿ ಪರೆದು ಶರ್ವನ ಸಮಾಧಿಪರ್ವತಮನೊತ್ತರಿಸಿ ಪತ್ತಿ ಬಿಡದೆ ಸುತ್ತಿ ಮುತ್ತುತ್ತಿರೆ ಮುಂದಣ ಕಾಪಿನ ನಂದೀಶ್ವರಂ ಮೋಹನಬಲದ ಸುಧಾರಸಮಯಸುನಾದಮಂ ಭೋಂಕನೆ ಕೇಳ್ದಂತಂತೆ ಕಂಪಿಸಿ ಕರಣಂ ಕಲಂಕಿ ಕಿಂಚಿತ್‌ಸಂಚಲಮನನಾಗಿ ಚಲ್ಲಿದ ಚಿತ್ತಮಂ ಮೆಲ್ಲಮೆಲ್ಲನೆ ಸಂತಯ್ಸಿಕೊಂಡು ಶಿವಜ್ಞಾನದಿಂದೆಳ್ಚತ್ತು ಕಣ್ದೆಱೆದು ಮುಂದಿರ್ದ ಬಲಮಂ ಕಂಡು,

ಚಂಪಕ

ಹರನ ಸಮಾಧಿಗಿಂತಿದನುಕೂಲತೆಯಲ್ಲ ವಿರೋಧವೃತ್ತಿಯಂ
ನೆರಪುವರಾರಿದಾರ ಬಲಮಾರ ಮದೋನ್ನತಿಯಾರ ಲೋಕಭೀ-
ಕರರವವಾರ ಸಂಭ್ರಮವಿದಾರ ಮರುಳ್ತನಮೆಂದು ನಂದಿಕೇ-
ಶ್ವರನತಿಕೋಪದಿಂ ಮದನಸೇನೆಯನೀಕ್ಷಿಸಿದಾ ಕ್ಷಣಾರ್ಧದೊಳ್ ೯

ಅಳಿ ಮಲ್ಲಳಿಗೊಂಡುವು ಕೋ-
ಕಿಳನಿಕರಂ ವ್ಯಾಕುಳಾಂಗಮಾದುವು ಚಂದ್ರಂ
ಕಳೆಗುಂದಿ ಕಂದಿದಂ ಕೋ-
ಮಳೆಯರ್ ವಿಹ್ವಳವಿಧಾನಮಾನಸರಾದರ್ ೧೦

ಮತ್ತಮಲ್ಲದೆ,

---

೧. ಸಂದಣಿಸಿ ( ಕಾ. ಅ. ) ೨–೨. ಮಾಕಂದ ಮಾತಂಗ (ದಾ.) ೩–೩. ಬಲಮೊಬ್ಬುಳಿಗೊಂಡು ಜೊಬ್ಬೆಗೊಟ್ಟಬ್ಬರಿಸಿ ( ಅ. ) ೪. ವ್ಯಾಕುಳಂಗಳಾದುವು (ಕಾ. ಬಿ. ಯು.) ೫. ವಿತಾನ ( ಬ ಬಿ. ಕೊ. )

ಉತ್ಪಲ

ಕೀರುತರಂಗಮೋಡಿದವು ಚೂತಗಜಾವಳಿ ಘೀಳಿಡುತ್ತೆ ಕಾಂ-
ತಾರದೊಳೆಯ್ದೆ ಬಿಳ್ದುವು ಸಮೀರನಡಂಗಿದನಾ ವಸಂತಕಂ
ಘೋರವನಂಗಳೊಳ್ ಪುಗುತೆ ಮೆಯ್ಗರೆದಂ ಕಳಹಂಸಮಾಲೆ ಕಾ-
ಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುವದ್ಭುತಂ ೧೧

ಇಂತು ಕಂತುರಾಜನ ಚತುರಂಗಬಲಂ ದಿವಸೇಂದ್ರನ ಮುಂದಣ ತಮಃಪಟಲ-
ದಂತೆ ನಂದೀಶ್ವರನ ಕೋಪದ [1]ಕಡುಗಾಯ್ಪಿಂ ನೋಡೆ ನೋಡೆ ಮಾಯವಾಗೆ,

ಮುಡಿದಂ ಮದನಂ ತನ್ನೊಳ್
ಬೆಡಂಗಿದೇನೀ ಗಣೇಶನೀ ತೆಱನಿನ್ನಾ
ಮೃಡನಂ ನಡೆದೆಸುವೊಡೆ ಸಂ-
ಗಡವಾರಾರಳವದಾರಶಕ್ಯಮಶಕ್ಯಂ ೧೨

ಇಂತೆನುತುಂ ಕಂತುರಾಜಂ ಸಂತಾಪದಿಂ ಚಿಂತಿಸುತಿರ್ಪಿನಮಿತ್ತಲ್,

ಮಹಾಸ್ರಗ್ಧರೆ

ಬರುತಿರ್ದಳ್ ಮುಂದೆ ಕಾಂತಿಪ್ರದೆ ಸದಮಳೆ ಸತ್ಸ್ವರೂಪೆ ಸತ್ಯಾ-
ಕರೆ ನಿತ್ಯಾನಂದೆ ಚಂದ್ರಾಭರಣನ ಸುಖಸಂಪತ್ತಿ ರುದ್ರಾರ್ಚನಾವಿ-
ಸ್ತರೆ ವಿಶ್ವಾರಾಧ್ಯೆ ಕಾರುಣ್ಯದ ನೆಲೆವನೆ ಶರ್ವಾಣಿ ಗೀರ್ವಾಣಮೌಳೀ-
ವರರತ್ನವ್ರಾತಸಂಘಟ್ಟಿತಪದೆ ನಗಸಂಭೂತೆ ಸಂಪ್ರೀತಿಯಿಂದಂ ೧೩

ಬರೆ ಕಣ್ ಬಂದಂತು ಸಿರ್ ಬಂದವೊಲತಿಮುದಮಂ [2]ತಾಳ್ದಿ ಬಾಳ್ದಿರ್ದ ಶೋಭಾ-
ಕರನಷ್ಟಾಂಗಪ್ರಣಾಮಂ ಬೆರಸು ಗಿರಿಜೆ ಗೌರೀ ಜಗನ್ಮಾತೆ ಸರ್ವೇ-
ಶ್ವರಿ ದಿವ್ಯಜ್ಞಾನಿ ನಾನಾಗಮವಿದೆ ಸದಲಂಕಾರೆ ಸಾರಾಂಗಿ ವಿಶ್ವೋ-
ದರೆಯೆನ್ನಂ ರಕ್ಷಿಸೆಂದೀಕ್ಷಿಸಿ ಮಿಗೆ ಪೊಗಳ್ದಂ ಬಾಷ್ಪದೃಕ್ ಪುಷ್ಪಚಾಪಂ ೧೪

ಅಂತು ದರ್ಪಕಂ ಶೂರ್ಪಕಮರ್ದನನಾಪ್ಪುಗುಂದಿ ಕಾರ್ಪಣ್ಯದಿಂ ನಗ-
ತನೂಜೆಯಂ [3]ಪೊಗಳುತ್ತುಂ ಮತ್ತಮಿಂತೆಂದಂ

೧. ಕಡುಗಾಯ್ಪಿಂದೊಡನೊಡನೆ ( ಕಾ. ಕ. ). ೨. ತಾಳ್ದು ( ಕಾ. ಬೆ. ಯು. ). ೩. ಪೊಗಳ್ದು ( ಕಾ. ಬೆ. ಯು )

ಗಿರಿಶನ ತಪಮಂ ಕಿಡಿಸಲ್
ಮುರರಿಪು ಕಳುಪಿದೊಡೆ ಬಂದು ಹೇಮಾಚಳಮಂ
ಭರದಿಂದೆ ಮುತ್ತೆ ನಂದೀ-
ಶ್ವರನಿಂದಂ ಸಕಲಸೇನೆಯಳಿದಾನುಳಿದೆಂ ೧೫

ತಾಯೇ ತವರೇ ಕೇಳೆ-
ನ್ನಾಯುವೆಯೆನ್ನಸುವೆ ಕಾವುದೆಂದೊಱಲುತ್ತುಂ
ಬಾಯಳಿವ ಮದನನಂ ಕಾ-
ತ್ಯಾಯನಿ ದಯೆಯಿಂದೆ ನೋಡಿ ನಯದಿಂ ನುಡಿದಳ್ ೧೬

ಅಱಿದೆಂ ನಿನ್ನಯ ಬರವಂ
ಕಱಿಗೊರಲನ ತೀವ್ರತಪಮನೆಳ್ಬಟ್ಟುವುದೀ
ತೆಱದಿಂದೆನ್ನಿಷ್ಟಮದೆ-
ನ್ನೆಱಕೆಯದೆನ್ನಿಚ್ಛೆಯೆನ್ನಲಾಭಂ ಲೋಭಂ ೧೭

ನಾನಾವಿಧದಿಂ ರುದ್ರನ-
ನೂನತಪೋಭರದ ಬೆಸುಗೆಯಂ ಬಿಡಿಸೊಲವಿಂ
ಶ್ರೀನಂದನ ನೀನಂಜದಿ-
ರಾನಿರ್ದಪೆನಾನೆ ರಕ್ಷೆಯಾನೆ ಸಹಾಯಂ ೧೮

ಎಂದಗಜೆ ಬೆಸಸೆ ಕಾಮಂ
ಪಿಂದಣ ಪರಿಭವಮನುಡುಗಿ ತಳೆದತಿಮುದಮಂ
ಸಂದಣಿಸುತೊಡನೊಡನೆ ನಡೆ-
ತಂದಂ ಪುಷ್ಪಕದ ನೆಳಲ ಕರ್ಪಿನ ಮಱಿಯೊಳ್ ೧೯

ಆ ಸಮಯದೊಳ್,

---

೧. ಯೆನ್ನುಸುರೆ ( ಬಿ. ಯು. ). ೨.೨. ಸುಖಮುದೆನ್ನಯ ಲಾಭಂ ( ಕ ). ೩. ನುಳಿದು (ಬಿ. ಕೊ). ೪. ಕಳೆ ( ಕಾ. ಕ. ದಾ. ಯು. ).

ಮುಗಿದ ಮನಂ ಮುಗಿದ ಕರಂ
ಮುಗಿದಕ್ಷಿ[1]ಗಳಲರ್ವ ಪುಳಕಮಲರ್ವಾನಂದಾ-
ಶ್ರುಗಳಲರ್ವ ಭಕ್ತಿ ತನ್ನೊಳ್
ಸೊಗಯಿಸೆ ನಂದೀಶನಿರ್ದನುತ್ತಮಭಕ್ತಂ ೨೦

ಅಂತಿರ್ದ ನಂದೀಶನಂ ಚಂದ್ರಾನನೆ ಕೃಪೆಯಿಂದಂ ನೋಡುತ್ತುಂ ಶಿವಾರ್ಚನಾತತ್ಪರೆ [2]ಪುಷ್ಪೋಪಚಯಕ್ಕೆ ಬಿಜಯಂಗೆಯ್ದಳಿತ್ತಲ್ ಪುಷ್ಪಚಾಪಂ ನಂದೀಶನ ಕಾಪಿನ ಸೀಮೆಯಂ ಕಳೆದು,

ಉತ್ಪಲ.

ಬಂದು ಮತಂಗಪರ್ವತಮನೇಱಿ ಮಹೇಶನ ವಾಮಭಾಗದೊಳ್
ನಿಂದು ವಿರಾಜಿಸಿರ್ದ ರತಿಯಂ ಕೆಲದೊಳ್ ನಿಲವೇಳ್ದು ಶೌರ್ಯವೀ-
ರ್ಯಂ ದಳವೇಱೆ ಮಿಾಱೆ ನಭದೊಳ್ ಸುರಸಂತತಿ ನೋಡಿ ಭಾಪು ಭಾ-
ಪೆಂದೆನೆ ಮುಂದೆ ಪುಷ್ಪಶರನೀಕ್ಷಿಸಿದಂ ನಿಟಿಲಾಕ್ಷಲಕ್ಷ್ಯಮಂ ೨೧

ಅಂತು ನೋಡಿ,

ಅತುಳಬಳನಪ್ರತಿಮನೂ-
ರ್ಜಿತಶೌರ್ಯಂ ಕರ್ಬುವಿಲ್ಲನೆಡಗೆಯ್ಯೊಳ್ ಮಂ-
ಡಿತಮೆನೆ ಪಿಡಿದಾಹಾ ರತಿ-
ಪತಿ ನಾರಿಯನೋವಿ ನೀವಿ ಜೇವೊಡೆವಾಗಳ್ ೨೨

ವ್ರತಿಗಳ್ ಮನುಗಳ್ ಮುನಿಗಳ್
ಯತಿಗಳ್ ಪೆಡೆವಳ್ಳಿ ಬಳ್ಳಿ ಸುಗಿದಗಿದು ಕರಂ
ಮತಿಗೆಟ್ಟರೆ ಧೃತಿಗೆಟ್ಟರ್
ಗತಿಗೆಟ್ಟರ್ ಬುದ್ಧಿಗೆಟ್ಟರುನ್ನತಿಗೆಟ್ಟರ್ ೨೩

---

೧. ಗಳಲರ್ದ ಪುಳಕಮಲರ್ದಾನಂದಾ (ಕಾ.) ೨. ಪುಷ್ಪಾಪ (ಕಾ. ದಾ. ಯು.)

ಅಂತಿಕ್ಷುಧನುಷ್ಟಂಕಾರರವದಿಂದಧಿಗತಪರಮಾರ್ಥರೆನಿಪ ಜಿತೇಂದ್ರಿಯರ್ ನಿಕಾರಚಿತ್ತರಾಗುತ್ತುಮಿರಲಿತ್ತಲ್ ಕುಸುಮಾಯುಧಂ ವಿಷಮಾಕ್ಷನನಿಸಲೆಂದು ಸಾಹಸಚಿತ್ತನುತ್ಸಾಹಿಸುತಿರ್ಪಾಗಳ್,

ಪಸರಿಸಿ ಪರ್ಬಿದ ನೀಡಡಿ
ಕುಸಿದಂಗಂ ನೀಳ್ದ ದಂಡೆ ನೆಗೆದ ಭುಜಾಗ್ರಂ
ಕುಸುಮಶರಾಕುಂಚಿತಕರ-
ಮೆಸೆದಿರ್ದುವು ದೃಷ್ಟಿ ಮುಷ್ಟಿ ಶರಸಂಧಾನಂ ೨೪

ಆ ಸಮಯದೊಳ್,

ಶೃಂಗಾರಂ ಕೋಡಿಟ್ಟುದೊ
ಜಂಗಮಲತೆ ವೃತ್ತಮಾಯ್ತೊ ಲಾವಣ್ಯಂ ಶೌ-
ರ್ಯಾಂಗಂಬಡೆದುದೊ ಪೇಳೆನೆ
ಪಿಂಗದ ನೆಱೆ ತೆಗೆದು ಪುಷ್ಪಚಾಪಂ ನಿಂದಂ ೨೫

ಹರಿಯಜರರಿದರಿದೆನೆಯಂ-
ಬರತಳದೊಳ್ ಕಲಹಲಂಪಟಂ ನಾರದನಾ-
ರ್ದಿರೆ ಕಾಮಂ ಸಾಯಲ್ ಬ-
ಲ್ಲರ ದೇವಂ ತೊಟ್ಟನೊಂದು ಸರಲಂ ಬಿಟ್ಟಂ ೨೬

ಅಂತು ನನೆಗಣೆಯಂ ತೊಟ್ಟು ವಿಕ್ರಮುಮಂ ಮುಂತಿಟ್ಟು ಕೇಣಮನಿಂಬಿಟ್ಟು ಕಲಹಮನೊಡಂಬಟ್ಟು ಭಾಳಾಕ್ಷನಂ ಲಕ್ಷಿಸಿ ನೋಡಿ,

ಅಜ್ಞತೆಯಿಂ ಸಕಳಕಳಾ-
ಭಿಜ್ಞನನಖಿಳೈಕತಾತನಂ ಮದನಂ ದಿ-
ವ್ಯಜ್ಞಾನಿಯನಿರದುಱೆ ಸ-
ರ್ವಜ್ಞನನುನ್ಮದನಬಾಣದಿಂ ತೆಗೆದೆಚ್ಚಂ ೨೭

---

೧. ತೊಟ್ಟಂ ( ಕಾ. ಬ. ಅ. ಕ. ); ಭರದಿಂ ( ಗ. ಬಿ. ಯ. ಸ. ಕೊ. ) ೨. ದಾತನಂ ( ಬ. ) ೩. ನಂಜದೆ ( ಗ. ಕೊ. )

ಎಚ್ಚೊಡೆ ತಪೋಮರೀಚಿಯ-
ನುಚ್ಚಳಿಸಲ್ಕಾಱದಿತ್ತ ತಿರುಗಿದ ಶರಮಂ
ಚೆಚ್ಚಱದೀಕ್ಷಿಸಿ ಛಲದಿಂ-
ದೆಚ್ಚಂ ಪಂಚೇಷು ಮದನಶರದಿಂದಾಗಳ್ ೨೮

ನೀಡಾಗದೆ ಮದನಶರಂ
ನಾಡೆಯುಮುರದೆಯ್ದೆ ಹರನ ಹತ್ತಿರೆ ಬೀೞು-
ತ್ತೋಡಿಬರೆ ಕಂಡು ಕಾಮಂ
ಹೂಡಿದನುಣ್ಮುಗ್ಮೆಸುತ್ತೆ ಮೋಹನಶರಮಂ ೨೯

ಇದು ಹರಿಯಜಸುರಪತಿಗಳ
ಮದಮುಡುಗಿಸಿತೀ ಶರಂ ಕರಂ ಮೂಱುಂ ಲೋ-
ಕದ ಚಿತ್ತಮನಲ್ಲಾಡಿಸಿ-
ತಿದೆಕೊಳ್ಳಿದೆಕೊಳ್ಳೆನುತ್ತೆ ಮನ್ಮಥನೆಚ್ಚಂ ೩೦

ಅಂತೆಸೆ ಮೋಹನಶರವಾ-
ರ್ಗಂ ತಡೆಯದೆ ಶೂಲಧರನ[೧] ಬಹಿರಂಗಮನಂ-
ತಂತೆ ನಸು ಸೋಂಕಿ ಬರುತಿರೆ
ಸಂತಾಪನಬಾಣದಿಂದೆ ರತಿಪತಿಯೆಚ್ಚಂ * ೩೧

ತಿಗೆದೆಚ್ಚೊಡೆ ಸಂತಾಪನ-
ಮಗಲದೆ ಪರಿತಂದು ಹರನ ಮನದೊಳಗಂ ಮೆ-
ಲ್ಲಗೆ ಮುಟ್ಟಿ ಮುಟ್ಟಲಣ್ಮದೆ
ಮಗುೞ್ದುಱೆ ಬರೆ ಕಂಡು ಮನ್ಮಥಂ ಮುಳಿದಾಗಳ್ ೩೨

೧. ಬಂದು ಶಿವನ ( ಅ ) * ೩೧ ನೆಯ ಪದ್ಯವು ಬ. ಪ್ರತಿಯಲ್ಲಿಲ್ಲ.

ಲೋಕಕ್ಕದ್ಭುತನೆನಿಲೆಲೆ ಪಿ-
ನಾಕಿಯ ತಪಮಿನ್ನುಮೆನ್ನಿದಿರೊಳಿರ್ದಪುದೆಂ-
ದಾಕರ್ಣಿಂ ಬರೆತೆಗೆದು ವ-
ಶೀಕರಣಾಸ್ತ್ರದಿನನೂನವಿಕ್ರಮನೆಚ್ಚಂ ೩೩

ಇಸೆ ಬಂದು ವಶೀಕರಣಂ
ಸಸಿಯಂ ಸೂಡಿದನ ಕಮಲವಿಮಲಜ್ಞಾನಾ-
ವಸಥಪರಂಜ್ಯೋತಿಯ [1]ಕಾ-
ಲ್ದೆಸೆಯಂ ಕಾಣದೆ ಮಗುಳ್ದು ಬರೆ ಬೆಜಗಾದಂ ೩೪

ಓಹೋ [2]ಉನ್ಮದನಮದನ-
ಮೋಹನಸಂತಾಪನಂ ವಶೀಕರಣಾಸ್ತ್ರ-
ವ್ಯೂಹಂ ವ್ಯರ್ಥಮಿದೆಂದು-
ತ್ಸಾಹಂಗುಂದುತ್ತೆ [3]ಮದನನದಿಂತೆಂದಂ ೩೫

ಟಂಕಾರಾಲ್ಪಧ್ವನಿಯಿಂ
ಕಿಂಕುರ್ವಾಣತೆಯನೆಯ್ದುವರ್ ಮುನಿಗಳ್ ನಿಃ-
ಶಂಕನನಚಳಿತನಂ ಹರ-
ನಂ ಕಂಡೆಂ ಧರೆಗೆ ಚಿತ್ರಮತುಳಚರಿತ್ರಂ ೩೬

ತೆಜಹುಗುಡನಚಳನನ್ಯಮ-
ನಱಿಯಂ ನಿರುಪಮಸಮಾಧಿಯುಕ್ತನಭೇದ್ಯಂ
ಕುಱುಹಿಲ್ಲೆನುತುಂ ಬಿಲ್ಲುಂ-
ಬೆಱಗಾಗಿರ್ದಂ ರತೀಶನಸ್ತ್ರವಿಳಾಸಂ ೩೭

---

೧. ಕಾ | ಳಸೆಯುಂ ( ಮ. ಬ. ) ೨. ಉನ್ಮದಮದನಸ ( ಕಾ. ); ಉನ್ಮದಮದನಂ ( ಅ. )
೩ ಮನದೊಳಂದಿಂತೆಂದಂ ( ಕಾ. ಬಿ. )

ಈ ತೆಱದಿಂ ಬೆಱಗಾಗಿ ನಿ-
ಶಾತತಪೋಗಾತ್ರರ್ಧೆಂ[1]ನನೆಸಲಾಱದ ಪೂ-
ಜಾತನನೀಕ್ಷಿಸಿ ಗಗನದೊ-
ಳಾತುರಿಸುವ ಹರಿಯಜರ್ಗೆ ನಾರದನೆಂದಂ ೩೮

ಜಲದೊಳಗಣ ಜಲಜದವೋಲ್
ತಿಲದೊಳಗಣ ತೈಲದಂತೆ ಕಾಷ್ಠದ ನಡುವು-
ಜ್ಜ್ವಲಿಸುವ ಶಿಖಿಯಂತೊಪ್ಪುವ-
ಚಲಶಿವನಂ ಕಾಮನೆಸುಗೆ ಕೆಯ್ಕೊಂಡಪುದೇ ೩೯

ತ್ರಿಣಯನನಂ ಹರನಂ ನಿ-
ರ್ಗುಣನಂ ಪಡಿಪಡ ರತೀಶನಿಸುವನೆ ಹೋ ಜೇ-
ಡಣಕದ ಮಾತೆಲ್ಲಿಯದೆ-
ತ್ತಣ ಕಾಮನದೆತ್ತಣಭವನೆತ್ತಣ ಬಾಣಂ ೪೦

ಎಂದು ಗಗನಾಂಕಣದೊಳ್ ಕುಣಿವ ಸಂಗ್ರಾಮಲಂಪಟನಪ್ಪ ನಾರದಮುನೀಂದ್ರಂ ನಾರಾಯಣನೀರಜಸಂಭವರ್ಗೆ ನಲಿನಲಿದು ಪೇೞುತಿರ್ಪನಿತ್ತಲ್.

ಮತ್ತೇಭ.

ನೆಡೆತಂದಳ್ ಶಿವಪೂಜೆಗೆಂದಗಜೆ ಪುಷ್ಪವ್ರಾತಮಂ ಕೊಂಡು ಸಂ-
ಗಡದೊಳ್ ಬರ್ಪ ವಿಲಾಸಿನೀನಿಕರದಿಂ ಸೌರಭ್ಯಲೋಲುಪ್ತಿಯಿಂ
ಗಡಣಂಗೊಂಡ ಶಿಳೀಮುಖಪ್ರಕರದಿಂ ಸು[2]ಯ್ಗುಂಪಿನೊಳ್ ಸಾರ್ದು ಮುಂ-
ಗುಡಿಯೊಳ್ ತೀಡುವ ದಕ್ಷಿಣಾನಿಲನಿನೊಪ್ಪಂಬೆತ್ತ ವಿ[3]ಸ್ತಾರದೊಳ್ ೪೧

೧. ಪರನನಿಸಲಾಱದ ( ಕಾ. ಬಿ ) ೨. ಸುಯ್ಗುಂಪಿನೊಳ್ ಸೇರ್ದು ( ಮ. ಬ. ); ಸುಯ್ಗುಂಪುಮಂ ಪೀರ್ದು ( ಬಿ ). ೩ ವಿಸ್ತಾರದಿಂ ( ಓ. ).

ಉತ್ಪಲ

ಬಂದು ನವೀನಪುಷ್ಪಕುಲಮುಂಡನಮುಂ ಜಡೆಯೊಳ್ ಭುಜಂಗಳೊಳ್
ಸಂದ ಕರಂಗಳೊಳ್ ಶಿವನ ತೋಳೊಳುರಃಸ್ಥಳದೊಳ್ ಪದಂಗಳೊಳ್
ನಿಂದು ವಿಳಾಸದಿಂದಗಜೆ ಸಿಂಗರಿಸುತ್ತೆ ಕಟಾಕ್ಷಕಾಂತಿಯೊಳ್
ಸಂದಣಿಗೊಳ್ವ ಕಾಮಕುಲಮುಂದೊಗೆಯುತ್ತಿರೆ ನಾಡೆ ನೋಡಿದಳ್ ೪೨

ಅಂತು ನೋಟದೊಳ್ ಕೋಟ್ಯನುಕೋಟಿಕುಸುಮಾಯುಧರ್ ಪುಟ್ಟುತ್ತಿರೆ ಪುಷ್ಪಾಂಜಲಿಯಂ ಪಿಡಿದು ಕಪರ್ದಿಯ ತಪಮೆಂಬ ಶಶಿಕಾಂತಶಿಳಾತಳದೊಳ್ ಬಿಳ್ದ ಚಂದ್ರಕರಂಗಳಂತೆಯುಂ ಶಂಭುವಿನನೆಳ್ಚಱಿಕೆಯೆಂಬ ಚಂದ್ರೋದಯಮುಪ್ಪನ್ನಂ ಕೈರಿಸದೆ ಪರಿದು ಮುತ್ತುವ ಚಕೋರಿಗಳಂತೆಯುಂ ಹರನ ಕರಣಂಗಳೆಂಬ ಬಲ್ಲಸೆ-ಗಳಲರ್ವನ್ನಮಿರಲಾಜಿವೆ ಪರಿದೆಱಗಿ ಸುತ್ತಿ ಮುತ್ತುವ ಮಧುಕರಂಗಳಂತೆಯುಂ ಜೇಗವಿಾಗಳೆ ನಿನ್ನ ತಪಮುಂ ಪಕ್ವತರಮುಂ ಮಾಳ್ಪೆನೆಂಬ ಭೀಂಕೃತಿಯಂ ನುಡಿದು ಪರಿದು ಬೆರಸುವ ಕುಸುಮಶರಂಗಳಂತೆಯುಮಿರ್ದು ತನ್ನ ಸರಸದೃಷ್ಟಿಗಳಿಂ ಹರನಂ ನೋಡುತುಂ ತಪೋಭಂಗಮುಂ ಬಿಡಿಸಲಿರ್ದ ಮೃಡಾನಿಯಂ ಕುಸುಮಕೋದಂಡಂ ಕಂಡು,

ಇನ್ನಂಜೆನಂಜೆನಾಹಾ
ಉನ್ನತಬಲವಾಯ್ತೆನುತ್ತೆ ವಿಭ್ರಮಬಳಸಂ-
ಪನ್ನಂ ಕಾಮಂ ತೆಗೆದಂ
ತನ್ನಗ್ಗದುದಂಚಪಂಚಬಾಣಮನಾಗಳ್ ೪೩

ನಳನಳಿಸುವಿಕ್ಷುಚಾಪದೊ-
ಳಳವಡೆ ನಡೆನೋಡಿ ಹೂಡುತೈದಂಬಂ ಸಂ-
ಚಳಿಸದ ಶಂಕರನ ಮನಂ
ಚಳಿಯಿಪುದಂ ಸಾರ್ದು ಪಾರ್ದು ತೆಗೆ ನೆಱೆದಿರ್ದಂ ೪೪

---

೧. ಕಳೆಯುಂ ( ಕಾ. ). ೨. ಘು ( ಕಾ ). ೩. ಭವಾನಿಯುಂ ( ಅ ). ೪. ವಿಕ್ರಮ ( ಅ ).

ಮಹಾಸ್ರಗ್ಧರೆ.

ತೆಗೆದಾಕರ್ಣಾಂತರಂ ಶಂ[1]ಬರರಿಪು ನೆರೆ ಹೂಡಿರ್ದ ಪುಷ್ಪಾಸ್ತ್ರದೊಂದು-
ಜ್ಜುಗಮಾಕಾಶಸ್ಥನಾಕೌಕರೊಳೊದವಿದನೂನಾರ್ತಿ ಕೂರ್ತಿಯ್ದೆ ನಿಂದಿ-
ರ್ದಗಜಾಚಿತ್ತಾಭಿಲಾಷಾವಿತತಿ ನೆರೆದು ಭೂತೇಶಚಿತ್ತಾಂತದೊಳ್ ಪೊ-
ಕ್ಕು ಗಭೀರೋದ್ಯತ್ತಪೋಬೀಜಮನತಿಭರದಿಂದೊತ್ತಿ ಮುತ್ತಿತ್ತು ಸುತ್ತಂ ೪೫

ಇಂತು ಸಕಲಜಗದ್ಧಿತಾರ್ಥಮಪ್ಪ ಹರಿವಿರಿಂಚಿಗಳ ಮನದ ಬಯಕೆಯುಂ ಕಂದರ್ಪನ ಪಂಚಬಾಣಾನುಸಂಧಾನಮುಂ ಪಾರ್ವತಿಯ ಮನೋರಥಮುಂ ಮುಪ್ಪುರಿಗೊಂಡು ಶಿವನ ನಿಸ್ಪ್ರಯಾತ್ಮಕನಿರುಪಾಧಿಕನಿರಾವರಣಸ್ವಾ[2]ನುಭವಸಂವೇದ್ಯ-ಸ್ವಯಂಪ್ರಕಾಶಮಂ ಸುತ್ತಿ ಮುತ್ತಿ ಪತ್ತಿ ಬಿಗಿಲ್ತು ಬಿಡದಿರೆ ನಿರ್ವಿಕಾರಸ್ವರೂಪನಪ್ಪ ಪರಮಂಗೆ ಸ್ವಪ್ನೋಪಮಾ[3]ಯಂ ಮಮತೆ ತಲೆಯೇಱಿ ಜೀವನಾಗಿ ಜೀವನಿಂ ಪ್ರಾಣಾನಿಲಂ ಪ್ರಾಣಾನಿಲನಿಂ ಚಿತ್ತಂ ಚಿತ್ತದಿಂದಹಂಕಾರಂ ಅಹಂಕಾರದಿಂ ಬುದ್ಧಿ ಬುದ್ಧಿಯಿಂ ಮನಂ ಜನಿಯಿಸಿತ್ತಂತರಂಗಬಹಿರಂಗಭಾವಮಂ ನೆನೆಯೆ ನೆನೆವಲ್ಲಿಂ ಮುನ್ನಂ ಮದನನ ಪಂಚಬಾಣಂ ಪರಿತಂದು ನೆರೆದಡಿಸಿ ಬೆರಸಿ ಕವಿದು ಮ[4]ನಮುನಿರ್ಮಯ್ಗೊಂಡು ಸಹಸ್ರಮುಖದಿಂ ಸಂಚಳಮನೀಯೆ ನಿಲಲ್ಬಾರದೆ ತಪೋಭರದ ಬೆಸುಗೆ ಬಿಡುವಂತೆ ಮೆಯ್ಯ ಸಂಪುಟಂ ಬಿರ್ಚಲೊಡಂ ನೋಡಿ ನೋಡಿ ನೋಡಲಣ್ಮದೆ ಪುಷ್ಪಶರಮಂ ನೂರ್ಮಡಿಸುವಂತೆ ಪುಷ್ಪಾಂಜಲಿಯಂ ಕೊಟ್ಟಂತೆ ಕಂಪಿಸಿ ಮುಂತೆ ಮೆಯ್ಯಿಕ್ಕಿರ್ದ ಗಿರಿಜಾತೆಯಂ ಭೂತೇಶ್ವರಂ ಕಂಡಾನೇಕೆಯಾ [5]ಮಾನಿನಿಯೇಕೀ ತಪದೊಳೆಲ್ಲಿಯದೆತ್ತ[5]ಣಿಂ ಬಂದುದಾರಿಂದಾದುದೆಂದು ಕಾಮನಿರ್ದ ವಾಮಭಾಗಮಂ ನಿಟಿಲಾಕ್ಷಂ ನಸುಗೋಪದಿಂ ನೋಡಿದಾಗಳ್,

ನೋಡದ ಮುನ್ನಂ ಕೋಪಂ
ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್
ಕೂ[6]ಡೆ ಬಳೆಬಳೆದು ಸುಳಿಸುಳಿ
ದೀಡಿಜಾದೊಳಗೊಳಗೆ ಘುಳುಘುಳಿಸಿ ಕು[7]ದಿದಾಗಳ್ ೪೬

---

೧. ಶಂಕರ (ಅ. ಓ. ೨ ಸ್ವಾನುಭಾವ (ಕಾ. ಬಿ. ಯ. ಬ.) ೩ ಮಾಹಃ (ಮ. ಬ. ಯ. ಕೊ.) ೪. ಮನಮನೀಬುಗೊಂಡು (ಅ.) ೫–೫ ಮಾನಿನಿಯೇಕೆಯಾ ತಪಮೆಲ್ಲಿಯದೆತ್ತಣಿಂ (ಕಾ.) ೬. ಮೂಡಿ (ಕೊ. ಸೆ.) ೭. ಮುಳಿ (ಕಾ. ಬಿ. ಬ. ಯ. ಅ. ದ.. ಸೆ.)

ಚಂಪಕ

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋಱಿದತ್ತು ಬಾನ್-
ಗೊಗೆದುದು ನಿಂದು ಪೊಂಬೆಳಗುಮಂ ಪರಪುತ್ತದು ಧಂ ಧಗಿಲ್ ಧಗಿಲ್
ಧಗಿಲೆನುತಟ್ಟಿತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ-
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ವನಾ * ೪೭

ಇಟ್ಟಣಿಸಿ ಘುಡುಘುಡಿಸಿ ಕಿಡಿ-
ಗುಟ್ಟಿ ಕನಲ್ದಡಸಿ ಸಿಡಿಲ ಬಳಗದ ಮುಳಿಸಂ
ತೊಟ್ಟುದು ಬಿಸುಗಣ್ಣುರಿ ಪೊಱ-
ಮುಟ್ಟುದು ಸುಟ್ಟುದು ರತೀಶನಂ ನಿಮಿಷಾರ್ಧಂ ೪೮

ಗಗನದ ಹರಿಸುರಪತಿಗಳ್
ಜಗದ್ಧಿತಾರ್ಥಂ ಮಹೇಶ ಕರುಣಿಪುದೆಂಬ-
ನ್ನೆಗಮಿತ್ತಲ್ ಘುಱಿ ಘುಱಿ ಭುಗಿ
ಭುಗಿಲೆನೆ ನೆರೆ ಕಾಮನುರಿದು ಕರಿಮುಱಿವೋದಂ ೪೯

ತೊಟ್ಟನೆ ಭಾಳಾನಲನಿಱ-
ಡೊಟ್ಟಯಿಸಿಯೆ ಕುಸುಮಶರನನುಱುಪಿದ ಪದದೊಳ್
ಪುಟ್ಟಿತುಮಂ ಪೋದುದುಮಂ
ಸುಟ್ಟುದುಮಂ ಕಾಣಬಾರದಾಯ್ತಾ ಕ್ಷಣದೊಳ್ ೫೦

ಅಂತುಮಲ್ಲದೆ,

ಮತ್ತೇಭ.

ಅರರೇ ಭುರ್ಭುಗು ಭಾಪುರೇ ಭುಗುಭುಗು ಪ್ರಜ್ವಾಲೆ ಮಜ್ಜಯ್ಯ ದೇ-
ವ್ರರೆ ಮೇಘಾನಲವಿಸ್ಫುಲಿಂಗಮುಮ ಪ್ರದ್ಯೋತವಯ್ಯಯ್ಯ ಭೀ-
ಕರವಾಹಾ ಭಿಣಿಭಿಳ್ ಭಿಟಿಲ್ ಭಲರೆ ಭಾಳಾಭೀಳಮೆಂದೆಂದು ನಿ-
ರ್ಜರಲೋಕಂ ಬೆಱಗಾಗೆ ಸುಟ್ಟುದು ವಿರೂಪಾಕ್ಷಾಕ್ಷಿ ಕಂದರ್ಪನಂ ೫೧

---

೧. ನಂ ( ಕ. ) ೨. ಕೋಪಾನಳ ( ಕಾ. ಬಿ. ಯು. ) * ೪೭ ನೆಯ ಪದ್ಯವು ಮ. ಬ. ಯು. ಅ. ದಾ. ಕ. ಡ. ಒ. ಪ್ರತಿಗಳಲ್ಲಿಲ್ಲ.

ಸಂದಣಿಸಿ ಪತ್ತಿದುರಿ ಘುರಿ-
ಲೆಂದುರುಪಿದ ಬೇಗದಿಂದೆ ಉರಿದಾಕ್ಷಣದೊಳ್
ಬೆಂದ ನುಲಿಯಂತೆ ಮದನಂ
ಸಿಂದಿರೆ ಕಂಡಭವನೆಯ್ದೆ ಮುಳಿದಂ ತುಳಿದಂ ೫೨

ಜಯಶೀಲಂ ಪ್ರಭು ಪಾವಕ-
ನಯನಂ ವಿಷಕಂಠನಹಿವಿಭೂಷಂ ಕೋಪೋ-
ದಯನಭವಂ ಸ್ಮರಭಸ್ಮಾ-
ವಯವಂ ತಾನಾದನತುಳಬಳನಪ್ರತಿಮಂ ೫೩

ಇಂತತಿಸ್ವತಂತ್ರಂ ಶತಪತ್ರನೇತ್ರಪೂಜಿತಪಾದಂ ಹೇಮಕೂಟಾಗ್ರದ ಮತಂಗಪರ್ವತದೊಳ್ ಮದನನಂ ಸುಟ್ಟುರುಪುತ್ತನಂಗಭಸ್ಮೋದ್ಧೂಳಿತಗಾತ್ರನಾಗಿ,

ಮುಂತಿರ್ದೊಪ್ಪುವ ಗಿರಿಜಾ-
ಕಾಂತೆಯನೀಕ್ಷಿಸದೆ ನುಡಿಯಿಸದೆ ಸೊಂಕದೆ ನಿ-
ಶ್ಚಿಂತಂ ಸ್ವತಂತ್ರನಹಿಧರ-
ನಂತರ್ಧಾನಕ್ಕೆ ಸಂದನಲ್ಲಿಂ ಬಳಿಯಿಂ ೫೪

ಶಿವನಧಿಕಾಕ್ಷಕ್ರೋಧೋ-
ದ್ಭವಶಿಖಿಯಿಂ ಮದನನುರಿಯೆ ರತಿಗತಿಶೋಕಂ
ಕವಿದಳ್ಕಿದಳಿಂದುಗುಪ-
ಪ್ಲವಮಾಗೆ ಚಕೋರಿ ಕರಗಿ ಕೊರಗುವ ತೆಱದಿಂ ೫೫

ಇಂತು ಮನಮಳ್ಕಿ ತನು ಬಳ್ಕಿ ಕೋಡಿ [೧]ಕರಣಂ ಜಾಱಿ ಮತಿ ಕೆಟ್ಟು ರತೀದೇವಿಗತಿದುಃಖಂ ಪುಟ್ಟಿ ನಿಲಲಾಱದೆ ಕೊರಗುತುಂ ಪರಿದು ಬಂದು,

೧. ಕಣ್ ಜಾಱಿ (ಅ.)

ಬೆಂದಿರ್ದ ಕಾಮನಂ ಕಂ-
ಡಂದಳಲೊಳಗೇಱ ನುಡಿಯಲಱಯದೆ ನಿಲೆ ಶೋ-
ಕಂ ದಳವೇಱತೆ ಏಱಱತೆ
ಸಂದಣಿಸುತ್ತಳಿಸಿತಸ್ತ್ರರತಿಯಂ ರತಿಯಂ ೫೬

ಅದೆಂತೆಂದೊಡೆ,

ಎತ್ತಣ ಹರನೆತ್ತಣ ತಪ-
ಮೆತ್ತಣ ತಾರಕನ ಬಾಧೆ ಎತ್ತಣ ಬಿಸುಗಣ್-
ಎತ್ತಣುರಿ ಎತ್ತಣೆರವಿದು
ಎತ್ತಣ ಕೋಟಲೆಯನೆನಗೆ ಮಾಡಿದೆ ಮದನಾ ೫೭

ಎಳೆಯನೆ ಸುಕುಮಾರನೆ ಸದ-
ಮಳನೆ ಸುಖಪ್ರದನೆ ಸೊಬಗೆ ಸುರತರುವೇ ತತ್-
ಫಳಮೆ ಸುಧಾರಸಮೇ ನಿ-
ನ್ನಳವಱಯದೆ ನೊಸಲ ಕಣ್ಣ ಮುಸುಕಂ ತೆಱೆದಯ್ ೫೮

ಅಸ್ವಪ್ನರನತಿಘೋರತ-
ಪಸ್ವಿಗಳನಪಾರಮಹಿಮರಂ ವಿಮಳಾಚಾ-
ರಾಸ್ವಾದಿಗಳಂ ಗೆಲ್ದ ಮ-
ನಸ್ವಿ ಲಲಾಟಾಗ್ನಿಗೆಂತು ಸವಿದುತ್ತಾದಯ್ ೫೯

ಕಂತುವೆ ನೀನಿಂತಾದೊಡ-
ದೆಂತುಳಿವೆನದೆಂತು ಸಿಲ್ವೆನೆಂತೊಪ್ಪುವೆನಿ-
ನ್ನೆಂತುಸಿರ್ವೆನೆಂತು ಬಾಳ್ವೆನ-
ದೆಂತೀಕ್ಷಿಪೆನೆಂತು ಪೋಪೆನೆಂತಾನಿರ್ಪೆಂ ೬೦

---

೧ ಗೆಱಗಿ ( ಕಾ. ಬೆ. ಬ. ಕ. ಯ. ). ೨. ರ ( ಕಾ. ಬೆ. ಬ. ).

ಭಾವಿಸಿ ಭವನಂ ಕುಸುಮಾ-
ಸ್ತ್ರಾವಳಿಯಿಂದೆಚ್ಚು ಗೆಲ್ವೆಯೆಂದಿರ್ದೆಸಿದಿಂ-
ತೋ್ವೊ ನಿಟಿಲಾಗ್ನಿಯಿಂದಂ
ಜೀವುದನಾನೆತ್ತ ಬಲ್ಲೆನಲರ್ವಿಲ್ಲರಸಾ ೬೧

ಎಂದಳಲ್ದು ಮತ್ತಮಿರದೆ,

ಶಾರ್ದೂಲ.

ಲಾವಣ್ಯಂ ಲಯಮಾಯ್ತು ವಿಭ್ರಮವಿಳಾಸಂ ಮಾಯಮಾಯ್ತುಕ್ಕಟಾ
ಜೀವಂ ಬೆಂದುದು ಚೆಲ್ವು ಸತ್ತುದು ಸುಖಂ ಹಾಳಾಯ್ತು ಕಂದರ್ಪ ಸದ್-
ಭಾವಂ ಭಸ್ಮಮದಾಯ್ತು ಮೆಯ್ಮೆ ಮಡಿಯಿತ್ತುತ್ಸಾಹವಿಂಗಿತ್ತದಿ-
ನ್ನೇವೇಳ್ವೆಂ ನಡೆದೆತ್ತ ಸಾರ್ದೆನಿಳೆಗಿನ್ನೇನಪ್ಪೆನೆಂತಿರ್ಪೆನೋ ೬೨

ಎಲ್ಲಿತ್ತೊ ಶಶಿಯ ಬೆಳ್ಗೊಡೆ
ಎಲ್ಲಿತ್ತೋ [1]ಪೂತಸೊತ್ನಚೂತಗಜಂ ತಾ-
ನೆಲ್ಲಿತ್ತೊ ಪಂಚಬಾಣಮ-
ದೆಲ್ಲಿತ್ತೋ ಕುಸುಮ[2]ಚಾಪವಿಭ್ರಮಮೀಗಳ್ ೬೩

ಎಲೆ ಸುರತಕಾಮಧೇನುವೆ
ಎಲೆ ಸುರತಾಂಭೋಧಿಚಂದ್ರ ಎಲೆ ಸುರತಮಹೋ-
ತ್ಪಲಸೂರ್ಯ ಎಲೆ ಸುರತಸಂ-
ಕುಲಪರಮಾರಾಧ್ಯ [4]ಎತ್ತಡಂಗಿದೆ ಮದನಾ ೬೪

ಲಕ್ಷ್ಮಿಗೆ ನೆಱೆ ಪುಟ್ಟಿರ್ದಖಿ-
ಲಕ್ಷ್ಮಾಪತಿಯೆನಿಸಿ ಬಾಳ್ದು ಪುರಹರನ ಲಸತ್-
ಪಕ್ಷ್ಮಪುಟಾಗ್ರಂ ಬಿರ್ಚಿದ
ಸೂಕ್ಷ್ಮದ ಕಾಲದೊಳೆ ಘಳಿಲನುರಿದಯ್ ಮದನಾ ೬೫

---

೧. ನೂತ ( ಬಿ. ಮ. ಬ. ದಾ. ). ೨. ಇಕ್ಷುಚಾಪ ( ಕಾ. ಬಿ. ಬ. ಅ. ಯು. ) ೩. ಬಾಣ ( ಕಾ. ಅ. ಬಿ. ಬ. ಯು. ). ೪. ಯೆತ್ತಲಡಗಿದೆ ( ಕಾ. ಬಿ. ದಾ. ಕ. ಯು. ).

ಕೇಳೆಲೆ ಮನ್ಮಥ ಹಂಸೆಯ
ತೂಳದ ತಳ್ಪಂ ಕರಂ ಕಠಿನಮೆಂದೀಗಳ್
ಭಾಳಾಕ್ಷಿಯರಮನೆಯೊಳಾ-
ಭೀಳದ ದಳ್ಳುರಿಯ ಮಂಚದೊಳ್ ಪವಡಿಸಿದಯ್ ೬೬

ಅಂತುಮಲ್ಲದೆ,

ಹಾ ಮದನ ಹಾ [೧]ಮನೋಹರ
ಹಾ ಮಕರಪತಾಕ ಹಾ ಮಹಾವಿಭ್ರಮ ಹಾ-
ಹಾ ಮನ್ಮಥ ಹಾ ಸಮ್ಮದ
ಹಾ ಮತ್ಪ್ರಾಣೇಶ ಹಾ ವಿಳಾಸವಿನೋದಾ ೬೭

ಕುಸುಮಾಭರಣಾವಳಿಗಳ್
[೨]ಬಿಸಮಲ್ಲಂ ಪೊಱೆಯೆಂಬ ಸುಕುಮಾರತೆಯೊಳ್
ಬಿಸುಗಣ್ಣ ಮಿಸುಪ ಕೋಪದ
ಪೊಸತುಡಿಗೆಯನೆಂತು ಸೈರಿಸಿದೆ ಕಂದರ್ಪಾ ೬೮

ಮತ್ತಮಲ್ಲದೆ ಪಂಚಬಾಣನ ಸರ್ವಗುಣಂಗಳಂ ನೆನೆನೆನೆದು ಸೈರಿಸಲಾಱದೆ ಮತ್ತೆ ಮತ್ತೆ ಶೋಕಂಗೆಯ್ದು,

ಪಸಿವಱಿಯದೆ ತೃಷೆಯಱಿಯದೆ
ದೆಸೆಯಱಿಯದೆ [೩]ಮದನ ಮದನ ಪಲವುಂ ಕಾಲಂ[೩]
ಕುಸುಮದ ಲಿಂಗಮನೊಸೆದ-
ರ್ಚಿಸಿದ ಫಲಂ ಕಿರ್ಚಿನೊಳಗೆ ಬೇವಂತಾಯ್ತೇ ೬೯

---

೧. ಮನೋರಥ ( ಬಿ. ಬ. ). ೨. ಬಸಮಲ್ಲದ ( ಕಾ ); ಬಸಮಲ್ಲದೆ ( ಕ ). ೩–೩. ಮದನ ನೀನು ಪಲವುಂ ಕಾಲಂ ( ಯ. ); ನಿದ್ದೆಯುಱಿಯದಿರುಳುಂ ಪಗಲುಂ ( ಕೊ. ಬಿ. ); ಮದನ ಮಸದಿ ಪಲವುಂ ಕಾಲಂ ( ಅ. ಓ. ).

ಸುರತಶ್ರಾಂತಿಯೊಳೀಷತ್-
ಪರಿಸುಪ್ತಿಯನೆಯ್ದು ಸುಖದೊಳಾಸಿರೆ ನೀಂ ಪೆರ್ಚ್-
ಗರೆದಿನ್ನನಂದು ನೋಯಿಪ
ಪರಿ ತಾಂ ದಿಟಮಾದುದಿಂದು ಮನ್ಮಥಭೂಪಾ ೭೦

ಬೆಳಗಾಯ್ತುಪ್ಪವಡಿಸು ಬೆಳ-
ಗೇಗುವ ಮಣಿಮುಕುರಮಂ ನಿರೀಕ್ಷಿಸು ಹಂಸಾ-
ವಳಿಯಂ ನಡೆಪಾಡಿಸು ಕೋ-
ಕಿಳನಾದಮನಾಲಿಸು ನಿರದಿರ್ಪರೆ ಮದನಾ ೭೧

ಎಂದುಂ ಮುಳಿದೊಡೆ ತಿಳಿವಂ
ಮುಂದಿಟ್ಟಲ್ಲದೆ ಮದೀಶ ಮುಳಿಸಿಲ್ಲಿಲ್ಲೀ-
ಯಂದಂ ಪೊಸತಿಂದಿನ ಮುಳಿ-
ಸೆಂದಿನ ಮುಳಿಸಿನವೊಲಲ್ತು ಮದನನೃಪಾಲಾ ೭೨

ಪನ್ನಗಭೂಷನ ವಿಷಸಂ-
ಪನ್ನನ ನಿಷ್ಠುರಗುಣಂಗಳುರಿಪ್ಪುದುಚಿತಂ
ನಿನ್ನಂ ನಿನ್ನೀ ಸದ್ಗುಣ-
ಮೆನ್ನಂ ನೆರೆದುರಿಪಲೇಕೆ ಮನ್ಮಥರಾಜಾ ೭೩

ಎಂದು ಕುಸುಮಕೋದಂಡನ ಸುಧಾಮಯಸದ್ಗುಣಂಗಳನೆಣಿಸಿಯೆಣಿಸಿ ಪಲುಂಬಿ ಪಂಬಲಿಸಿ ಪಳಯಿಸಿ ಮತ್ತೆ ಮತ್ತೆ ಮಾಣದೆ,

ಚಂಪಕ.

ಮದಕರಿ ಎತ್ತ ಪೋದೆ ವರಮೂರ್ತಿ ಅದೆತ್ತಲದೃಶ್ಯಮಾದೆ ಮದ್-
ವದನಸರೋಜಭೃಂಗನೆ ಅದೆತ್ತಲಡಂಗಿದೆ ನೀನದೆತ್ತ ಮು-
ಳ್ಗಿದೆ ಮಧುಮಿತ್ರ ಎತ್ತ ಲಯವಾದೆ ಮದೀಶ್ವರ ಎತ್ತಣಕ್ರನು-
ಕ್ಕೊದವಿದೆ ಎತ್ತ ಸಾರ್ದೆ ಕಳಿದೆತ್ತಲಣಂ ತವಿಲಾದೆ ಮನ್ಮಥಾ ೭೪

---

೧. ತೊಳತೊಳಗುವ (ಕಾ). ೨ ಪೊಲಲ್ಲ (ಕಾ. ಬೆ. ಬ. ಮ.). ೩. ಭೂಷಣ (ಕಾ. ಬೆ. ಮ). ೪. ಕಾಣದೆ (ಅ).

ಎಂದಿಂತು ಶೋಕಿಸುತ್ತುಂ ವ್ಯಾಕುಲಚಿತ್ತೆ ವಲ್ಲಭವಿರಹಿತೆ ಸಕಳಸುಖವಿರಹಿತೆಯಪ್ಪ ರತೀದೇವಿ ನಿಂದಿರ್ದು ಬಿಸುಸುಯ್ದು ಬಸಿಱಂ ಹೊಸದು ಕೆಯ್ಯೆತ್ತಿ ದೆಸೆದೆಸೆಯಂ ನೋಡಿ,

ಮೊಱೆಯೋ ಮೊಱೆಯೋ ಶಿವಘೋ[1]
ಕಱೆಗೊರಲನ ಕಣ್ಣ ದಾಳಿ ಕುಸುಮಾಯುಧನಂ
ನೆಱೆ ಮುತ್ತಿತ್ತಯ್ಯೋ ಇದ-
ನಱಿವವರಿಲ್ಲಕ್ಕಟಾ ಕೃಪಾಳುಗಳಿಲ್ಲಾ * ೭೫

ನೆಲನೇ ನಭವೇ ಶಿಖಿಯೇ
ಜಲವೇ ರವಿಯೇ ಶಶಾಂಕನೇ ಮಾರುತನೇ
ಬಲವಳಿದವಳನನಾಥೆಯ-
ನಲಘುತರಾಘೌಘೆಯಂ ಪರೀಕ್ಷಿಸಿರೆನ್ನಂ[2] ೭೬

ವನದೇವತೆಯರಿರಾ ನಂ-
ದನದೇವತೆಯರಿರ ದೆಸೆಯ ದೇವತೆಯರಿರಾ
ಘನಪಾಪಂ ಪುದಿದಿರ್ದ
ವನಿತೆಯನೊಳಕೊಳ್ಳಿರೇ ಅನಾಥೆಯನೆನ್ನಂ ೭೭

ಎಂದಿಂತು ದೆಸೆದೆಸೆಗೆ ಕರೆಕರೆದು ಬಾಯಾಱಿ ಒಲ್ಲಳಿದು[3] ನಿಂದಿರಲಾಱದೆ ಕಾಲ್ ಕುಪ್ಪಳಿಸಿ ಭೊಂಕನೆ ಕುಳ್ಳಿರ್ದು ತನ್ನೊಳಗೆ ತೆಕ್ಕನೆ ತೀವಿ ತೆರೆಮಸಗುವ ಶೋಕರಸಮುರ್ಕಿ ಪೊಱಪೊಣ್ಮುದೆಂಬಂತೆ ಕಣ್ಣ ನೀರ್ ಕಱೆದೊತ್ತರಿಸಿ ಪರಿಯೆ ಮತ್ತೆ ಮತ್ತಳುತ್ತುಂ ಗಂಟಲುರ್ಬಿ ಸೆರೆ ಬಿಗಿದು ಕಣ್ ಕೆಂಪೇಱಿ ಮಿಕ್ಕು ನೆಗೆವ ಬಿಕ್ಕಿನೊಳ್ ಬೆರಸಿ ನಾನಾವಿಧದಿಂ ನಾಲಗೆಯೊಳ್ ಪೊಱಮಡುವ ಶಿಥಿಲಾಕ್ಷರಂ ಶೋಕಾಗ್ನಿಯೊಳ್ ಬೆಂದುಗಿದು ಸೀದು ಸೀಕರಿವೋಗಿ ಪೊರಳ್ದುರುಳ್ದು ಬರೆ ನೆಲೆಗೊಂಡ ಗದ್ಗದದಿಂ ಪಲುಂಬಿ ಪಳಯಿಸುತುಂ ಮತ್ತಂ ಮನ್ಮಥನುರಿದ ದುಃಖಾ-

೧. ಶಿವಘಾ (ಮ. ಬ.) ೨. ನಿರೀಕ್ಷಿಸಿರೆನ್ನಂ (ಕಾ. ಬೆ. ಯು. ಮಾ. ಕ.) ೩. ಬಲವಳಿದು (ಅ.)
* ೭೫ ನೆಯ ಪದ್ಯವು ಗ. ಪ್ರತಿಯಲ್ಲಿಲ್ಲ.

ನಳಸಿಂ ಚಿತ್ತಂ ಹೊತ್ತಿಯಹಂಕಾರಂ ಹೊಗೆದು ಬುದ್ಧಿ[೧]ಯುರಿದು ಮನಂ ಬೆಂದುರಿ-ಯುಸುರನುಸುರಿಕ್ಕೆ ಕೆಲಬಲದ ಮುಂದಣ ಗುಲ್ಮಲತೆಗಳ್ ಘಳಿಲನೆ ಘಱಿಘಱಿಲ-ನುರಿಯೆ ವಶಮಲ್ಲದ ದುಃಖದಿಂ ಬಿಸುಸುಯ್ಯುತ್ತುಂ ಮತ್ತಂ ಗ್ರಹಣಕ್ಕಂಜಿ ಗಗನ-ತಳದ ಮೃಗಧರಬಿಂಬಂ ಪೊಡವಿಯೊಳ್ [೨]ಬೀಳ್ದೊಡನೊಡನೆ ಬಿಡದೆ ಬೆಂಬತ್ತಿ ಕಡು-ವೇಗದಿಂ ಬಂದುರ್ವಿಯೊಳ್ ಸರ್ವಗ್ರಾಸಂಗೊಂಡು ನೆಲದೊಳಿಟ್ಟೊರಸುವ ರಾಹು-ಮಂಡಲದಂತೆ ಕೆದಱಿದ ಮುಡಿಕಟ್ಟು [೩]ಪೆಚ್ಚುವರೆದು ಮುಚ್ಚಿ ಮುಸುಂಕಿ ಫಾಳ-ತಳಮುಂ ಭೂತಳದೊಳಿಟ್ಟಾದ ನೋವಿಂ ತೇದುಕೊಳುತ್ತುಂ ಇಂತು ಕೇಳ್ವ ಪಶು-ಪಕ್ಷಿಮೃಗಗುಲ್ಮಲತೆವೃಕ್ಷಾವಳಿಗಳ್ಗೆ ಕರುಣಂ ಪುಟ್ಟುವಂತೆ ರತಿಯತಿಶೋಕಂಗೆಯ್ದು ದುಃಖಪ್ರಳಾಪಂಗೆಯ್ದು ಮೆಯ್ಯಿಕ್ಕಿ ಬಸಿಱಂ ಪೊಸೆದು ಚೇತನಂಗೆಟ್ಟು ಭೂತಳ-ದೊಳ್ ಬಿಳ್ದು ಕೆಚ್ಚುಗಟ್ಟಿದಳಲಿಂ [೪]ಮೂರ್ಛೆವೋಗಿ ಕೊರಲೊಳ್ ಹರಣಮಂ ಕಣ್ಣೊಳ್ ಕಾರ್ಪಣ್ಯಮಂ ಪಡಿಮೊಗದೊಳ್ ಸಿಡುಸುಯ್ಯಂ ನಾಲಗೆಯೊಳ್ ವಿಕಳತೆಯಂ ಮನದೊಳ್ ಪರವಶತೆಯಂ ತನುವಿನೊಳ್ ಚೇತನಮಂ ಪಿಡಿದು ಗಗನದಿಂ ಬಿಳ್ದಂತೆ ದುಃಖದೊಳೆಳ್ದಂತೆ [೫]ದೈನ್ಯದೊಳೆಳ್ದಂತೆ ಶೋಕಂ ಹೊಸೆದು ಬಿಸುಟಂತೆ ದುಃಖಂ ರೂಪುಗೊಂಡಂತೆ ಮಱಿದೊಱಗಿರ್ದಾಗಳ್,

ಚಂಪಕ

ಗಿರಿಸುತೆ [೬]ಬಂದು ಕಂಡು ಬೆಱಗಾಗಿ ಕೃಪಾಕರಚಿತ್ತೆ ಹತ್ತೆ ಸಾ-
ರ್ದು ರತಿಯ ಮೆಯ್ಯುಮಂ [೭]ಮೊಗಮುಮಂ ತಡವುತ್ತಿರೆ ಸೋಂಕಿನಿಂದೆ ಚೇ-
ತರಿಸುತೆ ಕಣ್ಗಳಂ ತೆಱೆದು ಪಾರ್ವತಿಯಂ ನಡೆ ನೋಡುತುಂ ದಯಾ-
ಪರೆ ಭುವನೈಕಮಾತೆ ಪದೇದಿಕ್ಷಿಪುದೆನ್ನಯ ದುಃಖದೊಪ್ಪಮಂ ೨೮

ಎಂದಳಲ್ದು ನುಡಿದು ನಿಲಲಾಱದೆ,

---

೧. ಕರಿದು ( ಬ. ) ೨. ಬೀಳಲೊಡನೆ ( ಕಾ. ಬಿ. ಯ. ) ೩. ಪರ್ಜಿ ಪರೆದು (ಸ.) ೪. ನುಚ್ಚೆ ( ಕಾ. ಜೆ. ಯ. ) ೫. ದೈನ್ಯದೊಳ್ ನಿಂದಂತೆ ( ಕಾ. ಜೆ. ಬ. ) ೬. ಕಂಡು ( ಕಾ. ಬಿ. ಬ. ಯ. ) ೭. ಮುಖ ( ಕಾ. )

ಗಿರಿಜೆಯ ಪದಯುಗದೊಳ್ ರತಿ
ಪೊರಳ್ದು ಪುಯ್ಯಲ್ಚಿ ಪೆರ್ಚಿದಳಲಿನ್ಮಡಿಸು-
ತ್ತಿರೆ ಸಳಯಿಸುತುಂ ದುಃಖಾ-
ತುರೆ ಶೋಕಂಗೆಯ್ದು ಸುಯ್ದು ಪೊಯ್ದಳಲುತ್ತುಂ ೭೯

ಕರುಣಿಸು ತಾಯೇ ತವರೇ
ಪರಿರಕ್ಷಿಸು ದಯೆಯೊಳೀಕ್ಷಿಸುಡುಗಿಸು ನೋವಂ
ಪರಿಹರಿಸು ದುಃಖಮಂ ವರ-
ಗಿರಿರಾಜತನೂಜೆ ಕಾದುಕೊಳ್ಳೆನ್ನಸುವಂ ೮೦

ಎಂದಳಲ್ವ ರತಿಯಂ ಕಂಡು ಮನಂಗೊಂಡು,

ಬೇಡುಡುಗು ಶೋಕರಸಮಂ-
ನೀಡಾಗದೆ ನಿನ್ನ ವಲ್ಲಭನನೀಶ್ವರನಂ
ಬೇಡುವೆನಾವರ್ಥದೊಳಂ
ಮಾಡುವೆನೆಲೆ ಪರಮಹರ್ಷಮಂ ನಿನಗೆ ರತೀ ೮೧

ಎಂದಗಜೆ ಬೆಸಸೆ ಶೋಕಮ-
ನಂದುಡುಗುತಡಂಗಿಸುತ್ತುಮಳಲಂ ಮನದೊಳ್
ಸಂದಣಿಪ ದುಃಖಮಂ ಮಱೆ-
ದೊಂದಿದಳಾ ರತಿ ಭವಾನಿಯುಜ್ಜ್ವಳವಚನಂ ೮೨

ಆ ಸಮಯದೊಳ್,

ಇಂತು ರತಿಗಭಯಮಂ ಕೊ-
ಟ್ಟಂತಕಹರನಿರದೆ ಪೋದ ಪರಿಯಂ ಭರದಿಂ
ಚಿಂತಿಸಿ ಜಯವಿಜಯೆಗಳೊಡ-
ನಿಂತೆಂದಳ್ ಗಿರಿಜೆ ಮನದ ಮುನಿಸಿಂದಾಗಳ್ ೮೩

---

೧. ರಸಮಂ (ಕಾ. ಬೆ. ಬ ಯು. ಗ.) ೨. ವಚದಿಂ (ಕಾ. ಬೆ. ಗೊ.) ೩. ಮನದೊಳ್ (ಕಾ. ಬೆ. ಬ)

ಸ್ರಗ್ಧರೆ.

ಅನಿಂತಿಂತರ್ಚಿಸುತ್ತುಂ ಗತಿ ಮತಿ ಪತಿಯೆನ್ನಾಯುಮೆನ್ನಾತ್ಮತತ್ತ್ವಂ
ತಾನೆಂದುತ್ಸಾಹದಿಂದಿರ್ದಚಳಪತಿಯ ಮೇನಾಖ್ಯೆಯೊಂದಳ್ಕಜಂ ಬಿ-
ಟ್ಟಾನಂದಂಗೂಡಿ ಕಾರುಣ್ಯಮನನವರತಂ ಪಾರುತಿರ್ಪಲ್ಲಿ ಕೇಳಿಂ-
[೧]ತೇನೆಂದುಗ್ರಂ ಸಮ[೧]ಗ್ರಂ ರಜತಗಿರಿಗೆ ಪೋದಂ ನಿಕೃಷ್ಟಾತ್ಮನಾದಂ ೮೪

ಅಂತುಮಲ್ಲದೆ,

ತಾನಿರ್ದಲ್ಲಿಗೆ ನಡೆತಂ-
ದಾನರ್ಚಿಸೆ ಕಾಮವೈರಿ ನುಡಿಯಿಸದಂತ-
ರ್ಧಾನಕ್ಕೆ ಸಂದನದಱಿಂ-
ದಾನಿರ್ದಲ್ಲಿಗೆ ಸಮುಂತು [೨]ತನ್ನನೆ ತರ್ಪೆಂ ೮೫

ಉತ್ಪಲ.

ಉಗ್ರತಪೋಭರಾಕೃತಿಯನಾಂತು ಜಗಂ ಬೆಱಗಾಗೆ ನಿಶ್ಚಲಾ-
ವ್ಯಗ್ರಮನೋಬಲಪ್ರಬಲೆಯಾಗಿ ಬಿಸಿಲ್ಮಳೆಸೀತದೊಳ್ ನಗ-
ಪ್ರಾಗ್ರದೊಳಂ ಕುಜಪ್ರತತಿಯೊಳ್ ಸರಸೀಕುಳದೊಳ್ ವಿರಾಜಿಸು-
ತ್ತುಗ್ರನಸೀಶನಂ ವಿಪುಳನಿಶ್ಚಳನಂ ಚಲದಿಂದೆ ತಂದಪೆಂ ೮೬

ಎಂದಿಂತು ಸಖೀಜನದೊಡನೆ ತನ್ನ ಸಾಮರ್ಥ್ಯದೊಂದುನ್ನತಿಯಂ ನುಡಿ-
ಯುತ್ತುಂ ಮೃಡಾನಿ ಮಹಾಮಾಯೆ ಸಕಳಜಗಜ್ಜನನಿ ನಿಖಿಳಾರಾಧ್ಯೆ ಅಕಳಂಕ-
ಚರಿತ್ರೆ ದಿವ್ಯಜ್ಞಾನಿ ಸರ್ವಬ್ರಹ್ಮಾಂಡಾಭರಣೆ ಹರನ ಮನೋಹರೆ ಸದಾಶಿವನ ಸುಖ-
ಮುಖಂ ಮಹಾದೇವನ ಮನೋರಥಂ ಚಲದ ಲಲನೆ ಬಲ್ಪಿನ ಭಾವಕಿ ಏಕನಿಷ್ಠಾನಿಧಿ
ಪಶುಪತಿಯ ಪಟ್ಟದ ಮಹಾದೇವಿಯೆನಿಪ್ಪ ಶ್ರೀಪಾರ್ವತೀದೇವಿಯುಗ್ರತಪೋಭರ-
ನಿವೇಶನಾಭಿಮುಖಿಯಾಗಿ,

೧-೧. ತೇನೆಂದುಂ ನೋಡದುಗ್ರಂ (ಕಾ.); ೨. ತನ್ನಂ (ಅ.)

ಚಂಪಕ.

ಸರಸಿಜನೇತ್ರೆ ಪುಣ್ಯಮಯಗಾತ್ರೆ ಸದಾಶಿವನಂಗಪಾತ್ರೆಯ-
ತ್ಯುರುತರಮಾನಿನಿ ನಿರ್ಮಲಭಮಾನಿ ನಿರಂತರದಾನಿ ನವ್ಯಸಂ-
ಪರಮಾಮೂರ್ತಿ ಶರ್ವನ ಸುಕೀರ್ತಿ ಮಹೇಶ್ವರನಾರ್ತಿ ಬಂದಳೊ-
ಪ್ಪಿರೆ ಗಿರಿಜಾತೆ ಲೋಕಜಯಮಾತೆ ಜಗಕ್ಕೆ ವಿನೂತೆಯುಳ್ಳಿಜಿಂ ೮೭

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೮೮

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯ-
ಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕ-
ರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

## ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್

ಕಾಮದಹನವರ್ಣನಂ ಅಷ್ಟಮಾಶ್ವಾಸಂ



೧. ಮಯ (ಪಾ.)

for B.A. Senior.

27.8.47.

# ನವಮಾಶ್ವಾಸಂ

## ಪಾರ್ವತೀತಪೋವರ್ಣನಂ ವಿರೂಪಾಕ್ಷಪ್ರತ್ಯಕ್ಷಕರಣವರ್ಣನಂ

ಕಾರುಣ್ಯಾಕರನಘವಂ
ಘೋರತಪೋಮಯುತೆಪಃಪ್ರಮೋದಾನ್ವಿತವಿ-
ಸ್ತಾರಫಲಪ್ರದನೆಮಗೆ-
ಗೌರಂತೆತಿಭಕ್ತ್ರಿಯುಂ ವಿರೂಪಾಕ್ಷಶಿವಂ ೧

ಉತ್ಪಲ

ಒಂದು ತಪೋನಿವೇಶನಮನೀಕ್ಷಿಸಿ ಬರ್ಪ ನಿದಾಘಕಾಲದೊಳ್
ನಂದನಗಾಗ್ರದಲ್ಲಿ ನಿಲವೇಳ್ಪುದೆನುತ್ತಮೆ ನಿಂದು ಮೇನಕಾ-
ನಂದನೆ ತದ್ವಿಳಾಸಿನಿಯರಾನನಮಂ ನಡೆನೋಡೆ ಕಾಣುತುಂ
ಸೌಂದರಿಯರ್ ಜಟಾರಚನೆಯಂ ತರದಿಂ ಭರದಿಂದೊಡರ್ಚಿದರ್ ೨

ವಿರಚಿಸಿದರ್ ಜಡೆಗಳನಾ-
ದರದಿಂ ದರಹಸಿತಬಿಸರುಹಾನನೆಯರ್ ಶಂ-
ಕರನರಸಿಗೆ ಗಿರಿಜಾತೆಗೆ
ವರಭಸಿತಮನಂಗತತಿಯೊಳುದೂಳಿಸಿದರ್ ೩

ವರಭಸಿತೋದ್ಧೂಳನಮಂ
ಗಿರಿಜೆಗೆ ಸುರಸತ್ರಿಯರೊಲ್ದು ಮಾಳ್ಪೆಡೆಯೊಳ್ ಕ-
ಪ್ಪುರದ ರಜದಿಂದೆ ಪುಷ್ಪೋ-
ತ್ಕರಮಾಲೆಯನೊಸೆದು ಪೂರೆವ ತೆಱನಾಯ್ತಾಗಳ್

ಅಂತುಮಲ್ಲದೆ,

---

೧. ನತಿ (ಕಾ. ಜಿ. ಯು. ದಾ.); ನತ (ಬ. ಅ.) ೨. ಶಿರ (ಕಾ.) ೩. ನೊನಲ್ ಸಿಂಗ (ಕಾ.)

ವಾರಿಜಮುಖಿಯರ್ ಸಖಿಯರ್
ತಾರಾಚಲನಾಥನರಸಿಗನುನಯದಿಂದಂ
ಸಾರಮೃದುತರವಿಮಳವಿ-
ಸ್ತಾರಿತವಲ್ಕಲವನೊಪ್ಪಲುಡಿಸುತ್ತಿರ್ದರ್ ‡ ೫

ಅಂತುಮಲ್ಲದೆ,

ಸಾಕ್ಷಾಚ್ಛಂಕರವಕ್ತ್ರಮಿ-
ವಕ್ಷಯಸುಖಮಿಾವ ಸುಕೃತಫಲಮಿವು ಸತ್ಯಂ
ಲಕ್ಷಿಯಿವೆನುತಗಜೆಗೆ ರು-
ದ್ರಾಕ್ಷಿಗಳಂ ಕೂಡೆ ತೊಡಿಸಿದರ್ ಮಾನಿನಿಯರ್ ೬

ಇಂತು ಭಕ್ತಿಜ್ಞಾನವೈರಾಗ್ಯಯುಕ್ತಮಪ್ಪ ತಪೋಮಂಡನಂಗಳಂ ಸಂಗಡ-
ಮಿರ್ದಂಗನೆಯರ್ ಶೃಂಗರಿಸೆ ಮಂಗಳಮುಖಿ ಹೊಂಗ್ಗಿ ಹೊರೆಯೇಱೆ,

ಸಂದಣಿಸುವ ಜಡೆ ಬೆನ್ನಂ
ಮಂದಯಿಸಿ ಮುಸುಂಕುತಿಳಿಯೆ ನೀಲಾಂಬುದಮಂ
ಸಿಂದಿಕ್ಕಿ ಮುಂದೆ ಬೆಳಗುತೆ
ನಿಂದೆಳಮಿಂಚಿನವೊಲಗಜೆ ನೆಱೆ ಮೆಱೆದಿರ್ದಳ್ ೭

ಅಕ್ಷನಡೆ ಮುನ್ನಂ ಪತ್ತಿದ
ಕಳಂಕಮಂ ಪೊರ್ದದಂತೆ ನಭದಿಂದಿಳಿತಂ-
ದಿಳೆಯೊಳ್ ಶಂಭುಗೆ ಮಿಗೆ ಶಶಿ-
ಕಳೆ ತಪಮಿರ್ಪಂತೆ ಗಿರಿಜೆ ತಪದೊಳ್ ನಿಂದಳ್ ೮

ಭಗ್ನಮನಮಲ್ಲದಚಲಿತೆ
ಲಗ್ನವ್ರತೆಯಾಗಿ ಶಂಕರಪ್ರೇಮಮನೋ-
ನ್ಮಗ್ನಾಂಗಿ ಧೈರ್ಯನಿಧಿ ಪಂ-
ಚಾಗ್ನಿಯ ನಡುವಗಜೆ ವಿಪುಳತಪದೊಳ್ ನಿಂದಳ್ * ೯

೧. ಕಳಂಕಮುಮ (ಕ೨ ಬೆ. ಯ); ೨. ರಸೋ (ಕಾ. ಬ. ಬೆ. ಮ. ಅ. ಪಾ. ಕ.) ‡ ೫ ನೆಯ ಪದ್ಯವು ಅ. ಪ್ರತಿಯಲ್ಲಿಲ್ಲ. * ೯ ನೆಯ ಪದ್ಯವು ಓ. ಪ್ರತಿಯಲ್ಲಿಲ್ಲ.

ಇಂತು ಸೋಮಧರನರಸಿ ಹೇಮಕೂಟಾಗ್ರದ ಮೇಲ್ವಗ್ರದಿಂದುಗ್ರತಪದೊಳ್ ನೆಲಸಿ ನಿಲೆ ತಪಸ್ತೇಜಂ ಮೂಜಗಮುಂ ಪರ್ವಿದಾಗಳ್,

ಮೃಗತತಿ ಸುಳಿಯವು, ಮಿಗೆ ಪ-
ಕ್ಷಿಗಳೆಕ್ಕೆ ಜಗವು ಸಮೀರಣಂ ಸಂಚರಿಸಂ,
ಗಗನದ ಖೇಚರರಾ ದೃ-
ಷ್ಟಿಗೆ ಸಾರರ್, ನಗಜೆಯ ತುಳತಪದಾತಪದೊಳ್ ೧೪

ಅಸುರದ ಗಿರಿಜೆಯುಗ್ರದ
ಭಾಸುರತಪಕಂಜಿ ನಭದ ತಪನಂ ನಡೆಯು-
ತ್ತಾ ಸರಿಸವತ್ತಂ ಕರಂ ಬಿ-
ಟ್ಟೋಸರಿಸಿಯೆ ನಡೆವನೆಂದೊಡೇವಣ್ಣಿಪೆನೋ ೧೫

ಅಸಮಾನಮುಜ್ಜಳಮದ್ಭುತ-
ಮವಿಸ್ತರಮನೂನಪ್ರಭಂ ಶುಭಂ, ಘನವಿಭವಂ
ಪೆಸರಿಡಬಾರದು, ಮಿಗೆ ನಿ-
ಟ್ಟಿಸಬಾರದು, ನೋಡಬಾರದಂಜಿಕೆಯ ತಪಂ ೧೬

ಎಂಬ ಸಾಮರ್ಥ್ಯಮನೊಳಕೊಂಡು ಜಡೆಗಳ ಜೆಡಂಗ ಭಸಿತದ ಭಾಳಲೋಚನೆ ರುದ್ರಾಕ್ಷಿಯ ಭದ್ರಾಂಗಿ ನಾರ ಸೀರೆಯ ಧೀರೆ ಗಿರಿಶಿಖರದ ಗದ್ದುವೆ ಉಗ್ರತಪದ ವ್ಯಗ್ರೆಯೆನಿಪ ಪಾರ್ವತೀದೇವಿ ಪ್ರಚಂಡತರಪ್ರತಾಪತಪೋವೇಷದಿಂದಿರೆಯಿರೆ,

ಮಹಾಸ್ರಗ್ಧರೆ.

ದೆಸೆಯಂ ಕಾಹೇರಿಸುತ್ತುಂ, ತೃಣಕುಲಲತೆಯಂ ಸೀದು, ಕರ್ಪೇರಿಸುತ್ತುಂ,
ರಸೆಯಂ ಸಂತಾಪಿಸುತ್ತುಂ, ಜಳಭರಿತತಟಾಕಂಗಳಂ ಶೋಷಿಸುತ್ತುಂ,
ಸಸಿಯಂ ವೃಕ್ಷಾಳಿಯಂ ಸುಟ್ಟುರಿಪುತ್ತಿ, ಮೃಗಮಂ ಜೇಯಿಸುತ್ತದ್ರಿಯಂ
ಕ್ಕೈಸಿ ಸೀಳುತ್ತುಂ ವಿಶಾಳಂ ದವಶಿಖಿಯವೊಲೆತ್ತತ್ತನೋಘಂ ನಿದಾಘಂ ೧೭

೧. ಲಸಷ್ಟನ ( ಕಾ ). ೨. ಸೃ। ಷ್ಟಿಸ ( ಯು. ಅ. ಬ. ಕೊ. ); ಪುಟ್ಟಿಸ ( ಮ. ನ. ಸ. ಅ. ಕ. ಪ. ಗ. ಒ. ). ೩ ಘಾಲ ( ಕಾ )· ೪. ಕಾಯ್ಸೇರಿಸುತ್ತುಂ ( ಕಾ. ಯು. ).

ಅಂತು ತೋಱುವ ನಿದಾಘದಲ್ಲಿ,

ಪೊಸಬೇಸಗೆಯೊಳ್ ಮೃಗತತಿ-
ಯುಸುವೆರಸಿರವೇಳ್ವುಮೆಂದು ಕರುಣಿಸಿ ಮಿತ್ರಂ
ಬಿಸಿಲಂ ಹಿಳಿದೊಡೆ ಜೆನ್ನೀ-
ರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ ೧೮

ತರದಿಂದಂ ತೆರೆಮಸಗುವ
ಮರೀಚಿಕಾಜಲಮನೆಳೆಯ ಜಲಮೆಂದು ಕರಂ
ಹರಿಣಂಗಳ್ ಪರಿತಂದಾ-
ತುರಿಸುತ್ತುಂ ಬಿಸಿಲ ಬಯಲನೀಂಟಿ ಬಳಲ್ದುಂ ೧೯

ಪೆಣ್ಮ ಧರೆಯೊಳಗೆ ತೀವಿದ
ಚಿಹ್ನಮಿದೆಂಬಂತೆ ಬಿಸಿಲ ಬೇಗೆ ಕರಂ ಮಾ-
ಧ್ಯಾಹ್ನದೊಳಸುದೋರ್ಡೆ ಮೃಗತತಿ
ಜಾಹ್ನವಿಯೊಳ್ ಪೊಗುಲೆ ಬಯಸಿದುವು ಬೇಸಗೆಯೊಳ್ ೨೦

ಆ ಸಮಯದೊಳ್,

ಚಂಪಕ

ಘರಿಘರಿಲೆಂದು ಸೀದುವು ವಿಹಂಗಕುಲಂ ಕೆರೆಬಾವಿಬಂಚಗಳ್
ಪರಿಪರಲೆಳ್ದುವೀ ಮನುಜರ್ಧಾತಪತಾಪಮೊಳಳ್ಕಿ ಬಳ್ಕಿದರ್
ಕರಿಮುರಿವೋಯ್ತುರಣ್ಯಮುಱತೆ ಬೆಂದು ಮೃಗಾವಳಿ ಪೊಂದಿಪತ್ತು ಸಿಂ-
ಮರಿದುವು ಬೆಟ್ಟಮಿಂಗಿದುವು ವಾರಿಧಿ ಕಾಯ್ದುದು ಘೂರಿಭೂತಳಂ ೨೧

ಮೃಗತಿರುಗಳ್ ಕರಿಮುರಿ ಕಣ್-
ಗೊಗೆದ ಮರಂ ಘರಿಘರಿಲ್ ಗಜಂ ಚಿಮಿಚಿಮಿಯೆಂ-
ದಗಸಿಕರಂ ಛಿಳಿಛಿಟಿಲೆನೆ
ಮಿಗೆ ಸೀದುವು ಬೆಂದುವುರಿದು ವೊಡೆದುವು ಬಿಸಿಲೊಳ್

೧. ಹಿಳಿಯಲ್ (ಕಾ. ಜಿ. ಬ. ಮ.). ೨–೨. ತರದಿಂ ಮರೀಚಿಕಾಜಲ । ಧರೆ ಮಸಗಲ್ ನೋಡುತಿಳೆಯ (ಅ). ೩. ಳೀಳಿಸ್ದಡೆ (ಅ); ಳಿಳಿದುದೆ (ಡ). ೪. ಮೃಗತತಿಗಳ್ (ಕಾ. ಜಿ. ತ. ಮ. ಸ.). ೫. ಕಾ । ದೊಗೆದ (ಅ).

ಮರದಡಿಯೊಳ್ ಕಾನನದೊಳ್
ಗಿರಿತಟದೊಳ್ ಬಟ್ಟಬಯಲೊಳಂಬರತಳದೊಳ್
ಕರಿಯ ಬಿಸಿಲುರಿಯ ಬಿಸಿಲ-
ಚ್ಚರಿಯ ಬಿಸಿಲ್ ಪಿರಿಯ ಬಿಸಿಲಖಂಡಿತದ ಬಿಸಿಲ್ ೨೩

ಮತ್ತಮಲ್ಲದೆ,

ಮತ್ತೇಭ

ನಡೆಯಲ್ಕೊಂದಡಿಯಿಟ್ಟು ಕಾಯ್ದ ನೆಲನಂ ಕಾಲ್ ಮುಟ್ಟೆ ಚುಯ್ಯೆಂದು ಜಂ
ಝಡೆ ಮತ್ತೊಂದಡಿಯೆತ್ತಲಾಜದಳಲಿಂ ಕಣ್ಮುಚ್ಚಿ ಹಸ್ತಾಗ್ರಮಂ
ಪಡಿನಾಯೊಳ್ ಸೆಜ಼ೆಯಿಟ್ಟು ನೆತ್ತಿ ಬಿರಿದೆತ್ತಲ್ ಮುತ್ತುಗಳ್ ಸುತ್ತಲುಂ
ಸಿಡಿಯುತ್ತಿರ್ಪಿನಮಿರ್ದುದೊಂದತಿಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ ೨೪

ಅಂತುಮಲ್ಲದೆ ಮತ್ತಮೊಂದೆಡೆಯೊಳ್,

ಚಂಪಕ

ಎಲೆಲೆಲೆ ನೋಡನೋಡೆ ಕೆಲಸುಂ ಬಲನುಂ ನೆಲನುಂ ದವಾಗ್ನಿ ಸು-
ಟ್ಟೊಲೆಯವೊಲಾಗೆ ಮೆಟ್ಟಿದಡಿಯೆತ್ತಿದ ಕಾಲುಜ಼ಿ ಸೀಯ್ಯೆ ನಿಂದಿರಲ್
ಚಲಿಯಿಸಲಾಜದಾತಪದೆ ಹಸ್ತಮನೆತ್ತುತೆ ಘೀಳಿಡುತ್ತೆ ತಾ-
ನೊಲೆದುದು ಚೇಷ್ಟೆಗುಂದಿದುದು ಜೋಲ್ದುದು ಬಿಳ್ದುದು ಬೆಂದುದೊಂದಿಭಂ ೨೫

ಮತ್ತಮಲ್ಲದೆ,

ಜಳಜಸಖನನಿಲಸಖನೆಂ-
ದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾ-
ನಳರೋವೊ ಸಂತಮಿರ್ಪರೆ
ಘಳಿಲನೆ ನಿಂದುರಿದು ಹೋಗರೇ ಬೇಸಗೆಯೊಳ್ ೨೬

---

೧ ಬಿರಿದೆತ್ತಂ ( ಬ. ಯ. ); ಬಿರಿಯುತ್ತುಂ (ಕಾ. ಬೆ. ಡ.) ೨. ನೋಡು ನೋಡು (ಕಾ. ಬೆ.)
೩—೩. ಹಸ್ತಮನೆತ್ತಿ ಬಳಲ್ದು ಘೀಳಿಡು ! ತ್ತೊಲೆದುದು ( ಕೊ. )

ಕಣ್ಮುಚ್ಚೆ ನೆಮ್ಮೆ ಪೆಮ್ಮದಂಬೋಗಿ ಕಿಡಿಸೂಸಿ ಸುಯ್ದು ಗಾಸಿಯಾಗಿ ಮಿದೆಗೆಡೆದು ಮುಪವಳಿದಿರ್ಪ ಮಾತಂಗವ್ರಾತದಿಂ ಮತ್ತಂ ಶತಧಾರಾಸಹಸ್ರದಂತೆ ಸಹಸ್ರಕರಮರೀಚಿಗಳುಱವೆಱಗಿ ನಟ್ಟು ಕಾಯೆ ಗಳಗಳನಱ್ದು ಪಳಪಳನೆ ಸೀಳ್ದು ಸಿಡಿದೊಡೆದು ಪಿಗ್ಗಿ ತಗ್ಗಿ ಕುಗ್ಗಿ ಕುಪ್ಪಳಿಸಿರ್ಪ ಪರ್ವತಪ್ರತಾನದಿಂದತ್ಯುಗ್ರತೆಯನತಿಪ್ರಚಂಡತೆಯನತ್ಯುಷ್ಣತೆಯನತ್ಯಾಭೀಳತೆಯನತಿಪ್ರತಾಪಮನುಗುಳುತ್ತಿರ್ದುದಂತುಮಲ್ಲದೆಯುಂ,

ಮಹಾಸ್ರಗ್ಧರೆ.

ಪಸಿವಿಂ ದಾವಾನಳಂ ಸುಟ್ಟುರಿಪೆ ತರುಗಿರಿವ್ರಾತಮಿಲ್ಲಾದುದೋ ನಾ-
ಳ್ಪೆಸೆಯೊಳ್ ಸೂರ್ಯಂ ಕ್ಷುಧಾಪೀಡಿತನಱಸುತ್ತೆ ಕೆಯ್ನೀಡೆ ನಿಷ್ಪಾರಕಾಷ-
ಪ್ರಸರಂ ಕೌಱಿಕೆಳ್ದುದೋ ನಿಂದನುಪಮತೃಷಿತಂ ವಾಡಬಂ ಪೀಱಿ ತಾಂ ಶೋ-
ಷಿಸಿತೋ ವಾರಾಶಿಯೆಂಬುಷ್ಣಮನೊದವಿಸಿತತ್ಯುಗ್ರಯೋಗಂ ನಿದಾಘಂ ೨೮

ಆ ನಿಧಾಘದಲ್ಲಿ,

ಮಹಾಸ್ರಗ್ಧರೆ.

ರವಿಕಾಂತೋಗ್ರಸ್ಫುಲಿಂಗಪ್ರತತಿ ನೆಗೆದು ಪಾದಂಗಳೊಳ್ ಬೀಳ್ವೊಡಂ ಪೊ-
ಣ್ಮುವ ದಾವಪ್ರೋದ್ಭವಪ್ರಸ್ಫುರಿತವಿಲಸದುಷ್ಣಂ ತನೂಭಾಗಮಂ ಪ-
ತ್ತುವೊಡಂ ತದ್ದೇಹದಗ್ನಿಪ್ರಭೆಯೊದವುವೊಡಂ ಸೂರ್ಯತಿಗ್ಮಾಂಶುಗಳ್ ತಾ-
ಗುವೊಡಂ ಮಾಧ್ಯಂ ನಿದಾಘಂ ಕವಿದೊಡಮನಿತಕ್ಕಳ್ಕದಂತಾರ್ಯೆ ನಿಂದಳ್ ೨೯

ಅಂತು ನಿಂದು,

ದಶಭುಜನ ಮನೋವಲ್ಲಭೆ
ದಿಶಾವಳೀಭರಿತಕೀರ್ತಿಯುತೆ ಘೋರತಪೋ-
ವಶೆ ನೆಱೆ ಗಂಗಾಧರನಂ
ಶಶಿಧರನಂ ನೆನೆದು ಕಳೆದಳಾ ಬೇಸಗೆಯಂ ೩೦

---

೧. ತತ್ಯುಷ್ಣ ( ಕಾ. ಬೆ. ಕ. ಯು. ) ೨. ತಜ್ಜಠರಾಗ್ನಿ ( ಬೆ. ಮ. ಯ. ಬ. ಓ ದಾ. ) ೩. ದಾರ್ಯೆ ( ಕೊ. )

ಆ ಸಮಯದೊಳ್ ಸಕಳಕಳಾಕೋವಿದೆಯರಪ್ಪ ಜಯವಿಜಯೆಗಳ್ ಮೆಯ್ಯಿಕ್ಕಿ ಕೆಯ್ಯಂ ಮುಗಿದು,

ಚಂಪಕ

[೧]ಮದವುಡುಗಿತ್ತು ಬೇಸಗೆ ಕರಂ ಪಸುದೋಱಿದುವಲ್ಲಿಗಲ್ಲಿಗಂ-
ಬುದನಿಕರಂ ಸುರುಳ್ದುದು ಬಿಸಿಲ್ ಸೆಗೆದತ್ತು ತಟಿಲ್ಲತಾಂಕುರಂ
ಬಿದಱಿದುವಂಚೆಯಾಡಲಡಿಯಿಟ್ಟುವು ಸೋಗೆಗಳೆಯ್ದೆ ಪಲ್ಲವಂ
ಪುದಿದ ಕದಂಬದೊಳ್ ಮುಗಿಲನೆಳ್ಚಿಸಲೆರ್ದುದು ಪಶ್ಚಿಮಾನಿಳಂ ೩೧

ಅನಂತರಮಾಗಳ್,

ಕಡವಿನ ಸೂವಡಿಂದೊಂದೆರ-
ವಡಿಯುಡುತಿರ್ದಪುದು ಗಾಳಿ ನಲಿದು ನವಿಲ್ಗಳ್
ನಡೆನಟಣೆಗೊಳುತ್ತಿರ್ದಪು-
ವೆಡೆಯಜಿಸುತ್ತಿರ್ಪವಂಚೆ ಸುೞಿದುವು ಮುಗಿಲ್ಗಳ್ * ೩೨

ಎಂದು ಬಿನ್ನಯ್ಸುತ್ತುಂ ಮತ್ತಮಿಂತೆಂದರ್ *

ಪೋದುದು ಬೇಸಗೆ ಕಾರ್ ಮೊಗ-
ವಾದುದು ತರುತಳದ ನೆಳಲ ತಣ್ಪಿನೊಳಿರ್ದ-
ತ್ತ್ಯಾದರದಿಂ ಮಾಳ್ಪುದು ಪು-
ಣ್ಯೋದಯನಿಷ್ಕಪಟವಿಪುಳತಪಮಂ ಗಿರಿಜೇ ೩೩

ಎನೆ ಕೇಳ್ದು ಮನಂಗೊಂಡ-
ತ್ಯನುಪಮಶೈವಪ್ರತಾಪತೇಜೋನಿಧಿ ಭೋಂ-
ಕೆನೆ ಗಿರಿಸುತೆ ನಡೆತಂದಳ್
ವಿನಯವಿಭೂಷಣೆ ವಿಲಾಸವಿಭ್ರಮದಿಂದಂ ೩೪

---

೧. ಮದವೞಿದಿತ್ತು (ಕೊ) ೨. ದಿಂ ಕಪಟರಹಿತ (ಕಾ) * ಇವು ಕ. ಪ್ರತಿಯಲ್ಲಿಲ್ಲ.

ಮಹಾಸ್ರಗ್ಧರೆ

ಭರದಿಂದೆಯ್ತಂದು ಭರ್ಗಪ್ರಿಯೆ ಭವನ ಮನೋಮೂರ್ತಿಗಂ ಫಾಳಾಕ್ಷಭಕ್ತ್ಯ-
ತುರೆ ಮುಕ್ತಿಪ್ರಾಪ್ತೆ ಭೂತೇಶನ ಸಕಳಸುಖಾಕಾರೆ ಶರ್ವಾಣಿ ಸರ್ವೇ-
ಶ್ವರಿಯುರ್ವೀಮಾತೆ ಮೂಲೋಕದ ಸುಕೃತಫಲಂ ಸತ್ಯವಿಸ್ತಾರೆಯುದ್ಯದ್-
ಗಿರಿರಾಜಾಪತ್ಯೆ ನಿಂದಳ್ ಘನವಟವಿಟಪಿಚ್ಛಾಯೆಯೊಳ್ ಪ್ರೀತಿಯಿಂದಂ ೩೫

ಇಂತಘಟಿತಘಟಿತೆ, ಪಟುತರಚಿತ್ತೆ, ನಿಟಿಲಲೋಚನೆ, ವಟವೃಕ್ಷದ ಕೆಳಗೆ ವಾರಿಕುಲಕ್ಕೆ ಸೋಲದೆ ಧೀರೋದಾತ್ತೆ ಘೋರತಪದೊಳ್ ನಿಂದಳನ್ನೆಗಮಿತ್ತಲ್,

ಚಂಪಕ

ನಲಿದುದು ಸೋಗೆ ನುಣ್ಪನೆಡೆಗೊಂಡುದು ಚಾದಗೆವಕ್ಕಿ ಮಿಕ್ಕು ಪೂ-
ತಲರ್ದುದು ಸೊಂಪಿನಿಂ ಕಡವು ತಣ್ಪನೆ ಹೇಱಿದುವೆಯ್ದೆ ಬೆಟ್ಟು ಬಂ-
ದಲೆದುದು ಪಶ್ಚಿಮಾನಿಳಸಮರ್ಚಿತು ಕೇತಕಿ ಪೂದೊಡಂಬೆಯಂ
ಜಲದೊಳೆ ಪೊಕ್ಕುವಂಚೆ ಮುಗಿಲೊಡ್ಡಣೆಯೊಡ್ಡಿತು ಕಾರ ಕೊರ್ವಿನೊಳ್ ೩೬

ಅಂತುಮಲ್ಲದೆಯುಂ,

ಹರಿಸಂ ಮಿಗೆ ನವಿಲಾಡು-
ತ್ತಿರೆ ಚಾದಗೆಯುರ್ಬಿ ನಲಿಯೆ ನಾಲ್ಕುಂ ದೆಸೆಯುಂ
ಕರಿಯಂತಿರೆ ಗಿರಿಯಂತಿರೆ
ಧರೆಯಂತಿರೆ ನೆಗೆದುದಭ್ರಕುಲಮಂಬರದೊಳ್ ೩೭

ತರದಿಂ ಶಿಖಿ ಚಾದಗೆ ಮಧು-
ಕರಮಂಚೆ ಪಯೋಧರಂಗಳನುನಯದಿಂದಂ
ಕರೆದುವು ನೆರೆದುವು ಮೊರೆದುವು
ಪರೆದುವು ತೊಱೆದುವು ನಿರಂತರಂ ಕಾರ್ಮೊಗದೊಳ್ ೩೮

ಮತ್ತಮಲ್ಲದೆಯುಂ,

---

೧. ಭಾಳಾಕ್ಷಭಕ್ತ್ಯಾ ( ಕಾ. ) ೨ ನಿಖಿಳ ( ಕಾ. ) ೩. ಜೇಱು ( ಕಾ. ) ೪. ದೆಸೆಯೊಳ್ ( ಕೊ. )
೫. ನೆರೆಯುವಂಬರಕ್ಕಬ್ದಕುಲಂ ( ಬ. )

ಮಹಾಸ್ರಗ್ಧರೆ

ಹರಿಸಂ ಮಿಕ್ಕುಭ ಮಾತಂಗಮನತಿಭರದಿಂ ನೋಡಲೆಂದೆಳ್ದುವೋ ದಿ-
ಕ್ಕರಿಗಳ್ ದೇವೇಂದ್ರನೊಳ್ ಕಾದುವ ಕಡುಮುಳಿಸಿಂದೆಳ್ದುವೋ ಗೋತ್ರಕೃತ್ಕೋ-
ತ್ಕರಮಾಕಂಗಂ ಹಿರಣ್ಯಾಕ್ಷನಿನೊಗೆದ ಮನೋದುಃಖಮಂ ದೂಱಲೆಂದಾ-
ತುರದಿಂದೆಳ್ದತ್ತೊ ಧಾತ್ರೀತಳಮೆನೆ ನಭದೊಳ್ ಕೀವಿತಭ್ರಪ್ರತಾನಂ. ೩೯

ಆ ಸಮಯದೊಳ್,

ತನೆ ಬಳೆದು ಪರ್ಬಿತಾಕಾ-
ಶವನೇಱಿದ ಮುಗಿಲ ನೀರ ನೆಱೆಯುಂ ಮಿಗೆ ನು-
ಚ್ಚೈವನಂ ಬಿಡಿಸುವ ಘನಶ-
ಸ್ತ್ರವಣಂ ಪೊಳೆವಂತೆ ಮಿಂಚು ಮಿಂಚಿತ್ತಾಗಳ್ ೪೦

ಘುಳುಘುಳು ಘಳಘಳ ಘುಡುಘುಡು-
ಘುಳು ಛಿಟಿಛಿಟಿ ಘಾಘುರ್ಳಂ ಧಡಂ ಧಾಂಧಡ ಛಿಂ
ಛಿಳಿಛಿಳಿ ಛಿಂಛಿಂ ಘಡಘಡ
ಘಡಘಡಘಡಿಲೆಂದು ಮೊಳಗು ಮೊಳಗಿತು ನಭದೊಳ್[1] ೪೧

ಆ ಮಿಂಚಿನ ಮೊಳಗಿನೊಳು-
ದ್ದಾಮಾಂಬುದನಿಕರದಿಂದೆ[2] ದೆಸೆ ದೆಸೆ ಗಗನಂ
ತಾಮುಱಿಯಲ್ ಬಾರದವೋ-
ಲೇವಾತೋ ಕಱಿದುವಿಳೆಯ ಹರ್ಷಂ ಪರ್ಷಂ ೪೨

ಮತ್ತಮದಲ್ಲದೆಯುಂ,

ಮಿಗೆ ಕಾರರಸಂ ಪಗೆವೇ-
ಸಗೆಯುಂ ಸುರಧನುವಿನಿಂದೆ ಮುಗಿಲಂಬುಗಳಿಂ
ತೆಗೆದೆಚ್ಚಿ ಬಹುವಿಧಶರಸ್ವನ-
ನಿಗೆ ಬೀಱ್ವಂತಿರ್ದುವಂಬುಧಾರಾಸೇಕಂ ೪೩

೧. ನಭಮುಂ (ಯ.) ೨. ನಿಕರಂ (ಸ.)

ಜೆಂಗೊಟ್ಟೋಡುವ ಬೇಸಗೆ-
ಯಂ ಗರ್ಜಿಸುವಬ್ಧಸಮಯನೃಪಘನಮದಮಾ-
ತಂಗಕುಲದಾನಧಾರಾ
ಭಂಗಿಯನೊಡರಿಸಿತು ಕಟ್ಟೆ ಕಱೆವಾಸಾರಂ ೪೪

ಗಗನದಿನೆಱಗಿದ ಮಳೆ ನೀ-
ನೆಗಲದೆ ಸಲಸೆಂದು ವರ್ಷನರಪಂಗಿಳೆಯಂ
ಮುಗಿಲಗಲದಹಸ್ತದಿನಾ
ಗಗನಾಂಗನೆ ಧಾರೆಯೆಱೆದ ತೆಱನಾಯ್ತಾಗಳ್ ೪೫

ಘನಸಮಯನೃಪಾಲಕನೊಳ್
ಘನಪಾಣಿಗ್ರಹಣಮಾದ ಭೂವನಿತೆಗೆ ಮು-
ತ್ತಿನ ಸೇಸೆಗಳಂ ಗಗನಾಂ-
ಗನೆ ಸೂಸಿದಳೆನಿಸೆ ಬಿಳ್ದುವಾಲಿವರಲ್ಗಳ್ ೪೬

ಅಂತು ಬರ್ಸ ಕಾರ ಮಳೆಯಂ ಕಂಡು ಮನಂಗೊಂಡು,

ಚಂಪಕ

ಶುಕನಿಕರಂಗಳುಗ್ಗಡಿಸೆ ಕೋಕಿಳನಾದದ ತಾಳವುಣ್ಮೆ ಸಾ-
ಖ್ಯಕರಕದಂಬಪುಷ್ಪರಸದಿಂ ತಣಿದೊಯ್ಯನೆ ಪಾಡೆ ಷಟ್ಪದಂ
ವಿಕಸಿತಪಕ್ಷನೂರ್ಧ್ವಗಳನುಸ್ಮಖನುಚ್ಚಳಿತಸ್ವನಂ ಬಳಾ-
ಹಕನಿನದಕ್ಕೆ ಪೆಕ್ಕಣಮನಾಡಿದುದೊಂದು ಮಯೂರನಳ್ತಿಯಿಂ ೪೭

ಮತ್ತಮನಂತರದಲ್ಲಿ,

ಚಂಪಕ.

ನೆಗೆದುದು ಸಾರ್ದು ಪ್ರೊರ್ದಿತಮರಿತ್ತು ತುಳುಂಕಿತು ಬೆಂಗೆ ನೀರ ಧಾ-
ರೆಗಳುಱೆ ನಾಂಟಲೀಂಟಿದುದು ನೇಹಪೆ ನೋಡಿತು ದಂಚಚಂಚುವಿಂ-
ದುಗಿದುದು ಪಕ್ಕದಿಂ ಪೊಡೆದುದಂಘ್ರಿಗಳಿಂದೊದೆದತ್ತು ನೆತ್ತಿಯಿಂ
ನೆಗೆಪಿದುದಪ್ಪಿತಳ್ಕಿರಿದು ದುಂಬುಕಣಂಗಳನೊಂದು ಚಾತಕಂ ೪೮

೧. ಗರ್ದಿಸು ( ಕಾ ). ೨. ರ ( ಬ ). ೩. ತಳ್ತಿರಿದು ( ಡ. )

ಇಂತು ಶಿಖಿಪ್ರಕರಮುಂ ಚಾತಕಕುಲಮುಂ ನಲಿಯುತ್ತುಮಿರೆಯಿರೆ,

ಧಾರೆಗಳವನಿಯನೊಳಪೊ-
ಕ್ಕೊಱಂತುಚ್ಚಳಿಸಿ ಮೀಱುತಿರೆ ನಭದಿಂ ಭೋರ್-
ಭೋರೆಂದಿರುಳುಂ ಪಗಲುಂ
ಬೀರೆಸುತುಂ ತೆಱಪುಗುಡದೆ ಕಱೆದವು ಮಳೆಗಳ್ ೪೯

ಒತ್ತರಿಸುತ್ತಂಬರಮಂ
ಮುತ್ತುತ್ತುಂ ದಿಗ್ವಿತಾನಮಂ ಧರೆಯೊಳ್ ತೀ-
ವುತ್ತುಂ ಕತ್ತಲಿಸುತ್ತುಂ
ಸುತ್ತುಂ ಜಿನುಗಿದವು ಸೋನೆ ಇರುಳುಂ ಪಗಲುಂ ೫೦

ಅಂತುಮಲ್ಲದೆ,

ಸರಿಗಳ ನೆರೆದೋಂಟಂ ಬಲ್
ಸರಿಗಳ ಭರಿತಂ ಸರಿಗಳ ಕಲ್ಲೋಲಕುಲಂ
ಸರಿಗಳ ಘೂರ್ಣಿತದಿಂದಂ
ಶರನಿಧಿ ಕವಿದಂತೆ ಕಱೆದುದಿಳೆಯೊಳ್ ವರ್ಷಂ ೫೧

ಮೇಘಂಗಳ್ ಪರಿಗತವಿನಿ-
ದಾಘಂಗಳ್ ಕಮಲವಿಮಳಜೀವನಭರಿತಾ-
ಮೋಘಂಗಳ್ ಶಿಖಿನಿಕರ-
ಶ್ಲಾಘಂಗಳ್ ಕಱೆದುವೆತ್ತುಳ ಶೀತಳಜಳಮಂ ೫೨

ನೋಡುತ್ತಿರೆ ಸಕಳಜನಂ
ಕೂಡುತ್ತಿರೆ ಚಾತಕಂಗಳ್ಳೆ ಜಳದೊಳ್ ತೇಂ-
ಕಾಡುತ್ತಿರೆ ಶಿಖಿಕುಲಮೆ
ಳ್ದಾಡುತ್ತಿರೆ ತುಱುಗಿ ಕಱೆದು ಮೆಱೆದವು ಮೇಘಂ ೫೩

೧. ದಿಕ್ಪ್ರತಾನಮುಂ ( ದಾ. ). ೨. ಪಸುಳ ( ಕಾ ). ೩. ಮೊಱೆ ( ಕಾ. ಯು. ಸೆ. ).

ವೃಷ್ಟಿಗಳವು ಶಿಖಿಚಾತಕ-
ತುಷ್ಟಿಗಳವು ಘನತಟಾಕವಿಮಳನದೀಸಂ-
ಪುಷ್ಟಿಗಳವು ಜೀವರ್ಕಳ
ದೃಷ್ಟಿಗಳವು ಬಿಡದೆ ಕಱೆದುವವನೀತಳದೊಳ್ ೩೪

ಮತ್ತಮಲ್ಲಿ,

ಮತ್ತೇಭ.

ಗಗನಂ ಕೆಟ್ಟುದು ಚಂದ್ರಸೂರ್ಯರಳಿದರ್ ದಿಕ್ಚಕ್ರಮಿಲ್ಲಾಯ್ತು ಬ-
ಟ್ಟೆಗಳಸ್ಪಷ್ಟಮವಾದುವಾತ್ತೆ ಜಳದೊಳ್ ಪೂಳ್ದತ್ತು ಧಾತ್ರೀತಳಂ
ಖಗಸಂಚಾರತೆ ಶೂನ್ಯಮಾದುದು ನಿರುದ್ಯೋಗಕ್ಕೆ ಪಕ್ಕಾದುದೀ
ಜಗಮೆಂಬಿನಮೆಯ್ದೆ ಕಟ್ಟಿ ಕಱೆದತ್ತಾಸಾರಮಾ ಲೋಕದೊಳ್ ೩೫

ಸುರಿದುದು ಮಳೆ ತಣ್ಣಿಯಿತ್ತಿಳೆ
ನೆರೆದುದು ಬೆಳೆ ಕಾನನಂಗಳೊಳ್ ನೆಱೆ ವಿಸಟಂ-
ಬರಿದುವು ಹೊಳೆ ನಾಂದುವು ಶಿಳೆ
ಧರಣಿಗೆ ನೆಳ್ತೆ ಪಿಡಿದ ತಳೆಗಳಾದುವು ಮಳೆಯೊಳ್ ೩೬

ಇಂತಪ್ಪ ಮಳೆಗಳೊಳಗೆ,

ಮಳೆ ಮಾಣ್ದೊಡೆ ಹನಿ ಮಾಣದ
ದಳಫಳಯುತವಿಟಪಭರಿತವಿಟಪಿಯ ತ-
ಣ್ಣೆಳಲಲ್ಲಿಂ ತಳರದೆ ಕೋ-
ಮಳೆ ಮಳೆಯೊಳಗಗಜೆ ನಲಿದು ಸೆಲೆ ನಿಂದಿರ್ದಳ್ ೩೭

ಆ ಸಮಯದೊಳ್,

ಅಭವನ್ನಂಗಿಳೆಯೊಳ್ ತಪಮಿ-
ರ್ಪ ಭವಾನಿಗೆ ಬಂದು ಕಲ್ಪತರು ಫಳರಸದಿಂ
ದಭಿಷೇಕಂಮಾಡುವ ನವ-
ವಿಭವದವೋಲೆಸೆದುದಾಲಮರನಾ ಮಳೆಯೊಳ್ ೩೮

೧. ಕೆಱೆ ( ಮ. ) ೨. ತಪದಿಂದಿರ್ದಳ್ ( ಡ. ) ೩ ಮಾಡುವಸತಿ ( ಕಾ. )

ಇಂತು ನೆಗೆದ ಮುಗಿಲ್ಗಳ ಭೀಕರಾಕಾರಕ್ಕಂ ಮಿಂಚುಗಳ ಸಂಚಳತೆಗಂ ನೊಳಗಿನ ಮಹಾಧ್ವನಿಗಂ ಸಿಡಿಲ ಸಡಗರಕ್ಕಂ ಒಲ್ಸರಿಗಳ ಸಭ್ರಮಕ್ಕಂ ಬಿಜುವಳೆಯ ಬಿಲ್ಪೊಯಿಲ್ಗಂ ಪೆರ್ಮಳೆಯ ಧಾರೆಗಂ ಆಲಿಕಲ್ಲ ಕರ್ಕಶಕ್ಕಂ ಇಂದ್ರಗೋಪದ ಸಂದಣಿಗಂ ಶೀಕರದ ಶೀತಕ್ಕಂ ತುಂತುಱ ತಿಂತ್ರಿಣಿಗಂ ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ ಕಾಲ್ಪೊನಲ ಕಡುಪಿಂಗಂ ಪೆರ್ಮೊರಡದ ಕಳ್ತಲೆಗಂ ಮಱ್ತಳ ಭಯಾನಕಕ್ಕಂ ಕ್ರೂರಮೃಗದ ರೌದ್ರಕ್ಕಂ ಉಗ್ರಸರ್ಪಂಗಳದ್ಭುತಕ್ಕಂ ಅರಣ್ಯದಾಘೋರತೆಯಿಂ ಕೋಡದೆ ಕೊಂಕದೆ ಜಾಡದೆ ಬಳ್ಕದೆ ನಡೆಯದೆ ನೇಡುಗೊಳ್ಳದೆ ಬೆಚ್ಚದೆ ಬೆದಱದೆ ಒಲಿಂಗೆಡದೆ ಮನಂಗುಂದದೆ ಕೆಲಸಂ ನಾರದೆ ಸಹಾಯಮಂ ಪಾಱದೆ ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದಪರ್ಣೆಯೊಪ್ಪುತ್ತುಮಿರೆಯಿರೆ,

ಜಯವಿಜಯೆಗಳಱಿದು ಶಿವ-
ಪ್ರಿಯೆಯುಗ್ರತಪಃಪ್ರಭಾವಭಾಸುರೆ ಪುಣ್ಯೋ-
ದಯಶೀಲೆ ಶಾಂತೆ ಪಾರ್ವತಿ
ಜಯಜಯಜಯರಕ್ಷಿಸೆನುತುಮೆಂದಿಂತೆಂದರ್ ೫೯

ಮಾಣ್ದುದು ಮಳೆ ಶರದಮಳತೆ
ಪೂಣ್ದುದು ಕಳಹಂಸಮಾಲೆ ಮೆಲ್ಲನೆ ಬಿಲದೊಳ್
ಕಣ್ದೆಱೆದುವು ತೊಳತೊಳಗು-
ತೆಣ್ದೆಸೆ ನೆರೆ ತಿಳಿದುವೀಗಳಪ್ಪಾರಗಜೇ ೬೦

ಚಂಪಕ

ಜನವನುರಾಗವೇಱೆ ಪೊರಮಟ್ಟು ಕೃಷಿವ್ಯವಸಾಯವೃಂದಮಂ
ಮನದೊಲವಿಂದೆ ಮಾಡುತಿದೆ ಕೋಟರದಿಂ ನೆಗೆತಂದು ಪಕ್ಷಿಗಳ್
ಕೊನೆದಳಿರ್ಗೊಂಬಿನೊಳ್ ಬಿಸಿಲನಾಂತಿವೆ ಹಂಸಕುಲಂ ಬಿಲಂಗಳಿಂ
ದನುಮಿಷೆ ಕೂಡೆ ಪೊಣ್ಮುತಿವೆ ಪಾರ್ವತಿ ನೋಡ ಶರದ್ವಿಳಾಸಮಂ ೬೧

---

೧. ವಾರಿ ( ಮ. ಬ. ಕ. ) ೨. ಕಾರಿರುಳ ( ಕಾ. ಬೆ. ಬ. ಯು. ಗೊ. ಗ. ); ಇರುಳ ( ವಾ. ಡ. ಸೆ. ) ೩. ಭೀಮರದಾ ( ಕಾ. ) ೪. ದಗಜೆ ( ಡ. ) ೫. ಭಾಸುರೆ ( ದಾ ) ೬–೬. ಶೀಲೆಯು ಕಲಿ ( ಬ. ); ಶೀಲೆ ಕಲಿಯು ( ಗೊ. ) ೭. ನೋಡಿ ( ಕಾ. ಬೆ. ಯು. )

ರವಿಕಿರಣಂ ನೀರ್ದೋಱು-
ತ್ತಿವೆ ತಣ್ಪಂ ಬೀರುತಿವೆ ರಥಾಂಗಕುಲಂಗಳ್
ತವೆ ತಣ್ಬಿಸಿಲೊಳ್ ನಿಂದಿ-
ರ್ದಿವೆ ಮೇಘಂ ಹಿಂಡಿ ಹರಹಿದ್ದಂತಿವೆ ನಭದೊಳ್ ೬೨

ಪರೆದುವು ಪಯೋಧರಂಗಳ್
ಬರುತಿವೆ ಕಳಹಂಸಮಾಲೆ ಬಿಸಿಲೊಳ್ ವಿಹಗಂ
ನೆರೆದಿವೆ ಮೃಗಸಂತತಿ ಗ-
ಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ ೬೩

ತಿಳಿದುವು ದೆಸೆಗಳ್ ಹಂಸಾ-
ವಳಿ ಸಾರ್ದುವು ಪೂರ್ಣಸರಸಿಯಂ ಬಿಸಕಂದಂ
ಮೊಳೆವೋದುವು ಸಲಿಲಂ ನಿ-
ರ್ಮಳಮಾದುವು ತಳೆದುದಾಗಸಂ ಧವಳತೆಯಂ ೬೪

ಎಂದು ಜಯವಿಜಯೆಗಳ್ ಬಿನ್ನಪಂಗೆಯ್ದು,

ಇದುವೆ ಶರತ್ಸಮಯಂ ಮೇ-
ಲೊದವುತ್ತಿರೆ ಶೀತಕಾಲಮುಗಸುತೆ ಕಾಸಾ-
ರದ ಕೆಱೆಗಳ ತೊಱೆಗಳ ಚೆ-
ಟ್ಟದ ತಳ್ಪಲ ಹಿಮದೊಳೆಸೆಯೆ ಮಾಳ್ಪುದು ತಪಮಂ ೬೫

ಎಂದು ಜಯವಿಜಯೆಗಳ್ ಬಿನ್ನಪಂಗೆಯ್ದ ಚಿತವಚನಾನೀಕಮನಾಕರ್ಣಿಸಿ ಲೋಕೈಕಬಂಧು ಸಾಕಾರಸುಧೆಯೆನಿಪ ಮಹಾದೇವಿ ಮಳೆಗಾಲಂ ಮಾಣ್ದುದಂ ಮನದೊಳಱಿದು ಬಡವಾದೊಡಲಂ ಬಿಡದೋಲಗಿಪ ನಾರಸೀರೆ ನಯವೇಱೆ, ಪೊಱಗಣ ಮಳೆಯಿಂ ನಾಂದ ಮೆಯ್ಯ ನೀರ ಬಣ್ಣಮಂ ತಣ್ಣೆಳಲೊಳಾಱಿಸಿ ಧ್ಯಾನಾನಂದರಸದ ಸೋನೆಯಿಂದೊಳಗೆ ನಾಂದ ಕರಣಂಗಳನುಸಿರೊಳಾಱಿಸುತ್ತುಂ ತಪೋಭಾನೂದಯಕ್ಕೆ ಮುಖಕಮಳದಳಂ ಬಿರ್ಚುವಂತೆ ಮೆಯ್ಯ ಸಂಪುಟಮಂ ಬಿರ್ಚಿ ಕಣ್ದೆಱೆದು ಮುಂದಿರ್ದ ಸಹಚರಿಯರಂ ಕಂಡು,

---

೧. ತಣ್ಪಿಂ ( ಕಾ. ಬಿ. ಮ. ) ೨. ಕಳೆದು ( ಕಾ. ); ತೆಱೆದು ( ಕ. )

ಜಳಧರದೊಳಗಿಂದಂ ಶಶಿ-
ಕಳೆ ಪೊಱಮಡುವಂತೆ ಪರ್ವಿದಾಲದಮರದಿಂ
ಗಳಿಲನೆ ಪೊಱಮಟ್ಟಳ್ ಕೋ-
ಮಳೆಯರ್ ಕೆಯ್ಯುಗುಡೆ ಭವಾನಿ ಮೆಲ್ಲಡಿಯಿಡುತುಂ ೬೬

ನಡೆತಂದು ಮಂಜು ನೆಱೆ ಮಾ-
ಗ್ಗೊಡೆ ಶೀತಂ ಮಾಣದಿರ್ಪ ತಣ್ಣೆಳಲೊಳ್ ಕಂ-
ಪಿಡಿದ ಲತಾಗೇಹಂಗಳ
ನಡುವಣ ಕಾಸಾರತಟದೊಳಂಬಿಕೆ ನಿಂದಳ್ ೬೭

ಅಂತು ನಿಂದಿರೆಯುರೆ,

ಇತ್ತಲ್ ಭೂತಳದೊಳ್ ಹಿಮ-
ಮೊತ್ತರಿಸಿತು ಭುವನಜನಮನುಱೆ ನಡುಗಿಸುತುಂ
ಸುತ್ತುತ್ತುಂ ಸುಗಿಯುತ್ತುಂ
ಮುತ್ತುತ್ತುಂ ಮುಂದುಗೆಡಿಸುತುಂ ಮುಸುಕಿಡುತುಂ

ಅಂತುಮಲ್ಲದೆಯುಂ,

ಮೃಗಸಂತತಿಯಂ ಕೊಳರ್ವ-
ಕ್ಕೈಗಳಂ ಪಕ್ಕಿಗಳನದ್ರಿತಟದೊಳ್ ಕೊಳನೊ-
ತ್ತುಗಳೊಳ್ ಕೋಟರದೊಳ್ ಮಿಗೆ
ಪುಗಿಸುತ್ತುಂ ಬಂದನಮಮ ಶಿಶಿರನೃಪಾಲಂ ೬೯

ಅಂತು ಬಂದು,

ಮತ್ತೇಭ

ಕಿಡಿಗಳ್ ಕೆಚ್ಚನೆಯಾಲಿಕಲ್ಲುರಿಯ ಮೊತ್ತಂ ಕೆಂಧಳಿರ್, ಕೆಂಡದೊಂ-
ದಡಕಿಲ್ ಮಾಣಿಕದಿಂಡೆ ಕಾಯ್ಪು ತಪನಂ ಚಂದ್ರಂ ಪೊದಳ್ದ ತಪಂ
ಗಡ ಬೆಳ್ದಿಂಗಳೆಸಿಪ್ಪುದೊಂದು ಪೆಸರಂ ತಾಂ ಮಾಡಿವಂತಿರ್ದುದಾ
ಕಡುಪಿಂ ತನ್ನಯ ಕಾಲದಲ್ಲಿ ಹಿಮರಾಜಂ ಧಾರಿಣೀಚಕ್ರದೊಳ್ ೭೦

೧. ನವಿಯು ( ಮ. )

ಮತ್ತಮಲ್ಲದೆಯುಂ,

ಮಿಗೆ ಬೆಮರಜಿತುದು ನೀರಡಿ-
ಕೆಗಳಿಂಗಿದುವುಷ್ಣದುಸಿರಡಂಗಿತು ತಪನೂ-
ಗೊಗೆದುದು ಪೆರ್ಚಿದ ತಣ್ಪ-
ಗ್ನಿಗೆ ಶೀತಂ ಪತ್ತಿತೆನನೆಂಬೆಂ ಹಿಮದೊಳ್ ೨೧

ಸಲೆ ರವಿ ತೇಜಂಗುಂದುತೆ
ಸಿಲಲಂಜುತೊತ್ತೋಡಿ ಪುಗುವನದ್ರಿಯ ಮಱೆಯೊಳ್
ಗೆಲೆ ಹರಿವ ಹಾವುರಿವ ಕ್ರಿ-
ರ್ಚಲೆ ನಿಂದುವು ಶಿಶಿರನೃಪತಿಯಾಜ್ಞೆಗೆ ಜಗದೊಳ್ ೨೨

ಮತ್ತಮಲ್ಲಿ,

ಉದಯಂ ಶೀತೋದಯಮು-
ಗ್ಗದ ಮಧ್ಯಾಹ್ನಂ ತುಷಾರಮಧ್ಯಾಹ್ನಂ ಮಿ-
ಕ್ಕುದುದಸ್ತಮಯಂ ತಾನು-
ಷ್ಣದಸ್ತಮಯಮೆನಿಸಿತಮನು ಹಿಮವಿಭ್ರಮದೊಳ್, ೨೩

ತಿಳಿವೊಡೆ ಶಶಿ ರವಿ ರವಿ ಶಶಿ
ಬೆಳಗುವ ಜೊನ್ನಂ ಬಿಸಿಲ್ ಬಿಸಿಲ್ ತಾಂ ಜೊನ್ನಂ
ಚಳಿ ಬಿಸುಪು ಬಿಸುಪು ಚಳಿಯೆನೆ
ಬಳೆದುದು ಹಿಮರಾಜತೇಜಮಾ ಜಗದೆಡೆಯೊಳ್ ೨೪

ಆ ಸಮಯದೊಳ್,

ಪಲ್ಲಜಿಯೊಳೆ ಹುಹುಹೆಂಬಾ
ಚೆಲ್ವುಗಡಣೆಯೊಳೆ ಹಸ್ತದಂಡಿಗೆಯೊಳ್ ತಾ-
ನೊಲ್ಲನ್ನಂ ಶಿಶಿರನಟಂ
ಸಲ್ಲನ್ನಂ ಜನವನಾಡಿಸಿದಸುರ್ವರೆಯೊಳ್ ೨೫

೧. ನೆಲೆ ( ಕೊ. ) ೨. ಮೂ ( ಬ. ಯ. ) ೩. ಸಾಲ್ಸನ್ನಂ ( ಕಾ. )

ನುಡಿಯೆ ಹುಹು, ನಡೆಯ ಮಾತೇ-
ಕೊಡಲೇ ಪ್ರಾಣಂಗೆ ಚಳಿಯ ಕುಪ್ಪಸಮಾಯ್ತೆಂ-
ದೊಡೆ, ಹಿಮದ ಮಹಿಮೆಯಂ ಪೇ-
ಳ್ವೊಡೆ ಕೇಳ್ವವನಾವನೊರ್ವನುರ್ವೀತಳದೊಳ್ * ೭೬

ಉಜ್ಜಿ, ಶೀತಂ, ಪತ್ತಿದೊಡಿರ-
ಲಜ್ಜೆಯದೆ ಜೀವಂ, ಬಿಗುರ್ತು, ಜಠರಾಗ್ನಿಯನೆ-
ಳ್ಚ ಜ್ಜಿಸೆ, ಹೊಗೆಯುಸಿರ ಪಥದಿಂ
ಪೊಜಮಡುವುದು, ಜನದ, ಮುಖದೊಳಲ್ಲದೊಡುಂಟೇ. * ೭೭

ಮತ್ತಮಲ್ಲದೆಯುಂ,

ಈಕ್ಷಿಸಿದಳೆಳಸಿ, ಬಸಿತದ
ರಕ್ಷೆಯನೊಸದಿಟ್ಟು, ಮಂಜಿನಿಂ ತೂಪಿಜಿದುದ್ದಿ,
ಶಿಕ್ಷಿಸಿ, ಬಲ್ಪಿಂದೂಡುತ್ತೆ
ರಕ್ಷಿಸುವಳ್ ಶೀತಮಾತೆ, ಶಿಶಿಬಾಲಕನಂ. ೭೮

ಒದವಿ, ಧರಾತಳದೊಳ್, ತೀ-
ವಿದ, ಶೀತಕ್ಕಂಜಿ, ಕಂಪಿಸುತ್ತುಂ, ನಿಲಲಾ-
ಜದೆ, ಬಡವಾಗಿ, ಕರಂ, ಕಾ-
ಷ್ಠದೊಳಗೆ, ಪೊಕ್ಕಂ, ಕೃಶಾನುವೇನಂ, ಪೇಳ್ವೆಂ ೭೯

ಮತ್ತಮಾ ಶೀತಾತಿಸಮಯದಲ್ಲಿ,

೧. ಕಡೆ ( ಕಾ. ಬಿ. ಯ. ). ೨. ನೊಡಲೇ (ಕಾ. ಬಿ. ಯ.). ೩–೩. ೪ | ಳ್ವೊಡೆ ಬಲ್ಲಿದನಾವನೋರ್ವ-
ನುರ್ವೀತಳದೊಳ್ ( ಕಾ. ಕ. [illegible] ಪೇ | ಳ್ವೊಡೆ ಕೇಳ್ವನೊಬ್ಬನಿಲ್ಲವೀ ಧಾರಿಣಿಯೊಳ್ ( ಯ ).
೪. ಈಕ್ಷಿಸುತೆಳಸಿ ( ಬ. ಯ. ) ೫. ತೂಪಿಜಿದಳ್ ( ಕಾ ). ೬. ರಕ್ಷಿಸುವಳ್ ( ಕಾ. ಬ. ).
* ೭೬ ಮತ್ತು ೭೭ ನೆಯ ಪದ್ಯಗಳು ಬ. ಪ್ರತಿಯಲ್ಲಿಲ್ಲ.

ಮುಚ್ಚಿ ಮುಸುಂಕಿದ ಹಿಮಮಂ
ಕಿಚ್ಚಿಂದಂ ಕಳೆಯಲಾಱದಿಳೆಯ ಜನಂಗಳ್
ಚೆಚ್ಚರವೆಯ್ತಂದೊಲವಿಂ-
ದಚ್ಚರಿ ವಿರಹಿಯನೆ ಕಾಯ್ದು ಕಳೆವರ್ ಚಳಿಯಂ ೮೦

ಪರಿಪೂರ್ಣತಟಾಕದ ಮೇ-
ಲುರಿಯಿಲ್ಲದೆ ಧೂಮಮೊಗೆವುತಿರ್ಪ ಮಾಗಿಯೊಳ
ತ್ಯುರುತರಗುರುತರತಾಪ-
ಕ್ಕಿರಲಾಱದೆ ವಿರಹಿ ಪೊಕ್ಕು ಮುಳುಗದೆ ಮಾಣಂ ೮೧

ಪುಟ್ಟಿತು ಚಳಿ ಬೆಳೆದುದು ಚಳಿ
ಕೊಟ್ಟುದು ಚಳಿ ಕೊಂಡುದೆಲ್ಲಮುಂ ಚಳಿಚಳಿಯೆಂ-
ದುಟ್ಟುದು ಚಳಿ ತೊಟ್ಟುದು ಚಳಿ
ಮೆಟ್ಟಿತು ಚಳಿ ಮುಟ್ಟಿತೆಲ್ಲ ಚಳಿ ಪೊಸಚಳಿಯೊಳ್ ೮೨

ಎಂಬ ಕೌತುಕಮನೊಳಕೊಂಡು,

ಈ ತೆಱದಿಂ ನೆಱೆ ಪರ್ಬಿದ
ಶೀತದೊಳಗಜಾತೆ ನೂತ್ನಸುರುಚಿರಸರಸೀ-
ವ್ರಾತಮದೆಲ್ಲಿ ಘನಾಚಳ-
ನೈತಂಬಮದೆಲ್ಲಿಯಲ್ಲಿ ತಪದಿಂ ನಿಂದಳ್ ೮೩

ಇಂತು ಸಿದಾಘನಿಷ್ಠುರತೆಯೊಳಂ ಮಳೆಗಾಲದ ಪ್ರಳಯಜಲದೊಳಂ ಮಾಗಿಯ ಮಹಾಶೀತಲದೊಳಂ ಭಾಳಲೋಚನನ ಭಾಮಿನಿ ಗಂಗಾಧರನ ಗರುವೆ ಚಂದ್ರಧರ ಸರಸಿಯೆನಿಸ ಗಿರಿರಾಜತನೂಜೆಯಿರ್ದ ನಿರುಪಮಮಾನತಪಃಪ್ರಭಾವಂ ವಿರೂಪಾಕ್ಷನ ಕರಣಂಗಳೊಳ್ ಜೆರಸಿ ಬಳೆಯೆ ಪುರಹರನೆಳ್ತು ಕೆಚ್ಚುಗಟ್ಟಿದ ಧೈರ್ಯಮ-ನೊಡೆದು ಮೂಡಿ ಪಿಡಿದೆಳೆವ ಕಾರುಣ್ಯಕ್ಕೆ ಪಕ್ಕಾಗಿ ಪನ್ನಗಭೂಷಣನಿನ್ನಿರಲ್-

೧. ಗಳ (ಕೊ) ೨. ಶಿವೆ (ಯ). ೩. ಬಳಿವುದು (ಮ. ಯ.). ೪. ತಪದಿಂದಿರ್ದಳ್ (ಕೊ).

ಬಾರದೆಂದು ತನ್ನೊಳ್ ಬಗೆದತಿಸ್ವತಂತ್ರಂ ಗಿರಿಜೆಯ ಮನಮನೊರೆದು ನೋಡುವ [೧]ಭರದಿಂ ಬಂದು ನಿಂದು,

ದಶಭುಜಮಂ ಪಂಚಾಸ್ಯಮ-
ನಶೇಷಭೀಮಾಂಗವಿತತಿಯಂ ತನುವಿನೊಳಂ
ವಶಮಂ ಮಾಡುತಡಂಗಿಸಿ
ಪಶುಪತಿ ವಟುವೇಷದಿಂದಮೊಪ್ಪುತ್ತಿರ್ದಂ ೮೪

ಗಿರಿಸುತೆಯಂ ಕಾಣ್ಬನ್ನಂ
ವರಪರಮಬ್ರಹ್ಮಚರ್ಯದಿಂದಂತಾನಿ-
ರ್ದಿರವಂ ತೋಱುವ ತೇಜದಿಂ
ಗಿರಿಶಂ ವಟುವೇಷಮಂ ವಿರಾಜಿಸೆ ತಳೆದಂ ೮೫

ಅಂತು ತಳೆದು,

ಮತ್ತೇಭ

ಮಿಗೆ ಶೀತಾಂಶು ಚಕೋರಿಯಲ್ಲಿಗೆ ವಸಂತಂ ರಾಜಿಪುದ್ಯಾನದ-
ಲ್ಲಿಗೆ ಸೂರ್ಯಂ ಸರಸೀಜದಲ್ಲಿಗೆ ವರಪ್ರಾಣಾನಿಳಂ ದೇಹದ-
ಲ್ಲಿಗೆ ಮೇಘಂ ಶಿಖಿಯಲ್ಲಿಗೊಪ್ಪುವ ಮರಾಳಂ ಪೂರ್ಣಕಾಸಾರದ-
ಲ್ಲಿಗೆ ಬರ್ಪಂತೆ ಭವಾನಿಯಲ್ಲಿಗಭವಂ ಬಂದಂ ಜಗದ್ವಲ್ಲಭಂ ೮೬

ಇಂತು ಭೂಲೋಕಕ್ಕಿಳಿತಂದು ಹೇಮಕೂಟದೊಳ್ ಹೈಮವತಿಯಿರ್ಪ ತಪೋವನಮಂ ಪುಗುತರ್ಪಾಗಳ್,

ಚಂಪಕ

ಬರೆ ಗಿರಿಶಂ ವಸಂತಋತುವಲ್ಲಿಯೊಡಂ ಮುದದಿಂದೆ ಭೋಂಕನಂ-
ಕುರಿಸಿತು ಮಾವು ಪಲ್ಲವಿಸಿತಲ್ಲಿಯಶೋಕೆ ವಸಂತದೂತಿಯೊ-
ಪ್ಪಿರೆ ನೆಱೆ ಪೂತುದೆನ್ನ[೨]ಭೃತಸನ್ನುತಿಯಿಂ ಕರೆದತ್ತು ಮಲ್ಲಿಕಾ-
ಪರಿಮಳಭಾರದಿಂ ಕುಸಿದು ಮೆಲ್ಲನೆ ತೀಡಿತು ದಕ್ಷಿಣಾನಿಳಂ ೮೭

---

೧. ಭರದಿಂದೆಳ್ದು ( ಯ. ಬಿ ಬ. ) ೨. ನೆಪದಿಂ ( ಗೊ. ಗ. ) ೩. ಭವಂ ಭಾಸುರಂ ( ಪ. ಬ. ಅ. ಕ. )

ಅಂತು ತೀಡೆ,

ಜಯೆವಿಜಯೆಗಳಿದು ಪೊಸತತಿ-
ಶಯಮೀ ಶಿಶಿರದೊಳಿದೇಂ ಭವಾನಿ ವಸಂತೋ-
ದಯಸೂಚನೆಯಾದುದು ನಿ-
ಮ್ಮಯೆ ಪುಣ್ಯತಪಃಪ್ರಭಾವಕಾರಣಮಲ್ತೇ ೮೮

ಚಂಪಕ.

ಎನುತಿರೆ ಬಂದು ಭಾವಿಸಿ ತಪೋವನಮಂ ಶಶಿಮೌಳಿ ಪೊಕ್ಕು ನೆ-
ಲ್ಲನೆ ಬರುತ್ತುಂ ಪಥಶ್ರಮವನಾಂತು ಬಳಲ್ದವೊಲಾಗಿ ತೇಂಕುತುಂ
ಮನದೊಳನೂನಸಂಘದಮನೆಯ್ದುತುಮೀಕ್ಷಿಸುತಿರ್ಕೆಲಂಗಳಂ
ಘನಮಹಿಮಂ ಸ್ವತಂತ್ರವಿಭು ಪೊರ್ದಿದನೊಂದು[೧] ವಿನೂತ್ನಚೂತಮಂ

ಇಂತು ಪೊರ್ದಿ ಕಪಟವಟುವೇಷಮಂ ತಳೆದ ಕಪರ್ದಿ ಪಾರ್ವತೀದೇವಿಯರ್ ತಪವೊಳಿರ್ಪ ಸೀಮ್ನಾಸಮೀಪದ ವಿಶಾಲಬಾಲಚೂತಶೀತಳಚ್ಛಾಯೆಯೊಳ್ ಕುಳ್ಳಿರೆ ಸಹಚರಿಯರಪ್ಪ ಜಯವಿಜಯೆಗಳ್ ಕಂಡು,

ತರಳನಪೂರ್ವಿಗನತಿಥಿ-
ಸ್ವರೂಪನೀಷದ್ವಿಭೂತಿಲಸಿತಲಲಾಟಂ
ವರವಿಪ್ರನೆನುತೆ ಬಂದಾ-
ದರಿಸಿದರೊಲವಿಂದೆ ಚರಣತಳಮಂ ತೊಳೆದರ್ ೯೦

ಅಂತು ತೊಳೆದು,

ಎಳವಾಳೆಯ ಸುಳಿಯೆಲೆಯೊಳ್
ನಳನಳಿಸುವ ಕಂದಮೂಲಮಂ ನವಜಂಬೂ-
ಫಳಮಾಮ್ರಫಳಂ ಕದಳೀ-
ಫಳಂಗಳಂ ತೀವಿ ತಂದು ಮುಂದಿಳಿಪುತ್ತುಂ ೯೧

---

೧. ಪಿನೂತ ( ಕಾ. )

ಎಲೆಯತಿಥಿ ಬೆಳಲ್ದಿರಿವಿಾ
ಫಲದಿಂದಂ ನಿಮ್ಮ ಪಸಿವನುಡುಗಿಸಿಯೆನೆ ಹೈ-
ಫಲವಂ ಕೆಯ್ಕೊಂಡಪೆವೀ
ಲಲನೆಯದಾರ್ ತಪವಗಣ್ಯವಾವನ ಪುಣ್ಯಂ ೯೨

ಎಂದು ನುಡಿಯೆ ಜಯೆವಿಜಯೆಗಳ್ ಕೇಳ್ದು,

ಇವರಿರವಿನ ಚಿಂತಾರತ್ತಿ
ನಿವಗೇಕೀ ಕ್ಷುಧೆಯನೀ ಫಥಶ್ರಮಮಂ ಶಿ-
ಥಿಲವ ಬಗೆಯಂ ಬೇಗಂ ಮಾ-
ಡುವುದೆನೆ ನಸುನಗುತೆ ವಿಪ್ರನಂದಿಂತೆಂದಂ ೯೩

ಬೆಸಗೊಂಡೊಡೆ ದೋಷಮೆ ಈ
ಪೊಸಕನ್ನೆ ತಪೋನಿರೋಧದಿಂದಿರ್ದೊಡೆ ಸೈ-
ರಿಸಬರ್ಪುದೆ ತಪಮಂ ಮಾ-
ಣಿಸುವವರಿಲ್ಲಾ ಸಹಾಯಸಂಪದಮಿಲ್ಲಾ ೯೪

ಎನೆ ಕೇಳ್ದು ಗಿರಿಜೆ ಮನದೊಳ್
ಮುನಿಯುತ್ತುಂ ಜಪವನುಡುಗಿ ಜಪಮಾಲೆಯನೊ-
ಯ್ಯನೆ ಕೆಯ್ಯೊಳೋಸರಿಸಿ ಮೆ-
ಲ್ಲನೆ ಕಣ್ದೆಱೆಯುತ್ತೆ ಕಂಡಳಾ ವರವಟುವಂ ೯೫

ಆ ಸಮಯದೊಳ್,

ಇಂದುಗೆ ಮೇಘಂ ಕವಿದೊಡ-
ಮಂದೀ ಲೋಕಕ್ಕೆ ತಣ್ಪು ತಪ್ಪದ ತೆಱದಿಂ-
ದಿಂದುಧರಂ ವರವಟುವೇ-
ಷದಳೆದೊಡನಗಜೆಗಾದುದತಿಹರ್ಷವ್ಯುಖಂ ೯೬

೧. ಬಳಲ್ದಿರೆವಿಾ ( ಕಾ. ಬಿ. ) ೨. ನಡಗಿಸಿಪೆನೆ ( ಅ. ) ೩. ಕಂಡು ( ಹ. ) ೪. ಸಂಪದರಿಲ್ಲಾ ( ಮು. ); ಸಂಪದಮಿಲ್ಲಂ ( ಅ. ); ಸಂಗಡಮಿಲ್ಲಾ ( ದಾ. ) ೫. ಕೆಯ್ಯೊಳ್ ತೊಡಚರ್ಚುತೆ (ಮ. ಕ.); ಕೆಯ್ಯೊಳೊಡರಿಚಿ (ಬ. ಯು. ದಾ. ಗೊ. ಡ. ) ೬. ನೋಡುತೆ ಬೇಗ ( ಅ. )

ಅಂತು ಹರ್ಷವನಿಮಿತ್ತಮೇಕಾದಪುದೆಂದು ನಿಮಿತ್ತಮನಱಿಯದೆ ಬೆಱಗಾಗಿ ನೋಡುತಿರ್ಪಲ್ಲಿ

ಗಿರಿಸುತೆಯ ಮಧುರದೃಷ್ಟಿಗ-
ಳುರವಣೆಯಿಂ ತಾಗೆ ತನ್ನನಾಗಳ್ ವಿಪ್ರಂ
ಕರಗಿ ನಿಲಲಾರದೆಲ್ಲಾ-
ತುರಪುಳಕಮನಂತುಮಿಂತು ಸಂತಮಿಡುತ್ತುಂ

ನೆಗೆವ ಜಡೆಮುಡಿಯನೊತ್ತು-
ತ್ತೊಗೆವ ಭುಜಾಳಿಯನಡಂಗಿಸುತ್ತೂರುಗಳಿಂ
ಮಿಗುವ ವೃಷೇಂದ್ರನನೌಂಕು-
ತ್ತಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತುಂ ೯೮

ಎಂತಾನುಂ ನಿಜರೂಪಂ
ಸಂತವಿಡುತ್ತಲ್ಲಿ ವಿಪ್ರನತಿಧೈರ್ಯತೆಯಂ
ಮುಂತಿಟ್ಟು ಗಿರಿಜೆಯೊಡನುಸಿ-
ರ್ದಂ ತಡಬಡಿಸುತ್ತೆ ಮಿಸುಪ ಪೊಸಪುಸಿವಾತಂ ೯೯

ಈ ಸುಕುಮಾರತೆಯಿಾ ನಿ-
ವೀ ಸುಕರತೆಯಿಾ ನವೀನಯೌವನಮದವೀ
ಭಾಸುರತೆಯಿಾ ಸುಧಾಮಯ-
ವೀ ಸುಖದೊಳ್ ತಪಮಿದೆಂತು ಬಂದುದು ಮುಗ್ಧೇ ೧೦೦

ನಿನಗೇಕೀ ತರುಣತೆಯೊಳ್
ಘನತಪವೆಡೆಗೊಂಡುದಕಟ ಸವಲತೆಯಂ ಸೂ-
ರ್ಯನ ಬಿಸಿಲಿಂ ಕೊರಗಿಪ ದು-
ಷ್ಟನನೆನೆಗಱಿಪಬಲೆ ಸೌಕುಮಾರ್ಯಾವರಣೇ ೧೦೧

೧-೧. ಪರ್ಷಮುಖಮೇಕಾದುದೆಂದು ( ಕಾ. ಕ. ) ೨. ಯೊಡನೆ ( ಬಿ. ಬ.).

ಅಂತುಮಲ್ಲದೆಯುಂ,

ಎಳಗೆಂಪನ್ನುಗುಳ್ವ ಮೃದಕೋ-
ಮಳಪದ್ರಕಮಳಂಗಳೀಗಳತಿಕಠಿನಮೆನಿ-
ಪ್ಪಿಳೆಯೊಳ್ ಹರಹರ ಕಲ್ನೆಲ
ಕಳವಟ್ಟುವಿವೆಂತು ಬಾಲಹಂಸೀಯಾನೇ ೧೦೨

ಎಳವೆಳ್ದಿಂಗಳ ಸೊಂಕಿಂ-
ಗಳವಡದಳ್ಕುವ ಶಿರೀಷಸುಕುಮಾರಾಂಗಂ
ಬಳವತ್ಕರ್ಕಶತರದಿಂ
ಬಳಸಿದಿರ್ ನಾರಸೀರೆಗಾಂತುದು ಚಿತ್ರಂ ೧೦೩

ಎಳಲತೆಯಂ ಜರೆದಾಡುವ
ನಳಿತೋಳ್ ಕೋಕಂಗಳಂ ವಿಭಂಗಿಪ ಕುಚಮುಂ-
ಡಳಮುಸಿರಲುಪವನಪಥದ-
ತುಳೆಮಧ್ಯಂ ತಪದ ಕೋಟಲೆಗೆ ಸಂಗಡವೇ ೧೦೪

ಮಿಸುಗುವ ಶಶಿವದನಂ ಕಡು-
ವಿಸಿಲಿಂ ಕೊರಗಿತ್ತು ಕುಸುಮಮಾಳಿಕೆಯಿಂ ರಾ-
ಜಿಸುವ ಕಚಭಾರಮಯ್ಯೋ
ಪೊಸಜಡೆಯಂ ಪಡೆದುದಕಟ ಘನಯೌವನದೊಳ್ ೧೦೫

ಮತ್ತಮಲ್ಲದೆಯುಂ,

ಬಿಸಿಲೆನ್ನದೆ ಮಳೆಯೆನ್ನದೆ
ಶಿಶಿರಮಿದೆನ್ನದೆ ತೃಷೋನ್ನತಿ ಕ್ಷುಧೆ ನಿದ್ರಾ-
ವಿಸರಮುಮಂ ನೆಱೆ ಗೆಲ್ದೀ
ವಸುಮತಿ ಬೆಱಗಾಗೆ ತಪದೊಳಿರ್ಪವರುಂಟೇ ೧೦೬

---

೧-೧ ವುಂ ಭಸ್ಮೋದ್ಧೂಳಿತ | ಮಳ ( ಅ ).

ವನಜಾನನೆ ಏಱುಂಜ-
ವ್ವನದೊಳ್ ವನದೊಳ್ ನಿರೋಧದೊಳ್ ಪೇಳಿಂತಾ-
ವನನುದ್ದೇಶಿಸಿ ತಪಮಿದ
ನೆನಗಱಿಪಿದೊಡೇನೊ ದೋಷಮೇ ಮೃಗನಯನೇ ೧೦೭

ಎಂದು ಪ್ರೇಮಜನಪ್ರಣಯಕಲಹಕ್ರೀಲ್ಗಾಲೋಲಚಿತ್ತನಪ್ಪ ವಿರೂಪಾಕ್ಷಂ ಪರಮವಟುವೇಷದಿಂ ನುಡಿದ ಮೃದುಕಠಿನಾಕ್ಷೇಪಗರ್ಭಿತವಚೋವಿಳಾಸಮಂ ಶೈಳಜೆ ಕೇಳ್ದು ಚಿಂತೆಯಂ ತಾಳ್ದು,

ಪೆಸಗೊಂಡಪನವಮಳದ್ವಿಜ-
ನುಸಿರಲ್ ತಾಂ ಬಾರದುಸಿರದಿರಬಾರದೆನು-
ತ್ತುಸದೃಶತಪಮಂ ಮನದು
ಬ್ಬಸದಿಂದೆ ಭವಾನಿ ಮಾನಿ ಮೆಲ್ಲನೆ ನುಡಿದಳ್ ೧೦೮

ಬಗೆವೆರ್ಚೆ ಕೇಳುತಿರ್ದಪೆ
ಮಿಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ ಶಂ-
ಭುಗೆ ಕಾರುಣ್ಯಾಬ್ಧಿಗೆ ಶೂ-
ಲಿಗೆ ಕರುಣಂ ಪುಟ್ಟುವಂತೆ ತಪದಿಂದಿರ್ಪೆಂ ೧೦೯

ಎನುತುಂ ಗದ್ಗದಿಸುತೆ ಪುಳ-
ಕನಿಕಾಯಮನಾನುತಶ್ರುವಂ ಕಳೆಯುತ್ತುಂ
ಘನಹರ್ಷಚಿತ್ತೆಯಾಗು-
ತ್ತೆ ನಗೇಶ್ವರಪುತ್ರಿ ಶಂಕರನ ಪೆಸರ್ಗೊಂಡಳ್ ೧೧೦

ಎಂದು ವಿರೂಪಾಕ್ಷಂಗೆ ತಪಮಿರ್ದಪೆನೆಂಬ ನುಡಿಯಂ ಕೇಳ್ದು ದುಷ್ಟ-ಧರಾಮರನಟ್ಟಹಾಸದಿಂದಿಂತೆಂದಂ,

---

೧-೧ ನಿರೋಧದಿಂ ಪೇಳಿಂತಾ (ಕೊ). ೨. ಯಾನೇ (ಕ). ೩. ಮಾಣ್ದು (ಕಾ). ೪. ತಪದೊಳ್ ಬಂದಿಂ (ಬ. ಅ. ಪ. ಕೊ).

ಅಕ್ಕಕ್ಕು ಕಾಮಹರನೊಳ್
ಮುಕ್ಕಣ್ಣನೊಳಖಿಳವೇದಶಾಸ್ತ್ರಕ್ರಮಮಂ
ಮಿಕ್ಕವನೊಳ್ ಪಿತೃವನದೊಳ್
ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ ೧೧೧

ಉತ್ಪಲ

ಭೀಕರವಪ್ಪ ಶೂಲಿಯಭಿಲಾಷೆಯೊಳೀ ತಪವಾತನೇಕೆ ನೀ-
ನೇಕೆ ಕಪಾಲಿಯೇಕೆ ಲತೆಯೇಕೆ ಲಸತ್ಕುರಿಯೇಕೆ ರಂಭೆ ತಾ-
ನೇಕೆ ಕಶಾನುವೇಕೆ ಪೊಸಪೂವಿನ ಮಾಲೆಯದೇಕೆ ಭಾನುವೇ-
ಕಾ ಕುಮುದಂ ದಲೇಕೆ ಸಿಡಿಲೇಕೆ ಮರಾಳನದೇಕೆ ಲೋಕದೊಳ್ ೧೧೨

ನೀನಿನಿಯಳ್ ವಿಷಮಾತಂ,
ನೀನತಿಮೃದು, ಕಠಿನಗುಣಗಣಾಶ್ರಯನಾತಂ,
ನೀನಬಲೆ, ಯುಗ್ರನಾತಂ,
ನೀನುರುತರಭೀರು, ಸರ್ಪಭೂಷಣನಾತಂ, ೧೧೩

ಪುಲಿದೊವಲುಡುಗೆಯು, ಹಾವಿನ
ನೆಲೆದೊಡಿಗೆಯು, ನೊಸಲ ಕಣ್ಣು, ಖಟ್ವಾಂಗದ ಪಂ-
ದಲೆಗಳ ಮಾಲೆಯು, ಶೂಲದ
ಕಲಿಗಂಜದೆ ಮನವನೆಂತು ಮಾಡಿದೆ ಮುಗ್ಧೇ ೧೧೪

ಎಂದು ವಿಪ್ರಂ ನುಡಿದ ಶಿವನಿಂದೆಗೆ ಭವಾನಿ ಮುನಿದು ಕನಲ್ದು ಕಿಸಿಸಿ
ಕಿಡಿಕಿಡಿವೋಗಿ,

---

೧. ಅಕ್ಕೆ (ಕಾ. ಬಿ. ಮ.) ೨. [illegible] (ಬ.) ೩. ಗಳೇಕೆ (ಕಾ. ಬಿ. ಮ.)

ತಪವಂತದಿರ್ಕೆ ಮಾಡುವ
ಜಪವಿರ್ಕೆ ಮೃಗಾಂಕಮೌಳಿಯಂ ಭರದಿಂ ಧ್ಯಾ-
ನಿಪುದಿರ್ಕೆ ಶಂಭುವಂ ನಿಂ-
ದಿಪುದಂ ಕೇಳ್ವೊಂದು ಪಾಪಮಿಂದೆನಗಾಯ್ತೇ ೧೧೫

ಘೋರತಪದಲ್ಲಿ ಕೋಪಿಸ-
ಬಾರದು ತಾಂ ತಪದ ಕೇಡು ಪತಿನಿಂದೆಯುಮಂ
ಸೈರಿಸಬಾರದೆನುತ್ತೆ ವಿ-
ಚಾರಮನುೞಿದಗಜೆ ಮನದ ಮುಳಿಸಿಂದಾಗಳ್ ೧೧೬

ಆದ ನಿರೋಧದ ನಿಂದೆಯ-
ನಾದರಿಸದೆ ಭಸಿತದಿಂದೆ ವಿಪ್ರನನಿಡೆ ಪೋ-
ಪೋದುದು ವಟುವೇಷಂ ಶಿವ-
ನಾದೊಡವೇಂ ಪುಸಿ ದಿಟಕ್ಕೆ ನಿಲ್ಪುದೆ ಜಗದೊಳ್ ೧೧೭

ಆಗಳ್,

ಮುಗಿಲ ತೆಱೆ ಸರಿದ ಶಶಿಯಂ
ತೊಗೆದ ತಮಂ ತೆಗೆದ ತರುಣತರಣಿಯ ತೆಱದಿಂ
ಪೊಗೆ ತಳ್ಗಿದಗ್ನಿಯಂತಿರೆ
ಮಿಗೆ ವೇಷಂ ತೊಲಗಿ ಶಂಭು ತೊಳಗುತ್ತಿರ್ದಂ ೧೧೮

ಜಡೆಮುಡಿ ಪಂಚಮುಖಂ ನೆಗೆ-
ದ್ದುಡುಪತಿಕಳೆ ದಶಭುಜಂ ತ್ರಿಣೇತ್ರಂ ಗಾತ್ರಂ-
ಬಿಡಿದ ನವಭೂತಿ ಪುಲಿದೊವ-
ಲುಡಿಗೆಗಳಿಂ ಶಂಕರಂ ಕರಂ ಮೆಱೆದಿರ್ದಂ ೧೧೯

---

೧. ಚಿಂತೆಯು (ಅ.) ೨. ತಾಂ (ಕಾ. ಬೆ. ಯು.) ೩. ನಾದನಪೇಂ (ಕೊ.) ೪. ತೊಳಗುತ್ತಿರ್ದಂ [illegible] ( ಕಾ. ಬೆ ) ೫. ಜಡದೆಸೆವ ಭೂತಿ ( ಕಾ. ಬೆ. ಯು. )

ಆ ಸಮಯದೊಳ್,

ಸರಿದುದು ಪುಸಿವೇಷದ ತೆಱಿ
ಸುರಿದುದು ಕೆಯ್ನ್ನರ ತೆಱದೆ ಪ್ರೂವಳಿ ಸರಿಸಂ
ಬಿರಿದುದು ಜೀರಿಗೆಬೆಲ್ಲದ
ಪರಿಯಂ ಮುೞಿದಿಟ್ಟು ಭಸಿತಮದೆ ಮದುವೆಯವೋಲ್ ೧೨೦

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ದೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೨೧

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕರಂದಮಧುಕರಾಯಮಾನಸತ್ಕವೀಶ್ವರಹಂಸೆಯ ಹರಿಹರದೇವವಿರಚಿತಮಪ್ಪ

## ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್

ಪಾರ್ವತೀತಪೋವರ್ಣನಂ ವಿರೂಪಾಕ್ಷಪ್ರತ್ಯಕ್ಷಕರಣವರ್ಣನಂ ನವಮಾಶ್ವಾಸಂ



# ದಶಮಾಶ್ವಾಸಂ

## ಪಾರ್ವತೀಪರಮೇಶ್ವರವಿವಾಹವರ್ಣನಂ

ಶ್ರೀಗಿರಿಜಾವಲ್ಲಭನಖಿ-
ಳಾಗಮದುರ್ಲಭನಪಾರಸುಲಭಂ ಕಾರು-
ಣ್ಯಾಗಾರಂ ಭಕ್ತಿಯನೆಮ-
ಗೀಗೆ ಸದಾವರದಹಂಪೆಯ ವಿರೂಪಾಕ್ಷಂ ೧

ಆಗಳ್ ಕಂಡಗ್ಗಸುತೆ ಬೆಱ-
ಗಾಗುತೆ ಸರಿವರಿಸಿಕೊಳುತೆ ವಲ್ಕಲವಸನಾ-
ಭೋಗಮನತಿಲಜ್ಜಿತೆ ತಲೆ
ವಾಗಿದಳನುರಾಗಮೇಱೆ ಪುಳಕಿಸುತಿರ್ದಳ್ ೨

ಅವಳೋಕನದಿಂ ಸೆಳೆದಳ್
ಶಿವನಂ ಮನದಿಂದೆ ತೆಗೆದಳಪ್ಪಿದಳತ್ಯು-
ತ್ಸವದಿಂ ಚಿತ್ತದೊಳೆಳಸುತೆ
ತವಕಂ ಮಿಗೆ ಚುಂಬಿಸಿದಳಹಂಕಾರದೊಳಂ

ಆ ಸಮಯದೊಳ್,

ಚಂಪಕ.
ಉಡುಪತಿಬಿಂಬಮಂ ನಗುವನಿರ್ಮಳವಕ್ತ್ರಮನಾಸೆ ಮಿಕ್ಕು ಧೀಂ-
ಕಿಡುವ ಕಟಾಕ್ಷಮಾಲೆಗಳನುನ್ನತಪೀನಪಯೋಧರಂಗಳಂ
ಮೃಡನೊಸೆದೀಕ್ಷಿಸುತ್ತೆ ನಿಲಲಾಜಿದಪರ್ಣೆಯ ಪುಣ್ಯಹಸ್ತಮಂ
ಪಿಡಿದನಶೇಷದೇವಕುಳಮೌಳಿವಿರಾಜಿತಪಾದಪಂಕಜಂ ೪

ಅಂತು ಕೆಯ್ಯಂ ಪಿಡಿದು,

---

೧. ಮನದೊಳಗೆ ನಾಣ್ಚಿ (ಮ. ಬ. ಅ. ದಾ. ಕ.) ೨. ತೆಗೆದು ಬಿಗಿಯಪ್ಪಿದಳು (ಶಾ. ಶೆ. ಗೊ. ಗ) ೩. ಚಿತ್ತದೊಳಗಸುತೆ ( ಕಾ. ಗೊ. ಗ. ) ೪. ನಿಲಲಾಜಿದೆ ಕನ್ನೆಯು ( ಡ. )

ಚಂಪಕ.

ಗಿರಿಸುತೆಯಸ್ಮಜಂ ನಡೆಯುತಾರಗಿರೀಂದ್ರನಿವಾಸದಲ್ಲಿಗ-
ತ್ಯುರುತರಲೀಲೆಯಿಂದಮೆಸೆದೇವ ಗಿರೀಶ್ವರನಲ್ಲಿಯೆನ್ನನಾ-
ದರದೊಳೆ ಜೇಡಿಯೂರ್ಜಿತವಿವಾಹಮದಚ್ಚರಿಯಪ್ಪ ಮಾಳ್ಕೆಯಿಂ
ಕರುಣಿಪುದೆಂದುದಂ ಸಲಿಸವೇಳ್ಪುದು ಜೇಳ್ಪಿನಿದಂ ಸದಾಶಿವಾ ೫

ಎಂದಗಜೆ ನುಡಿಯೆ ಮಹಿಮಾ-
ವೃಂದನೊಡಂಬಡುತೆ ಸುಖದೊಳಿರ್ಪವಸರದೊಳ್
ಬಂದು ರತಿ ಮುಕುಳಿತಾನನೆ
ನಿಂದುಮ್ಮಳದಿಂದೆ ಮುಂದೆ ಮೆಯ್ಯಿಕ್ಕಿದಳ್ ೬

ರತಿ ಮೆಯ್ಯಿಕ್ಕಿರ್ದೊಡೆ ಪಾ-
ರ್ವತಿ ಬಿನ್ನಯ್ಸಿದಳಧೀಶ ಕೇಳೀ ಲಲನಾ-
ಪತಿಯಪ್ಪ ಕಾಮನಂ ಪಶು-
ಪತಿ ನಿಮ್ಮಿಂ ಪಡೆದುಕೊಡುವೆನೆಂದಾಂ ನುಡಿದೆಂ ೭

ಎನೆ ಕೇಳ್ದು ಶಂಕರಂ ಗಿರಿ-
ತನಯಾಮಧುರಾಸ್ಯಮಂ ನಿರೀಕ್ಷಿಸಿ ನಗುತುಂ
ನೆನೆದಾಗಳ್ ಕಾಮನನಂ-
ಗನಾಗಿ ಕುಡುತಿರ್ಕೆ ರತಿಗೆ ಸುಖಸಂಪದಮಂ ೮

ಎಂದು ಪಾರ್ವತಿಯೊಡನೆ ನುಡಿಯುತ್ತುಂ ರತಿಗೆ ಕಾಮನಂ ಸಂಕಲ್ಪಜನ್ಮನಂ ಮಾಡಿ ಕೊಟ್ಟು ಗಿರಿಜೆಯಂ ಗಿರಿರಾಜನಲ್ಲಿಗೆ ಪೋಗವೇಳ್ದು ದರ್ಪಕಪಿಸಿನದಾವಾನಳಂ ಗಜಾಸುರ ಕುಂಭನಿರ್ಭಿನ್ನಸಿಂಹಂ ಜಳಂಧರಕುಮುದನಿಲಯಾರ್ಕರೂಪಂ ಲಾಲಾಸುರಾಭ್ರಪಿಲಯಾನಿಲಂ ಕೀನಾಶವಿನಾಶಕರಂ ತ್ರಿಪುರಭಂಜನಂ ಚತುರ್ದಶಭುವನಚಕ್ರವರ್ತಿ ಸರ್ವಬ್ರಹ್ಮಾಂಡಸಾರ್ವಭೌಮನಾಭೀಳಭಾಳಾಂಬಕಂ ಶೂಲಧರಂ ಕೈಲಾಸಕ್ಕೆ ಬಿಜಯಂಗೆಯ್ದನಿತ್ತಲ್,

೧–೧. ಕಾಮನನಿ । ತ್ತನಂಗನಂ ಮಾಡಿ (ಮ. ಬ. ಪಾ. ಕ.) ೨. ಪಂಚಾನನಂ (ಅ.); ಪಂಚಾಸ್ಯಂ (ಗೊ.) ೩–೩. ಲಾಲಾಸುರಾದ್ರ್ಯದಾವಾನಳಂ (ದ.)

## ಪಾರ್ವತೀಪರಮೇಶ್ವರವಿವಾಹವರ್ಣನಂ.

ಗಿರಿಸುತೆ ಜಯೆವಿಜಯೆಗಳೊಡ-
ಸುರುತರಪುಷ್ಪಕಮನೇಱಿ ಬರುತಿರ್ದಳ್ ಶಂ-
ಕರನ ವರಮೂರ್ತಿಯಂತಃ-
ಕರಣಪ್ರಭೆಯೊಳಗೆ ತೊಳಗಿ ಬೆಳಗೆ ನಿರಂತಂ ೯

ಇಂತು[1] ಶಿವನಂ ನೆನೆಯುತುಂ ಹಿಮಾಚಳಮಂ ಕಳೆದು ನಿಜರಾಜಧಾನಿ-ಯೆನಿಸಿದೋಷಧಿಪ್ರಸ್ಥಪುರವರಮಂ ಪುಗುತರ್ಪಾಗಳ್ ಪಾರ್ವತೀದೇವಿ ಲಬ್ಧವರ-ಪ್ರಸನ್ನಮುಖಿಯಾಗಿ ತಪಮಂ ಬಿಟ್ಟು ಬರುತಿರ್ದಪಳೆಂಬ ಸಂತೋಷವಾರ್ತೆಯಂ ಕರ್ಣಪರಂಪರೆಯಿಂ ಗಿರಿರಾಜಂ ಕೇಳ್ದು ಸಂತಸಮಂ ತಾಳ್ದು,

ಪುಳಕಂ ಮುನ್ನೇಳುತ್ತಿರೆ
ಬಳಿಕಂ ತಾನೆಳ್ದು ಸಕಳಪರಿಜನಸಹಿತಂ
ಕಳಗೀತವಾದ್ಯನೃತ್ಯಂ-
ಗಳ ಮಂಗಳರವದ ನಡುವೆ ಗಿರಿಪತಿ ಬರುತುಂ[2] ೧೦

ಫಳತತಿಗಳ್ ತುಱುಗಿದ[3] ಗುಡಿ-
ಗಳ ಸೀಗುರಿಚಾಮರಂಗಳೊಟ್ಟಜೆಗಳ[4]ಮಂ-
ಗಳಕಳಶಂಗಳ ಕನ್ನಡಿ-
ಗಳ ಲಲನೆಯರೊಳಗೆ ನಡೆದನಗಕುಲರಾಜಂ ೧೧

ತರತರದೆ ನಡೆವ ಹಸ್ತ್ಯ-
ಶ್ವರಥಪದಾತಿಗಳ ಸಂದಣಿಗಳಂ ನೋಡು-
ತ್ತಿರಳುತ್ತು[5]ರ್ಬುತೆ ಕೊರ್ಬು-
ತ್ತುರವಣಿಸುತೆ ನಡೆದು ಬಂದನಗಕುಲರಾಜಂ[5] ೧೨

ಅಂತು ನಡೆದು ಬಂದು,

---

೧ ಹೇಮಕೂಟಾಚಳಮಂ ( ಅ ). ೨. ಬಂದಂ ( ಅ ). ೩. ಶೀಸಿದ ( ಅ ). ೪. ರೊಡನೆ (ಬ. ಮ).
೫-೫. ತ್ತುಣ್ಮು । ತ್ತುರವಣಿಸುತೆ ನಡೆದನಗಕುಲಾಧಿಪನೊಲವಿಂ ( ಕಾ. ಜೆ. ಬ. ಸೆ.

ಮತ್ತೇಭ

ಇದಿರ್ಗೊಂಡಂ ಗಿರಿರಾಜನೂರ್ಜಿತತಪೋವಿಸ್ತಾರೆಯಂ ಧೀರೆಯಂ
ಸದಲಂಕಾರನುನಾಂತ ಪಿಂಗಳಜಟಾಸಂಪನ್ನೆಯಂ ಚೆನ್ನೆಯಂ
ಮುದದಿಂ ವಲ್ಕಲವಸ್ತ್ರವಿಸ್ತರಿತಶೋಭಾಗಾತ್ರೆಯಂ ಸ್ತೋತ್ರೆಯಂ
ಸದೆದ್ದಾಹಾ ಗಿರಿಜಾತೆಯಂ ಸಕಳಕಾಂತಿಸ್ತೋಮೆಯಂ ರಾಮೆಯಂ

ಅಂತಿದಿರ್ಗೊಂಡು,

ಮತ್ತೇಭ.

ಭರದಿಂದಂ ನಡೆತಂದು ರಾಜಗೃಹಮಂ [1]ಸಂತೋಷದಿಂ ಪೊಕ್ಕು ಭಾ-
ಸ್ಕರಕೋಟಿಪ್ರಭೆಯಂ ಸಭಾಸದನದೊಳ್ ಬೀಱುತ್ತುಮಿರ್ಪುದ್ವನಿ-
ಸ್ತರಮಂ ತುಷ್ಟಿಯಿನೇಱಿ ಶೈಳಪತಿಯುಂ [2]ಶರ್ವಾಣಿಯುಂ ಸ್ನೇಹದಿಂ-
ದಿರೆ ಮೇನಾವಧು ಬಂದಳೀಕ್ಷಿಸಿದಳೀ[3]ಷದ್ಗಾತ್ರೆಯಂ ಪುತ್ರಿಯಂ ೧೪

ಅಂತು ಬಂದು ಕಟ್ಟಳ್ಕಱಿಂ ಮುಟ್ಟಿ ನೋಡಿ,

ಉತ್ಪಲ.

ತಾಯೆ ತಪೋನಿರೋಧದೊಳೆ ಮೆಯ್ ಬಱಾದುದು ಲೋಚನತ್ರಯ-
ಚ್ಛಾಯೆ ಬಳಲ್ದುದಾನನಸರೋಜಮುಣಂ ಕಳೆಗುಂದಿತುಜ್ಜ್ವಳ-
ಪ್ರಾಯಕುಚ[4]ದ್ವಯಂ ಕೊರಗಿದತ್ತು ಕಚಂ ಜಡೆಗಟ್ಟಿತಿಂತದ-
ನ್ಯಾಯಮಿದೇಕೆ ಪೋದೆ ಸುತೆ ಎಂತಳವಟ್ಟುದರಣ್ಯವಿಭ್ರಮಂ ೧೫

ಎಂದು ಮೇನಾದೇವಿ ಪಾರ್ವತಿಯಂ ನೋಡಿ ಕೊಱಗಿ ಬಾಡಿ ಬಳಲ್ದು ಕಂದು
ಕಳೆಗುಂದಿ ನುಡಿಯುತ್ತಿರ್ಪಾಗಳ್,

ಗಿರಿಪತಿಯನು[5]ಮತಿಯಿಂ ಸೌಂ-
ದರಿಯರ್ ನಡೆತಂದು ಪಾರ್ವತಿಯ ಜಡೆಗಳನೊ-
ಪ್ಪಿರೆ ಬಿಡಿಸಿ ಕಚಭರಮನತಿ
ಭರದಿಂ ತಿರ್ದುತ್ತುಮಿರ್ದರನ್ನೆಗಮಿತ್ತಲ್ ೧೬

೧. ಸಲ್ಲೀಲೆಯಿಂ ( ಅ ). ೨. ರುದ್ರಾಣಿ ( ಮ. ಯ. ಕ. ). ೩. ಳಾ ಸದ್ ( ಕೊ ). ೪. ದ್ವಯು ( ಕಾ. ಬಿ. ). ೫. ಮತದಿಂ ( ಯ. ಬಿ. ).

ಶ್ರೀಕೈಲಾಸದೊಳಿರ್ದು ಪಿ-
ನಾಕಿ ವಿವಾಹಾರ್ಥದಿಂದೆ ವರಮೂರ್ತಿಗಳಂ
ಲೋಕೋತ್ತಮರಂ ಪುಣ್ಯ-
ಶ್ಲೋಕರನಾ ಸಪ್ತಋಷಿಯರಂ ನೆನೆಯಲೊಡಂ ೧೭

ನೆನೆಯದ ಮುನ್ನಂ ಬಂದರ್
ವಿನುತಾಶೇಷರ್ ಜಟಾಧರರ್ ಭಸಿತಾಂಗರ್
ಘನಮುಹಿಮಾರುಂಧತಿ ಜೆ-
ನ್ನನೆ ಬರೆವರೆ ಸಪ್ತಋಷಿಯರತಿಮುದದಿಂದಂ ೧೮

ಬಂದಭವಂಗತಿಸುಖಮುಖ-
ದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತುಂ
ಸಂದಣಿಸಿ ಪುಳಕಮೇಳ್ತರೆ
ನಿಂದಿರ್ದು ಶಶಾಂಕಮೌಳಿ ಬೆಸನೇನೆನುತುಂ ೧೯

ಇರೆ ಕಂಡು ಕರುಣದಿಂ ಶಂ-
ಕರನಾ ಋಷಿಗಳ್ಗೆ ಬೆಸಸಿದಂ ಪೋಪುದು ಭೂ-
ಧರನಾಥನಲ್ಲಿಗತ್ಯಾ-
ದರಮಂ ಮಾಡುವುದು ಬೇಡುವುದು ಗಿರಿಸುತೆಯಂ ೨೦

ಎಂದೊಡೆ ಹಸಾದಮೆಂದಾ- ಪ್ರಸಾದವೆಂದು.
ನಂದಂ ಮಿಗೆ ಸಪ್ತಋಷಿಗಳನುನಯದಿಂದೆ-
ಯ್ತಂದರ್ ಮಂಡಿತಪುಷ್ಪಕ-
ವೃಂದಾರೂಢರ್ ನಗೇಶಪುರಮಂ ಪೊಕ್ಕರ್ ೨೧

ಆ ಸಮಯದೊಳ್,

---

೧. ಮರರುಂಧತಿ (ಕೊ.) ೨. ಗಳತಿ (ಕೊ.) ೩. ಬೆಸಸನೆ ಮತ್ತಂ (ಕಾ.)

ಮನದೊಳ್ ಪರಮೋತ್ಸಾಹಂ
ಜನಿಯಿಸಿ ಗಿರಿರಾಜನೆಸೆವ ಋಷಿಗಳನಿದಿರ್ಗೊಂ-
ಡನುನಯದಿಂ ತಂದುಚ್ಚಾ-
ಸನದೊಳ್ ಕುಳ್ಳಿರಿಸಿ ವಿನಯವಿನಮಿತನಾದಂ ೨೨

ಅಂತು ವಿನಯದಿಂದೆಱಗಿ,

ಸುರಲೋಕದಲ್ಲಿ ಸುಖದಿಂ-
ದಿರುತುಂ ಬರವೆಂತು ನಿಮಗೆ ದೊರೆಕೊಂಡುದಿದೆ-
ಮ್ಮುರುತರಭಾಗ್ಯಮೆನುತ್ತುಂ
ಗಿರಿರಾಜಂ ಸಪ್ತಋಷಿಗಳಂ ಕೇಳಲೊಡಂ ೨೩

ವರಮುನಿಗಳ್ ಮನದೊಂದಾ-
ದರದಿಂ ನುಡಿದರ್ ಶಿವಂ ಶಶಾಂಕಧರಂ ಶಂ-
ಕರನಭವಂ ನಿರ್ಮಾಯಂ
ಗಿರಿಜೆಯ ಬೇಡುವೊಡೆ ತಿಳುಪಿ ಕಳುಪಿದನೆಮ್ಮಂ ೨೪

ಆತಂಗೆ ಚಂದ್ರಮೌಳಿಗೆ
ಖ್ಯಾತಂಗೆ ನಿರಾಮಯಂಗೆ ನಿತ್ಯಂಗೆ ನತ-
ವ್ರಾತಂಗೆ ಬೇಡೆ ಬಂದೆವು
ನೂತನಭುವನೈಕಭಾಗ್ಯವತಿ ಪಾರ್ವತಿಯಂ ೨೫

ಚಂದ್ರಧರಂಗೆ ನತೋತ್ಪಲ-
ಚಂದ್ರಂಗಂ ಗಣಸಮೂಹನಯನಚಕೋರ-
ಚಂದ್ರಂಗಂ ಮುದದಿಂದಂ
ಚಂದ್ರಾನನೆ ಶಿವೆಯನೊಲ್ದು ಕೊಡು ಗಿರಿರಾಜಾ ೨೬

---

೧. ಗಿರಿಜೆಗೆ ತಳೆದಳುಪಿ (ಬ. ಮ.); ಗಿರಿಜೆಗೆ [illegible] (ಅ.) ೩. [illegible] (ಮ. ಬ. ಯ.)
೩. ನಾಕೆಯಂ (ಕೊ.) ೪. ಚಂದ್ರಂಗಾ (ಯ.) ೫. ಚಕೋರೇಶ (ನ.); ಚಕೋರಪ (ಶಾ. ಬಿ.)

ಎಂದು ಸಪ್ತಋಷಿಗಳ್ ನುಡಿದಾಪ್ತವಚನಂ ಕರ್ಣರಸಾಯನಮಾಗೆ ಗಿರಿರಾಜಂ ಕೇಳ್ದು ಬಾಳ್ದು ಸಂದಣಿಸಿದ ಪುಳಕದಿಂ ದಳವೇಱಿ ಮನಮಲರ್ದು ಬುದ್ಧಿ ಪೆರ್ಚಿಯಹಂಕಾರವಿರ್ಮಡಿಸಿ ಚಿತ್ತಂ ಚಿಗುರ್ತು ಅಳವಿಗಳೆದ ಸಂತಸಮಂ ಸಂತಯ್ಸಲಾಱದೆ ಹೆಚ್ಚಿ ಹಿಗ್ಗಿ ನಚ್ಚಿ ನುಡಿದಂ ಮೇಘಾಗಮನಂ ಮಯೂರಂಗಸಹ್ಯಮೆ ವಸಂತನ ಬರವು ಹೊಸಬನಕ್ಕೆ ಪೊಲ್ಲದೆ ಚಂದ್ರೋದಯಂ ಚಕೋರಿಗುಪದ್ರವಮೆ ಅರ್ಕನೇಳ್ಗೆ ಚಕ್ರವಾಕಮಿಥುನಕ್ಕೆ ವಕ್ರಮೆ ಕಾರ ತೋರವಸಿಚಾದಗೆಗೆ ಭಾರಮೆ ಶಿವನ ಕರುಣಮೆನಗಿದಿರ್ವರೆ ವಿಚಾರಮೆ ಬರ್ದುಂಕಿದೆಂ ಬರ್ದುಂಕಿದೆನೆನ್ನ ಭಾಗ್ಯದ ಬೆಳೆ ತಳಿರ್ತುದು ಎನ್ನ ಪುಣ್ಯಲತೆ ಪೂತುದೆನ್ನ ಕುಲಕಲ್ಪವೃಕ್ಷಂ ಫಲಿತಮಾದುದಲ್ಲದೆಯುಂ ರತ್ನಕ್ಕೆ ಕಾಂತಿಯೆರವೆ, ಚಂದ್ರಂಗೆ ಬೆಳ್ದಿಂಗಳುಪಚಾರಮೆ ತರಣಿಗೆ ಕಿರಣಂಗಳ್ ಸಾಧಾರಣಮೆ ಕುಸುಮಕ್ಕೆ ಪರಿಮಳಂ ಪಡಿಸಣಮೆ ಅಮೃತಕ್ಕೆ ಸ್ವಾದು ಸಂಕಲ್ಪಮೆ ಶರ್ವಂಗೆ ಪಾರ್ವತಿಯೆರವೆ, ಪನ್ನಗಾಭರಣನೆನ್ನಂ ಬೇಡಲ್ವೇಳ್ಪುದೆ ಸುರುಚಿಯಿಂ ಸಾಂಗೀಕಾರದಿಂ ಕಾಮ್ಯದಿಂ ಪ್ರೇಮದಿಂ ನಿಷ್ಠೆಯಿಂ ನೆಟ್ಟನೆ ಕೊಟ್ಟೆಂ ಕೊಟ್ಟೆನೆರಡಿಲ್ಲೆಂದು ಸತ್ಯವಚನಮಂ ಸಂತೋಷದಿಂ ನುಡಿದು ಸಪ್ತಋಷಿಗಳ ಚರಣಕ್ಕೆ ಮತ್ತೆ ಮತ್ತೆಱಗುತ್ತೆ ಅವರಂ ಹರಿಸದಿಂ ಕಳುಹಿ ಗಿರಿರಾಜಂ ಮಹೋತ್ಸಾಹದಿಂ ಮಹಾವಿವಾಹಮಂಟಪಾದಿ ಸಮಸ್ತವಸ್ತುಗಳಂ ವಿಸ್ತರಿಸುತಿರ್ದನದೆಂತೆಂದೊಡೆ,

ಚಂಪಕ.

ಗಿರಿಪತಿ ಚಾರರಂ ಕಳುಪಿ ನಿರ್ಜರಲೋಕದ ವಿಶ್ವಕರ್ಮನಂ
ಬರಿಸಿ ನಯೋಕ್ತಿಯಿಂ ನುಡಿದು ಮನ್ನಿಸಿ ಬೇಳ್ಪುದನಿತ್ತು ಚಂದ್ರಶೇ-
ಖರನ ಮದೀಯಪುತ್ರಿಯ ವಿವಾಹಶುಭೋಚಿತಮಂಟಪಾದಿ ಭಾ-
ಸುರವರಚಿತ್ರಪತ್ರಕುಳಮಂ ನೆಱೆ ನಿರ್ಮಿಪುದೆಂದೆ ಬೇಗದಿಂ ೨೭

೧–೧. ಸುರೂಚಿಯಿಂ ಸಾಂಗಿಕದಿಂ ( ಮ. ಬ. ); ಸುರುಚಿಯಿಂ ಸಾಂಗೀಕದಿಂ ( ಕೊ. ). ೨. ಪರಮೋತ್ಸಾಹದಿಂ ( ಕೊ ). ೩. ಸುಖೋಚಿತ ( ಬಿ. ಬ. ಯ. ಗೊ ). ೪. ದೆಂದು ( ಕಾ. ಬೆ. ಯ. ).

ಎನೆ ನಲಿದು ವಿಶ್ವಕರ್ಮಂ
ನೆನೆಯದ ಮುನ್ನಂ ಸಮುದ್ರಮುದ್ರಿತವಿಶ್ವಾ-
ವನಿಪರಿಗತವಿಭವಾಸ್ಪದ-
ಘನಮಂಟಪಮೆಸೆದು ಮುಂದೆ ತೋಱಿತ್ತಾಗಳ್ ೨೮

ಅದೆಂತೆಂದೊಡೆ—ಮಹಾಮಂಟಪಮಂ ನಿರ್ಮಳಚಂದ್ರಕಾಂತಶಿಲಾತಳದೊಳ್ ಮಾರ್ಪೊಳೆದು, ಶಿವನ ವಿವಾಹಕ್ಕೆ ನಾಗಲೋಕದಿಂ ನಾಗರ್ಕಳ್ ಕಳುಪಿದ ಅಭಿನವಮಂಟಪಮಂ ಪಡೆದಂತಿರ್ದುದು; ಮತ್ತಮಲ್ಲದೆಯುಂ ಉದಯಿಸುವ ತರುಣತರಣಿಯ[1] ಕಿರಣಸಹಸ್ರಂ ಗಗನಮಂ ಹೊತ್ತಿತ್ತುವಂತೆ ಜಗದಗಲಕ್ಕೆ ಸಾಲ್ದೆಗೆದು ನೀಳ್ದು ನಿಱಿಸಿದ ಮಾಣಿಕ್ಯಸ್ತಂಭಕೋಟಿಗಳೆಳಗೆಂಪುಗಳೊಪ್ಪುವ ಚಪ್ಪರದ ಮೇಲ್ಕಟ್ಟಂ ಹೊತ್ತಿತ್ತುತಿರ್ದುವು; ಮತ್ತಮಲ್ಲಲ್ಲಿ ಕಟ್ಟಿದ ಪ್ರಿಲ್ಲಿಯ ಪಟ್ಟೆಗಳ ಮೇಲೆ ಬಳಸಿದ ಮೇಘವಣ್ಣಿಗೆಯ ಚೌಕದ ವಿಲಾಸದ ಕಥಾಯಿಯ ಸುಚ್ಚವಿಯನೀವ ಪಚ್ಚೆಯ ಪಟ್ಟೆಗಳ, ಚೋಳಿಕೆಯ[2] ಕಾಳಿಕೆಯುಂ ಸುಣ್ಬೆಳಗನೀವ ಪೊಂಬಟ್ಟೆಯ ಬಳ್ಳಿವೆಳಗಂ ಕಱಿವ ಬೆಳ್ಳಂಬಟ್ಟೆಯ[3] ನೀಲದ ನಿರ್ಮಲೋದಕದ ಪಚ್ಚೆಯ ಪಾವಸೆಯ ಪುಷ್ಯರಾಗದ ಕರ್ಣಿಕೆಯ ಪದ್ಮರಾಗದೆಸಳ್ಗಳ ಪಱಿಮೆಗಳೆಱಗಲಪ್ಪಳಿಸುವ ಜಳಜವೀಥಿಯ ಕೀಲಿಸಿದ ಮುತ್ತಿನ ನೊಸಲ್ಗದ ಕೆಯ್ಗೊಳಿಸಿದ ಗೋಮೇಧಿಕಸ್ತೋಮದ ಪವಳದ ಪಜ್ಜೆಯ ಪಜ್ಜಳಿಸ ವಜ್ರದ ಕೂಡಿದ ವೈಡೂರ್ಯದ ರಂಜಿಸುವ ಲತಾವಳಿಯ ಪಸರಿಸಿದ ಪತ್ರಾವಳಿಯ, ಪೊಣ್ಮಿದ ಪುಷ್ಪಾವಳಿಯ ಹವಣಿಸಿದ ಹಂಸಾವಳಿಯ ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಜಿರಕೆವೆಳಗು ಮಂಟಪದೊಳಗಂ ಪೊಱಗಂ ತೆಕ್ಕನೆ ತೀವಿ ಬಿಡದೆ ಸುಳಿವ ಉತ್ಸಾಹಪುರುಷರಿಂ ನಡೆಪಾಡುವ ಲಲನಾವಿಭ್ರಮದಿಂ ಪ್ರಭಾಜಳಧಿ ತೆರೆಮಸಗಿದಂತಿರ್ದುದು; ಮತ್ತಂ ಮುಗಿಲನಳ್ಳಿಱಿವ ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸಕೀರಮಯೂರಪಾರಾವತವಾರಣಂಗಳಿಂ ನವರತ್ನರಂಜಿತವಾಗಿ ರವಿಮಂಡಲಮಂ ಮುಂಡಾಡುವ ಸುವರ್ಣಕಳಶದರ್ಪಣಾಳಿಗಳಿಂ ರಯ್ಯಂಬಡೆದು ಸಕಳಜಗಕ್ಕೆ ತನ್ನ

---

೧. ಸಾಲ್ನೆಗೆದು (ಮ.) ೨. ಚೂರ್ಣಿಕೆಯು (ಕಾ. ಕೊ.) ೩. ಬೆಳ್ಪಟ್ಟೆಯು (ಕಾ. ಬೆ. ಬ. ಯು.)
೪. ನಾಡೆ (ದಾ.)

ಕಾಂತಿಯೆ ಕಣ್ದೆಱವಿಯೆಂಬಂತಿರ್ದ ಮಹಾತೋರಣದೊಳಮೆಯ್ಯೊಳ್ ನೆರೆದು ಕುಳ್ಳಿರ್ದ ಸೂರ್ಯವಂಶದ ಸುಕುಮಾರರಿಂ ಸೋಮವಂಶದ ಭೂಮಿಪರಿಂ ರಾಜಿಸುವ ರಾಜಪುತ್ರರಿಂ ಮಂಡಳಿಕರ ತಂಡದಿಂ, ಸಾಮಂತರ ಸ್ತೋಮದಿಂ, ಶಿಷ್ಯರ ಮಂತಣದಿಂ ಸೇವ್ಯರ ತಿಂತಿಣಿಯಿಂ ಮುತ್ತೈದೆಯರೊತ್ತೊತ್ತೆಯಿಂ ಸುವಾಸಿನಿಯರ ಸಂದಣಿಯಿಂ, ಸಕಳಾಗಮಕೋವಿದರಿಂ, ಸರ್ವಶಾಸ್ತ್ರಪ್ರವೀಣರಿಂ ಸಹಸ್ರವೇದಿಗಳಿಂ ಗಳಿಗೆವಟ್ಟಲಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಿಂ ; ಏಕಾದಶಕ್ಕೆ ಬಂದ ನವಗ್ರಹಂಗಳಿಂ, ತಿಕ್ಕನೆ ತೀವಿರ್ದ ಮಹಾಮಂಟಪಮತಿವಿಸ್ತಾರಮನತಿಗಂಭೀರತೆಯನತಿಸೌಖ್ಯಮನತ್ಯಾಶ್ಚರ್ಯಮನುರುತರಸಂಪದಮನತಿಸೌಂದರ್ಯಮನತಿಪ್ರಸನ್ನತೆಯನೊಳಕೊಂಡು ವರನ ಬರವಂ ಬಯಸುತಿರ್ದುದಾ ಪ್ರಸ್ತಾವದೊಳ್,

ಒಳಗೆ ಸುವಾಸಿನಿಯರ್ ಗಿರಿ-
ಕುಳರಾಜತನೂಜೆಗೊಪ್ಪೆ ಸಿಂಗರಮಂ ಕೆಯ್-
ಕೊಳಿಸುತ್ತಿರ್ದರ್ ವರಶಶಿ-
ಕಳೆಗೆ ಸುಧಾಕಿರಣಜಾಲಮಂ ತುಡಿಸುವವೋಲ್ ೨೯

ಅದೆಂತೆಂದೊಡೆ,

ಭದ್ರಾನನೆಯರ್ ನವಕುಸು-
ಮದ್ರವಯುತಜಲದೆ ಮಜ್ಜನಕ್ಕೆಱೆಯುತೆ ಕ-
ಲ್ಪದ್ರುಮಶಾಖಾನ್ವಿತೆಗೆ ಹ-
ರಿದ್ರಾಪರಿಮಳಮನಂಗದೊಳ್ ಸಮನಿಸಿದರ್ ೩೦

ನವಲತೆಯುಂ ಕೌಮುದಿಯುಂ-
ದವೆ ಬಾಸಣಿಪಂತೆ ಕೂಡೆ ಧವಳದ್ಯುತಿಯಂ
ತವೆ ಪಸರಿಪ ದಿವ್ಯದುಕೂ-
ಲವನುಡಿಸಿದರಗತನೂಜೆಗಂಗನೆಯರ್ಕಳ್ ೩೧

---

೧. ಮುಕುಟವರ್ಧನರಿಂ (ಅ. ಕೊ.) ೨ ಶಿಷ್ಟರ (ಅ.) ೩. ಪರೀಕ್ಷಿಸುತ್ತಿರ್ದ (ಶಾ. ಜಿ. ಮ.)

ಮತ್ತೇಭ.

ಸಿಡಿಲಂ ಸುಗುರ್ವ ಶೇಷನಂ ಪೊಸೆವ ದಿಙ್ನಾಗಂಗಳಂ ಪೊಯ್ದು ಘೀ-
ಂಕಿಡಿಪೇಳುಂ ಕಡಲಂ ತುಳುಂಕುವ ಕುಲಾದ್ರಿಸ್ತೋಮಮಂ ಕಿಳ್ತಣಂ
ಪೊಡೆಸೆಂಡಾಡುವ ಭೂಮಿಯಂ ಹಿಳಿವ ಚಂದ್ರಾದಿತ್ಯರಂ ಮಿಾಂಟುತಿ.
ರ್ಪುಡುಸಂತಾನಮನಾರ್ದುದಿರ್ಚುವ ಗಣಗಳ್ ಬಂದರಾನಂದದಿಂ ೭೩

ಮತ್ತಮಲ್ಲಿ,

ಸ್ರಗ್ಧರೆ.

ನಂದೀಶಂ ವೀರಭದ್ರಂ ಘನರವನಚಲಂ ಪುಷ್ಪದಂತಂ ಶುಭಂ ಸಾ-
ನಂದಂ ಭೃಂಗೀಶನುಗ್ರಂ ಪಿಕಮುಖನಸಿತಗ್ರೀವಸುಗ್ರೀವನತ್ಯಾ-
ನಂದಂ ದಿವ್ಯಾಂಗನಂಧಾಸುರಮಥನನನೇಕಾಸ್ಯನೋಂಕಾರಿ ಶರ್ವಾಂ-
ಗಂ ದಕ್ಷಧ್ವಂಸಿ ಲಂಬೋದರನತುಳಬಳಂ ಹಸ್ತಿಕರ್ಣಂ ವಿಕರ್ಣಂ ೭೪

ಮತ್ತೇಭ

ಗರಳಂ ಭದ್ರಮುಖಂ ಶುಭೋದಯನಭಂಗಂ ಶಂಕುಕರ್ಣಂ ಷಡ-
ಕ್ಷರನುತ್ತುಂಗಶಿರಂ ವೃಕೋದರನಟವ್ಯಂ ದಾರುಕಂ ಸಿಂಹಕೇ-
ಸರಿ ಸಿದ್ಧಾಂತಿಯುದಾರನೇಕಜಟಿ ವಿದ್ಯುನ್ಮಾಲಿ ತಾರಾಕ್ಷನಂ-
ಬರಕಾಯಂ ಘನಕಾಯನಪ್ರತಿಮಕಾಯಂ ವಿಸ್ತರಂ ಕುಂಭಜಂ ೭೫

ಮಹಾಸ್ರಗ್ಧರೆ.

ಹಳನುತ್ತುಂಗಂ ವಿಚಿತ್ರಂ ತ್ರಿಶಿರನಸುರಕೋಳಾಹಳಂ ಯಜ್ಞಕೋಳಾ-
ಹಳನುದ್ಯತ್ಕಾಲಕೋಳಾಹಳನ್ಸತನುಹರಂ ಮಂಗಳಂ ಮೃತ್ಯುಕೋಳಾ-
ಹಳನೀಶಾನಂ ಪ್ರಘೋಷಂ ವಿಜಯನನಲಕಾಯಂ ಗಂಭೀರಸುಗಂಡ
ಸ್ಥಳನೂರ್ಧ್ವಾಂಗಂ ಪ್ರಜಿಹ್ವಂ ವಿಷಸರಣಿ ಪುರಧ್ವಂಸಿ ಸರ್ವಾಂಗಜಿಹ್ವಂ ೭೬

ಇಂತಿವರ್ ಮೊದಲಾದ ಗಣೇಶ್ವರಬಲಸಹಿತಂ ಇಳಾತಳಮಂ ದಿಕ್ಚಕ್ರಮುಂ
ನಭೋಭಾಗಮುಂ ತೆಕ್ಕನೆ ತೀವಿ ಬ್ರಹ್ಮಾಂಡಮಿಂಬಿಲ್ಲೆಂಬ ಸಂಭ್ರಮಮಿಂಬುವಡೆಯೆ

---

೧. ತರ ( ಗ. ) ೨. ನನಲಃ ( ಅ. ) ೩. ಕಪಿ (ಕಾ. ಯ. ಅ. ದಾ. ಡ.) ೪. ಸರ್ವಾಂ ! ಗಂ ( ಬಿ. ಮ. ಬ. ) ೫. ವ್ಯಾಘ್ರ ( ಅ. ) ೬. ಶಂಖ ( ಅ. ) ೭. ನುತ್ತಾಂಗಂ ( ಯ. ); ನಧಾಂಗಂ ( ಬ. ಅ. ); ನಂತಾಂಗಂ ( ಮ. ) ೮. ದ್ವಿಜಿಹ್ವಂ ( ಕಾ. ಬಿ. )

ಬಂದು ನಿಂದ ಸಕಲಸುರಸಮೂಹಮಂ ವಿರೂಪಾಕ್ಷಂ ಕಂಡು ಮಸಂಗೊಂಡು ಮುಂದಿರ್ದ ನಂದೀಶ್ವರನ ಮುಖಮಂ ನೋಡಿದಾಗಳ್,

ಮತ್ತೇಭ.

ನಯದಿಂದೆಳ್ದು ನತಾಸ್ಯನಾಗಿ ವಿಪುಳಶ್ವಾಸಂಗಳೊಳ್ ದೇವಕೋ-
ಟಿಯನಾಂದೋಳಮನಾಡಿಸುತ್ತೆ ನಡೆತಂದುಚ್ಚಪ್ರಭಂ ಧರ್ಮಸಂ-
ಚಯನಾನಂದಮಯಂ ಮಹೇಶನ ಸುಖಾಪಾಸಾನ್ವಿತಂ ದಿಟ್ಟಿಪಾ-
ರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ ೭೭

ಚಂಪಕ.

ಹರಿ ಜಯಜೀಯ ಜೀಯೆನೆಯಜಂ ಮಝುಭಾಪೆನೆ ದೇವವೀಧಿ ದೇ-
ವರೆ ಸುರರಾಜರಾಜಧಿರುರೇ ಎನೆ ಸನ್ಮುನಿಗಳ್ ಸರಾಗದಿಂ
ಹರಹರ ರುದ್ರ ಭದ್ರಯೆನೆ ನಿಂದ ಗಣಾವಳಿಯಳ್ಕಱಿಂ ಮದೀ-
ಶ್ವರ ಭಲರೇ ಕಪರ್ದಿಯೆನೆ ನಂದಿಯನೇಱಿದನೆಮ್ಮ ಶಂಕರಂ ೭೮

ಇಂತು ವೃಷಭಾರೂಢನಾಗಿ ಕೂಡೆ ನೆರೆದ ಗರುಡರ ಗಡಣದ ಗಂಧರ್ವರ ಸಂದಣಿಯ ಸಿದ್ಧರ ಪದ್ಧತಿಯ ವಿಧ್ಯಾಧರರ ವೀಧಿಯ ಕಿನ್ನರರ ವ್ರಜದ ಪನ್ನಗ-ಪ್ರಕರದ ಕಿಂಪುರುಷಸ್ತೋಮದ ಯಕ್ಷರ ಪಙ್ಕ್ತಿಯ ರಾಕ್ಷಸರ ತಿಂತಿಣಿಯ ಮಯೂರರ ಮಂತ್ರಣದ ಗುಹ್ಯಕರ ಯೂಥದ ಖೇಚರರ ತೆಕ್ಕೆಯ ಮನುಗಳ ವಂಗಡದ ಮುನಿಗಳ ಗೊಂದಣದ ಸುರರ ನೆರವಿಯ ದೇವಕಾಮಿನೀನಿಕರದ ದಿಕ್ಪಾಲನಿಕಾಯದ ಹರಿವಿರಿಂಚಿಗಳ ಪರಿವಿಡಿಯ ಬಿರುದುಗಣಂಗಳ ತೆರಳ್ಕೆಯ ರವಿ-ಮಂಡಲದ ಹಿಂಡುಗಳ ಶಶಿಮಂಡಲದ ಸಾಲ್ಗಳ ಕುಂಜರನಿಕರದ ತುರಂಗಸಂಘದ ರಥಪ್ರತಾನದ ಪದಾತಿಬಲದಿರ್ಕೆಲದೊಳ್ ದಿಕ್ಕರಿಗಳ ಮೇಲೆ ಮಿಕ್ಕು ಬರ್ಪ ದೇವಾಂಗವಸ್ತ್ರವಿತಾನದ ಪೆಟ್ಟಿಗಳೊಟ್ಟಜೆಯ ಸಾದಿನ ಪೆಟ್ಟಿಗೆಗಳ ಮೃಗಮದದ ಕೊಂಬುಗಳ ಕರ್ಪೂರಕರಂಡಕಾನಿಕರದ ಪನಿನೀರ ಭಾಜನಂಗಳ ಕತ್ತುರಿಯ ಭಾಂಡಂಗಳ ಬಾವನ್ನದೊಟ್ಟಿಲ್ಗಳ ರತ್ನಾಭರಣರಾಶಿಗಳ ಚಿಂತಾಮಣಿಯ ಮುಡಿಪುಗಳ ಪರುಷದ ಕಣೆಯ ತನತನಗೆ ಪಿಡಿದು ಬರ್ಪ ಬಿಳಿಯ ಕರ್ಬಿನ ನಡೆವನದ ಪುಣ್ಯ-

---

೧. ವೃಷಭರಾಜನ ( ಬೆ. ಬ. ಯು. ಗೊ. ಗ. ) ೨. ಸೊಲ್ಲು ( ಅ. ) ೩. ಸಂತತಿಯ ( ಅ )

ಫಲವ್ರಾತದ ಸುರತರುವಿಸಾರವೆಗಳ ಸುರಭಿಗಳೊಯ್ಯಾರದ ಮುಂದಣ ವೃಷಭ-ಧ್ವಜದ ದರ್ಪಣದ ತಳಿಗೆಗಳ ಕಳಶಂಗಳಂ ಪಿಡಿದು ಮೆಲ್ಲಮೆಲ್ಲನಡಿಯಿಡುವರುಂಧತಿ-ಯನಸೂಯಾದೇವಿಯ ಗಾಯತ್ರಿ ಸಾವಿತ್ರಿ ಸರಸ್ವತಿ ಶಚೀದೇವಿ ಲಕ್ಷ್ಮಿ ರೋಹಿಣಿ-ಯರಾದಿಯಾದ ಪರಮಪತಿವ್ರತಾವಿತಾನದ ಪೊಡೆವ ಭೇರಿಯ ಸೂಳಯ್ಪು ನಿಸ್ಸಾಳದ ಪೂರಯಿಪ ಶಂಖದ ಬಿರುದೆತ್ತಿ ಕರೆವ ಕಹಳೆಗಳ ಮೊಳಗುವ ಮದ್ದಳೆಯ ಸುಗತಿಯ-ನುಗುಳ್ವ ಕರಡೆಗಳ ಮೇಳಯ್ಪು ಕಂಸಾಳದ ಗರ್ಗರಿಪ ಗಿರ್ಗಟಂಗಳ ಪೊಣ್ಮುವ ತಾಳದ ಉಣ್ಮುವ ಗಾನದ ಭೃಂಗಿಯ ನರ್ತನದ ಭೋರೆಂಬ ರವದ ಸಮಸ್ತವಸ್ತುವಿಸ್ತರದ ನಡುವೆ ಧವಳಾತಪತ್ರದ ಭುವನಾಶ್ರಯಂ ಜಡೆಮುಡಿಯ ಬೆಡಂಗಂ ಮಕುಟದ ಮನೋಹರಂ ಶಶಿಕಳೆಯ ಸೊಬಗಂ ಬಾಸಿಗದ ಭಾಗ್ಯನಿಧಿ ಕರ್ಣಾವತಂಸದ ಕಮನೀಯಂ ಕಪೋಳದ ವಿಪುಳಂ[1] ಭ್ರೂಲತೆಯ ಭಾವಕಂ ಅಲರ್ಗಣ್ಗಳ ಸುಲಲಿತಂ ಶ್ರೀವದನದ ಪಾವನಂ ಭೂರಿಭುಜದ ಮಾರಾರಿ ನಳಿತೋಳ್ಗಳ ನಾಯಕಂ ಕರತಳದ ಕಾಮಧೇನು ಕಂಕಣದ ಕಳಾನಿಧಂ ಹಸ್ತಪವಿತ್ರದ ಸುಲಭಂ ಮಾದೂಫಲದ ಮಹಾ-ನಿಧಿ ಹಾರದ ಹರ್ಷಮಯಂ ಪದಕದ ಸದಮಳಂ ಜಾಹ್ನವಿಸನ್ನಕುಟಂ ಜನ್ನದಾರದ ಪನ್ನಗಭೂಷಣಂ ಪವಿತ್ರದ ಪರಮಾತ್ಮಂ ಧವಳೋತ್ತರೀಯದ ನಿರಳಂ ಪರಿವಸನದ ಪುಣ್ಯಾಧಿಕಂ ನಂದಿವಾಹನದ ನವೀನಂ ಭಸಿತದ ಹೊಸಮದುವಣಿಗನೆನಿಪ ಶ್ರೀಸಂಪಾವಿರೂಪಾಕ್ಷಂ ತನ್ನ ಕಾರುಣ್ಯಕಟಾಕ್ಷಕ್ಕೆ ಕೆಯ್ಮುಗಿವ ನಾಲ್ಕುಂ ದೆಸೆಯ ದೇವಕುಲಕ್ಕೆ ಕರುಣಿಸುತ್ತುಂ ಪ್ರಸನ್ನಮುಖಂ ಸುಖಾವರಣಂ ಶರ್ವಂ ಸರ್ವ-ಸಂಭ್ರಮದಿಂ ಬರೆ ನಡೆತಂದಿದಿರ್ಗೊಳ್ವ ಸುವಾಸಿನಿಯರೊಯ್ಯಾರದಿಂ ನಿವಾಳಿಗಳಂ ಪಿಡಿದು ನಿವಾಳಿಸಲ್ ಮತ್ತಮಲ್ಲಿಂ ಮುಂದೆ ಕುಲಾಂಗನೆಯರ್ ಸೂಸುವ ಮುತ್ತಿನ ಸೇಸೆಗಳನಾದರದೊಳಾನುತ್ತುಂ ನಂದೀಶ್ವರನ ಬೆನ್ನಿಂದವನಿತಳಕ್ಕವತರಿಸುತ್ತುಂ ಪ್ರಮಥಗಣಂಗಳ್ ಕೆಯ್ಮೆಯಿಂ ಕೆಯ್ಗುಡೆ ಮಹಾವಿವಾಹಮಂಟಪಮಂ ಪುಗು-ತರ್ಪಾಗಳ್ ಕಂಡು ಹರ್ಷಮನಲೆಗೊಂಡು ಮೆಯ್ಯಿಕ್ಕಿ ನಿಂದ ಮೇನಾದೇವಿಗಂ ಮಾವನಪ್ಪ ಗಿರಿರಾಜಂಗಂ ಕಾರುಣ್ಯಮನೀಯುತ್ತುಂ ಸಿಂಹವಿಷ್ಟರಮನವಷ್ಟಂಭಿಸಿ ಸಮಯೋಚಿತಾನ್ನಮನುಂಡು ಮಹಾಸಭನಮಂ ಕಂಡು ಮಧುಪರ್ಕಮಂ ಕೆಯ್ಕೊಂಡು,

---

೧. ಸುವಿಪುಲಂ ( ಅ. ); ವಿಪುಳಂ ( ದಾ. )

ಇರೆ ಹರಿಯಜರನುಮಿಸುತುಂ
ಪರಮಶುಭಾಕರ ಮುಹೂರ್ತಮೆಲೆಲೆ ಸಮಾಪಂ
ಕರುಣಿಪುದೆನೆ ಮಂಗಳವಾ-
ಗ್ವಿರಚನೆಯಂ ಕೇಳ್ದು ಭೋಂಕನೆಳ್ದಂ ರುದ್ರಂ ೭೯

ಅಮಮ ವರಮೂರ್ತಿ ನವವಿ-
ಭ್ರಮ ವಿಸ್ತರನಮೃತಶೀಲನಾನಂದಮಯಂ
ಮಮಕರ್ತಂ ಮಮಭರ್ತಂ
ಸುಮುಹೂರ್ತಂ ಪತ್ತೆ ಪಾರ್ವವೋಲ್ ನಡೆತಂದಂ ೮೦

ಅಂತು ನಡೆತಂದು ವಿವಾಹಗೇಹದೊಳಪೊಕ್ಕು,

ಮುತ್ತಯ್ದೆಯರೊತ್ತೊತ್ತೆಯ-
ನೊತ್ತರಿಸುತೆ ಬೆಳಗಿನೊಳಗೆ ಹೊಸಬೆಳಗಂ ಸೂ-
ಸುತ್ತುಂ ಸವಿನೋಟಮನೀ-
ಯುತ್ತುಂ ಜವನಿಕೆಯ ನೆಳಗೆ ಶಿವನೆಯ್ತಂದಂ ೮೧

ಆ ಸಮಯದೊಳ್ ಪಾರ್ವತೀದೇವಿ ನಿಟ್ಟಯ್ದು ಮೆಟ್ಟಕ್ಕಿಯಂ ಮೆಟ್ಟಿ ತೆಱೆಯಂ ಮಱೆಯಂ ಮಱೆಗೊಂಡು ನಿಂದಿರ್ಪಲ್ಲಿ,

ನಲ್ಲರ ನಡುವುಪಚಾರಂ,
ಸಲ್ಲಲಿತೇಕ್ಷಣದ ನಡುವೆ ಪಕ್ಷ್ಮಪುಟಂ, ಪೊ-
ಪುಲ್ಲರದಮಧ್ಯದೊಳ್ ಮಿಗೆ
ಸೊಲ್ಲಿರ್ಪಂತಿರ್ದುದಲ್ಲಿ ತೆಱೆ ಹರಸಿದಿರೊಳ್ ೮೨

ಅಂತಿರ್ಪ ಜವನಿಕೆಯನತಿಸ್ನೇಹದಿಂ ನೋಡಿ,

---

೧. ಸುಖಾಕರ ( ಬೆ. ಬ. ಯು. ). ೨—೨ ಕಮನೀಯಂ ಮಮಕರ್ತಂ ( ಬೆ. ಬ. ಯು. ). ೩. ಹತ್ತೆ ಕಾ. ಅ. ) ೪. ನೀ । ಸುತ್ತುಂ ( ಮ. )

ಅವಿಭೇದಪ್ರಕೃತಿಗಳೆನಿ-
ಪವಯವದಿಂದೊಪ್ಪುವರ್ಧನಾರೀಶ್ವರರೊಳ್
ಜವನಿಕೆ ನಡುವೊಡ್ಡಿತು ಕಾ-
ಲವಶದಿನಾವಂಗಮಾವುದಾಗದು ಧರೆಯೊಳ್ ೮೩

ಇಂತೆಂಬ ನಾಣ್ನುಡಿಗೆ ನೆಲೆಯಾಗಿ,

ಬೆಳಗಿನ ಬೀಜಾವಳಿಯೋ-
ಬ್ಬುಳಿಯೋ ನಕ್ಷತ್ರರಾಶಿಯೋ ನವಪುಣ್ಯಂ-
ಗಳ ಪುದುವೋ ಚಂದ್ರಿಕಾತಂ-
ಡುಳವೋ ಎನೆ ತೊಳಗಿ ತೋರ್ಪ ಮೆಟ್ಟಕ್ಕಿಗಳಂ ೮೪

ಕಾಂತಿಮಯಂ ಶಶಿಚೂಡಂ
ಶಾಂತಂ ನವಭೋಗಿಯೆನಿಪ ಲೀಲಾವಾಸಂ
ಸಂತಂ ಸುರುಚಿರಹರ್ಷಮ-
ಯಂ ತಡೆಯದೆ ಮೆಟ್ಟೆ ನಿಂದ ಸಮನಂತರದೊಳ್ ೮೫

ಹರಿಯುಂ ಸರಸಿಜಭವನುಂ
ಪುರುಹೂತನುಮೆಸೆವ ಋಷಿಗಳುಂ ಗಣಕುಲಮುಂ
ಗಿರಿಜೇಶನ ಗಿರಿಜೆಯ ಭಾ-
ಸುರಪರಿಧಾನದ ಸಮೀಪದೊಳ್ ನಿಂದಾಗಳ್ ೮೬

ಚಂಪಕ.
ಕಳಕಳಮಂ ನಿವಾರಿಸುತುಮಾಯತಮೇ ಎನಲಾಯುತಂ ಲಸದ್-
ಗಳಬಳಮಂ ವಿವರ್ಜಿಸುತುಮಾಯತಮೇ ಎನಲಾಯತಂ ನಿರಾ-
ಕುಳಿತಮನಂ ಬೃಹಸ್ಪತಿ ಸಮಾಯತಮೇ ಎನಲಾಯತಂ ಮನಂ-
ಗೊಳಿಪ ಮಹಾಮುಹೂರ್ತದೊಳಗಾಯತಮೇ ಎನೆ ತಪ್ಪದಾಯತಂ ೮೭

---

೧. ಅವಚಳಿತ ( ಡ ). ೨. ವಿಸರ್ಜಿಸು ( ಅ ).

ಅಮರಗುರು ಸಕಳವೇದಾ-
ಗಮಕೋವಿದನೊಲ್ದು ಭಕ್ತಿಯಿಂದಂ ಪುಣ್ಯಾ-
ಹಮ್ನನುತ್ತುಮಿತ್ತ ರಾಜತ್-
ಸುಮುಹೂರ್ತಂ ಬಂದು ತೆಱೆಯನೋಸರಿಸಲೊಡಂ ೮೮

ಕರಡೆಗಳ ರವಂ ನಿಸ್ಸಾ-
ಳರವಂ ಭೇರೀರವಂ ಮೃದಂಗರವಂ ದೇ-
ವರ ಹೂಮಳೆಗಳ ಭೋರೆಂ-
ಬ ರವಂ ಮಂಗಳರವಂಗಳುಣ್ಮೆದುವಾಗಳ್ ೮೯

ಆನಿರೆ ಮತ್ತೊರ್ವಳ್ ಗಡ
ತಾನಿರ್ಪಳ್ ಜಡೆಯೊಳೆನುತೆ ಮುಳಿದಿಡುವಂತಾ
ಮಾನಿನಿ ಜೀರಿಗೆ ಬೆಲ್ಲದೊ-
ಳಾನುತೆ ಶಿವನುತ್ತಮಾಂಗಮಂ ಪದೆದಿಟ್ಟಳ್ ೯೦

ಮೃಡನಾಗಳ್ ಗಿರಿಜೆಯ ಚೆ-
ಲ್ವಿಡಿದ ಮೊಗಂಗಂಡು ಸಾತ್ತ್ವಿಕಂ ಕೆಯ್ಕೊಂಡೊ-
ಲ್ದಿಡುವಾ ಜೀರಿಗೆ ಬೆಲ್ಲಂ
ಸಡಿಲ್ದು ಕಂಪನದೆ ಬಿಳ್ದುವಗಜೆಯ ಪದದೊಳ್ ೯೧

ಅನಂತರದಲ್ಲಿ,

ಅಱಿಸುತ್ತಿರೆ ಪಲಕಾಲದೊ-
ಳುಱಿ ನಿನ್ನನೆನುತ್ತೆ ಶಿವನ ಮಕುಟೇಂದುಗೆ ತಾಂ
ತುಱುಗಿದ ತಾರಗೆಯೆಂಬಾ
ತೆಱದಿಂ ತಂಡುಲಮನಗಜೆ ಸುರಿದಳ್ ಶಿರದೊಳ್ ೯೨

ಆಗಳ್,

೧. ತಾರೆಗಳುದುರ್ವಾ ( ಅ ).

ಪರಮತಪೋನಿಧಿಯೆನಿಸಿದ
ಗಿರಿಜೆಗೆ ಪುಣ್ಯಾಂಬುವಿಂದಭಿಷೇಕಮನೊ-
ಪ್ಪಿರೆ ಮಾಡುವ ತೆಱದಿಂದಂ
ಗಿರಿಶಂ ನವತಂಡುಲಂಗಳಂ ತವೆ ಸುರಿದಂ ೯೩.

ಆ ಸಮಯದೊಳ್,

ನಲಿನಲಿದು ಬಂದು ಗಿರಿಪತಿ-
ಯೊಲವಿಂದಂ ಗಿರಿಜೆಸಹಿತವುಂ ನಾವೆಲ್ಲಂ
ನೆಲೆದೊಳ್ತಿರ್ ಬಳ್ದೊಳ್ತಿರ್
ಸಲೆದೊಳ್ತಿರ್ ನಿಮಗೆನುತ್ತೆ ಧಾರೆಯನೆಱೆದಂ ೯೪

ಗಿರಿಜಾತೆಯ ಸಕಲಗುಣಂ
ಹರೆ ನಿಮ್ಮಂ ಸುತ್ತುಗೀ ತೆಜನೊಳೆಂಬಂತೊ-
ಪ್ಪಿರೆ ಸುತ್ತಿದರತಿಮೃದುತರ-
ಸುರುಚಿರನವಕಾಂತಿಯೆಸೆವ ಗುಣಮಂ ಗ್ರಣಮಂ ೯೫

ಅಯ್ದುಂ ವದನನ ಕಾಂತೆಯ-
ನೆಯ್ದು ಪತಿವ್ರತೆಯರಧಿಕತರಮುದದಿಂ ಮು-
ತ್ತಯ್ದೆಯೆ ನಿಟ್ಟಯ್ದೆಯೆ ನೆಱೆ-
ಯಯ್ದೆಯೆ ಸಲೆಯಯ್ದೆಯೆಂದು ಪರಸುತ್ತಿರ್ದರ್ ೯೬

ಇಂತು ವಿವಾಹವಿಭ್ರಮಮಂ ಕೆಯ್ಕೊಂಡು ಗಿರಿಜೆಯ ಕರತಳಮಂ ಪಿಡಿದು ಸೋಮಂ ಸೋಮಧರಂ ಪ್ರೇಮಕೇಳಿ ಹೋಮಸ್ಥಳಕ್ಕೆ ನಡೆತಂದಿಕ್ಕಿದ ಹಸೆಯ ಮೇಲೆ ಪಶುಪತಿ ಕುಳ್ಳಿರೆ ಮಂತ್ರತಂತ್ರಯಂತ್ರಸಿದ್ಧನಪ್ಪ ಪರಮೇಷ್ಠಿ ಹರನನುಜ್ಞೆಯಿಂ ಸ್ಥಂಡಿಲಮನಲಂಕರಿಸಿ ಮೆಲ್ಲಮೆಲ್ಲನುಲ್ಲೇಖನಂಗೆಯ್ದಗ್ನಿಯಂ

---

೧–೧. ಗಿರಿಜೆಗೆ। ಹರುಷಂ ಮಿಗೆ ಪುಣ್ಯತತಿಯಿನ ( ಅ ); ಯೆನಿಸಿದ। ಗಿರಿಜೆಗೆ ಪುಣ್ಯಂಗಳಿಂದಲ ( ಪು. ಬ. ). ೨–೨. ಶಂ। ಕರನವಲಿನ (ಕಾ. ದಾ.). ೩–೩. ಸುತ್ತಿಮುತ್ತುಗೀತೆಜನೆಂಬಂ। ತಿರೆ ( ಬ.) ೪–೪. ನೆಱೆಯಯ್ದೆಯೆ ಸಲೆ। ಯಯ್ದೆಯೆ ನಿಟ್ಟಯ್ದೆಯೆಂದು ( ಕಾ. ಬಿ. ಸೆ. ) ೫. ಶಿಖಿಂ ( ಕಾ. ); ಕೇಶಂ ( ಅ ). ೬. ಹರನನುಜ್ಞೆಯಂ ತಳೆದು ( ಅ ).

ಸುತ್ತದೆ ನೆಲೆಗೊಂಡಂ ಪರಿ-
ವೃತ್ತೋನ್ನತಚಂದ್ರನಗಜೆಯಾಸ್ಯದೊಳೆಂದು-
ನ್ನತ್ತತೆಯೊಳ್ ತಾರಗೆಗಳ್
ಸುತ್ತಿದುವೆನೆ ತೋರಹಾರವಂ ರಂಜಿಸಿದರ್ ೩೬

ಭಾಳಸ್ಥಳದೊಳ್ ಕಣ್ ಗಡ
ಶೂಳಿಗೆ ಪಾರ್ವತಿಗೆ ಕೊರಲೊಳೊಗೆದುದು ನಯನಂ
ಕೇಳೆಂಬ್ಹಾಸಂ ಮಿಗೆ
ಮೇಳಯ್ಸಿದರ್ವೈರದಾಳಿಯಂ ಬಾಳಕಿಯರ್ ೩೭

ಜಳಜಾನನೆಯರ್ ವಿನಯೋ-
ಜ್ಜ್ವಳಮುಖಿಯರ್ ಸಖಿಯರೊಲ್ದು ಗಿರಿಜಾನನದೊಳ್
ನಳಿನಳಿಪಚ್ಚವುಗುಳ್ನಗೆ
ನೊಳೆತುದೆನಲ್ ಮೆಱೆವ ಮೂಗುತಿಯನೊಸೆದಿತ್ತರ್ ೩೮

ಮೃಗಧರಬಿಂಬಂಗಳವೆರ-
ಡಗಲದೆ ಕೊಂಡೆಸೆಯುತಿರ್ದಪುವು ಸರಸಿಜದೊಂ-
ದಗಣಿತಕರ್ಕಶಮೆನೆನಲ್
ನಗಪುತ್ರಿಗೆ ನೀಲಮುತ್ತಿನೋಲೆಯನಿತ್ತರ್ ೩೯

ಬಿಂಬಾಧರೆಯರ್ ಬಂದಲ್ಲಿ-
ರಂಬಂ ಕತ್ತುರಿಯ ಸಾಣೆಯಿಕ್ಕುವ ತೆಱದಿಂ-
ದಂಬುಜದಳಸದೃಶಾಂಬಕ-
ದಂಬಿಕೆಗಂಜನಮನೆಚ್ಚಿದರ್ ಸಂತಸದಿಂ ೪೦

---

೧. ವಿಮಲೋ (ಅ.) ೨. ನೆನ | ಲ್ಕಗ (ಕಾ.)

ಸಸಿಯುಂ ತಳೆದೊಡೆ ಮುಕುಟದೊ-
ಳ್ವಿಷಮಾಕ್ಷಂ ಗಿರಿಜೆ ಪುರುಡಿಸುತ್ತುಂ ತಳೆದಳ್
ನೊಸಲೊಳ್ ಸಸಿಯಂ ತಾನೆನೆ
ಭಸಿತದ ತಿಲಕಮನಲಂಕರಿಸಿದರ್ ಸತಿಯರ್ ೪೧

ನೀಳಾಭ್ರಮನಂಭಃಕಣ-
ಜಾಳದೆ ಬಾಸಣಿಸುವಂತೆ ಶಶಿಮುಖಿಯರ್ ಸ-
ಲ್ಲೀಳೆಯೊಳಚಳತನೂಜೆಗೆ
ಬಾಳೆಗೆ ಸೂಸಕಮನಿಕ್ಕಿದರ್ ಮುದದಿಂದಂ ೪೨

ಸುರುಚಿರನೀಲಾಂಬುದದೊಳ್
ಸುರುಧನುವಂ ನಿರ್ಮಿಪಂದದಿಂ ಸೀನಪಯೋ-
ಧರೆಯರ್ ಶೈಲತನೂಜೆಗೆ
ವರರತ್ನದ ದಂಡೆದೊಂಡಿಲಂ ಸುತ್ತಿಟ್ಟರ್ ೪೩

ಅಂತುಮಲ್ಲದೆಯುಂ,

ಅಂಬಿಕೆಯ ಸುಧಾಮಯವಕ-
ದಂಬದ ಚೆಲ್ವಿಂಗೆ ದೃಷ್ಟಿಯಾಗದ ತೆಜದಿಂ
ಬಿಂಬಾಧರೆಯರ್ ತೊಡಸಿದ-
ರೆಂಬಂತಿರೆ ನೆಜೆಮುವರರೆ ಭೂಷಣತತಿಗಳ್ ೪೪

ಇಂತು ನನೆಗಣೆಯ ನರ್ಚಿಪಂತೆ ಚಂದ್ರಕಳೆಯುಂ ಪರ್ಚೆಪಂತೆ ಪ್ರಾ[illegible]ಂ ಪ್ರಕಟಿಸುವಂತೆ ಶಂಕರನ ಪ್ರೇಮಮುಮಂ ಸೀಮೆಗೊಳಿಸುವಂತೆ ಹರನ ಮನೋರಥಮುಮಂ ಮುದವೇರ್ಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ ತರುಣ-ತರಣಿಯ ಕಿರಣಂಗಳ್ಗೋರೆಸ್ವಮಪ್ಪಾರತಿಗಳನೆತ್ತಿಯೆತ್ತಿ ಪಿಂಗದೆ ಮಂಗಳೋ-ಕ್ತಿಯಂ ಕೊಂಡಾಡುತ್ತುಮಿರೆಯಿರೆ ಅತ್ತಲ್ ಸಪ್ತಋಷಿಗಳಿಂ ಸಂತೋಷ-ವಾರ್ತೆಯಂ ಶಂಕರಂ ಕೇಳ್ದು ಹರ್ಷಮಂ ತಾಳ್ದು,

---

೧. ಸಖಿ ( ಅ ). ೨. ತೊಂಡಲಂ ( ಮ. ಬ. ಅ. ). ೩. ಸರ್ವಮಂಗಲೆಯುಂ ( ಪಾ ); ಪಾರ್ವತೀ[illegible] ವೇ[illegible]ಯರ್ಗೆ ( ಬಿ. ಕೊ. ).

ಇತ್ತಲ್ ಕೈಲಾಸಾದ್ರಿಯೊ-
ಳುತ್ತಮಗಣನಾಥರೊಳಗೆ ಮೆಱೆದಿರ್ದಂ ದೇ-
ವೋತ್ತುಂಗಂ ಪುಳಕಿತನಾ-
ಗುತ್ತುಂ ಮದುವಣಿಗತನಮನುಜ ನಟಿಯಿಸುತುಂ ೪೫

ಆ ಪೊಸಮದವಣಿಗನಪ್ಪ ಪಶುಪತಿಯ ಸರ್ವಾವಯವಂಗಳಂ ಬಣ್ಣಿಸಲಳವಲ್ಲ-
ದೊಡಂ ಭಕ್ತಿಯಿಂ ಬಲ್ಲಂತೆ ಬಣ್ಣಿಪೆನದೆಂತೆಂದೊಡೆ.

ಜಡೆಗಳೊ ಹೊಸಹೊಸೆಹವಳದ
ಕುಡಿಗಳೊ ನವಕಾಂತಿಜಳದ ಮಡುಗಳೊ ಚೆಲ್ವಿ-
ರ್ಪಡೆಗಳೊ ಶಿವಶಿವ ಸುಕೃತದ
ಗುಡಿಗಳೊ ಮಹಿಮೆಗಳ ನಟ್ಟನಡುಗಳೊ ಶಿವನಾ ೪೬

ಭಾಳಂ ಸುರುಚಿರಸುಕೃತವಿ-
ಶಾಳಂ ವಿಷಮಾಕ್ಷವಿರಥಕಾಳಂ ವಿಮಳ-
ಸ್ಥೂಳಂ ಶೃಂಗಾರರಸೋ-
ಪ್ಲೇಳಂ ಕಂದರ್ಪಕುಸುಮಬಾಣಾಭೀಳಂ ೪೭

ಪುಬ್ಬುಗಳೋ ಗಣನಿಕರದ-
ಗುಬ್ಬುಗಳೋ ಹರಿವಿರಿಂಚಿಸುರಪದವಿಗಳೊಂ-
ದುಬ್ಬುಗಳೋ ಪುಣ್ಯಲತಾ-
ಪಬ್ಬುಗಳೋ ಮದನನಿಭ್ರಮದ ಕೊಬ್ಬುಗಳೋ ೪೮

ಈ ಕಣ್ಗಾ ಕಣ್ಣಾ ಕ-
ಣ್ಗೇ ಕಣ್ಣೆರಡಕ್ಕವೆರಡೆ ಪಡಿ ಮತ್ತಿಲ್ಲೀ
ಲೋಕವ್ಯವಹಾರದ ನುಡಿ-
ಯಾ ಕಣ್ಗೆ ಸಮಾನಮಿಲ್ಲಮಿನ್ನುಂ ಮುನ್ನುಂ ೪೯

---

೧. ದೇ | ವೋತ್ತಮನತಿ (ಡ). ೨. ವಿತತಿ (ಬ).

ಘ್ರಾಣಂ ಮಂಜುಳಮುಖಕ-
ಲ್ಯಾಣಂ ಜಗದೇಕಜೀವನೆನಿಸುವ ಪವನ-
ಪ್ರಾಣಂ ಸರ್ವಾವಯವ-
ತ್ರಾಣಂ ಪರಿಮಳಪರೀಕ್ಷೆಗಂತದು ತಾಣಂ ೫೦

ಕರ್ಣಂಗಳ್ ನವಕಿರಣವಿ-
ಕೀರ್ಣಂಗಳ್ ಶರಣಜನಸುಗೀತಾಮೃತಸಂ-
ಪೂರ್ಣಂಗಳ್ ಪಂಚಾಕ್ಷರ-
ವರ್ಣಂಗಳ್ ಫಣಿವಿತಾನವಿಸ್ತೀರ್ಣಂಗಳ್ ೫೧

ವದನಂ ಕಾರುಣ್ಯಾಮೃತ-
ಸದನಂ ಪ್ರಣತಪ್ರತಾನಜನನಾವಿದ್ಯಾ-
ಕದನಂ ಮರ್ಝುಭಾಪುರೆ ಜಿತ-
ಮದನಂ ಧವಳಪ್ರಕಾಶಮಂಡಿತರದನಂ ೫೨

ಗ್ರೀವಂ ಘನಗರಳೋನ್ನತ-
ಭಾವಂ ವಿಮಳಸ್ವಭಾವನಮ್ರಾನತಜನಸದ್-
ಭಾವಂ ಮಧುರರವಪ್ರ-
ಸ್ತಾವಂ ಶಿವಶಿವ ಸಮಸ್ತಜನತಾಜೀವಂ ೫೩

ತೋಳ್ಗಳ್ ನೆನೆವರ ಚಿತ್ತದ
ಬಾಳ್ಗಳ್ ಪರಪೀಯುಲೆಂದು ಮಿಗೆ ಮತ್ಸರಿಸಾ
ಸೂಳ್ಗಳ್ ರುದ್ರನ ನಚ್ಚಿನ
ಬಾಳ್ಗಳ್ ಗಿರಿರಾಜಪುತ್ರಿಯಪ್ಪಿಂಗಾಳ್ಗಳ್ ೫೪

೧. ರತ್ನ (ಬಿ). ೨. ಜನತಾ (ಅ). ೩. ವಿಕ (ಬ. ಯ.). ೪. ಜಗದೀ (ಮ. ಬ. ಅ. ಕ. ಗ.).
೫. ಚಿತ್ತದ (ಬ.).

ತ್ರಾಣಿಗಳತ್ಯಧಿಕವರ-
ಶ್ರೇಣಿಗಳುಚಿತಕ್ರಿಯಾವಚೋಗುಣಪಿಳಸದ್-
ಪಾಣಿಗಳಖಿಳಾಧಾರ-
ಕ್ಷೋಣಿಗಳಾಹಾ ಸುಪಾಣಿಗಳ್ ಶಂಕರನಾ ೫೫

ಉರವದು ಗಿರಿಜಾಕಾಂತೆಯ
ತೆರವವದು ತತ್ಕುಚಯುಗಂಗಳಿರವದು ಪುಣ್ಯೋ-
ತ್ಕರವದು ವರವದು ಸುಖಸಾ-
ಗರವದು ಭುವನೈಕಚಾರುತರವದು ಹರನಾ ೫೬

ಮಧ್ಯಂ ಗಿರಿಜಾಲೋಕನ-
ಸಾಧ್ಯಂ ನಂಬಿರ್ದ ಸಕಳಗಣಸಂಕುಳಸಂ-
ಬೋಧ್ಯಂ ಪೊರ್ದಿದಜಾಂಡಾ-
ಬಾಧ್ಯಂ ಹರಹರ ಸಮಸ್ತಭುವನಾರಾಧ್ಯಂ ೫೭

ತೊಡೆಗಳೊ ಹೈಮವತಿಯ ಕಾ-
ಳುಡೆಗಳೊ ನವಕಾಂತಿಲಕ್ಷ್ಮಿ ಸಂತಸದಿಂದಿ-
ರ್ಪೆಡೆಗಳೊ ರಂಭಾವಿಭವದ
ತಡೆಗಳೊ ಸಿಂಗರದ ಕಡೆಗಳೋ ಶಶಿಧರನಾ ೫೮

ಮೇಲ್ಗಳೊ ನವಸೌಂದರ್ಯದ
ಸಾಲ್ಗಳೊ ಪಾರ್ವತಿಯ ಚಿತ್ತಮಂ ಸೋಲಿಸುವಾ
ಕೀಲ್ಗಳೊ ಸಲ್ಲೀಲೆಯ ಪೊಂ-
ಗೋಲ್ಗಳೊ ಕಣಕಾಲ್ಗಳೋ ಲಲಾಟೇಕ್ಷಣನಾ ೫೯

---

೧. ಬೋಧ್ಯಂ ( ಕಾ. ಜಿ. ಬ. ಯು. ) ೨. ನಿಶಾಲನಿಶ್ವಾರಾಧ್ಯಂ ( ಅ. ಗೊ. ಕೊ. )

ಚರಣಂ ಭಕ್ತಜನಸ್ಯಾಂತಃ ।
ಕರಣಂ ನಂಬಿದರ ಹರಣಪ್ಪಿನಕುಲತೇಜಃ ।
ಕಿರಣಂ ತ್ರಿಲೋಕಶರಣಂ
ಶರಣಾಭರಣಂ ಸಮಸ್ತಮುಕ್ತಾವರಣಂ ೬೦

ಎಂಬ ಪೊಗಳ್ತೆಗೆ ಮಿಗಿಲೆನಿಸಿ ನೆಜಕೆಮೆಜೆವ ಶಿವನ ಪುಣ್ಯಾಗಣ್ಯಲಾವಣ್ಯಮಯಸುಕುಮಾರಾವಯವಂಗಳಂ ಕಂಡು ಕೌತುಕಂಗೊಂಡು, ನಂದೀಶ್ವರಂ ಬಂದು ಸುರೆಶಿರೋಮಾಲೆಯಂ ಪರಿಹರಿಸಿ ಮಣಿಕಿರೀಟಮಂ ಸಾರ್ಚಿ ಬಿಸುಗಣ್ಣಂ ಭಸಿತದಿಂ ಬಾಸಣಿಸಿ, ಬಾಸಿಗಮನಿಕ್ಕಿ ನಾಗಕುಂಡಲಮಂ ಕಳಲ್ಚಿ, ಮಾಣಿಕ್ಯಾವತಂಸಮಂ ಕೆಯ್ಗೊಳಿಸಿ ಕೂರ್ಮಶಿರಮಂ ತೆಗೆದು ತೋರಹಾರದೊಳ್ ಕೀಲಿಸಿದ ಪದಕಮನಳವಡಿಸಿ ಸರ್ಪೋಪವೀತಮಂ ಸಡಿಲ್ಚಿ ಯಜ್ಞೋಪವೀತಮನಮರ್ಚಿ ಕೀರ್ತಿಮುಖಮಂ ಕಳಲ್ಚಿ ಬಾಹುಪೂರಯಮನೆಡೆಗೊಳಿಸಿ ಉರಗಕಂಕಣಮಂ ಕಳೆದು ರತ್ನಕಂಕಣಮಂ ತಿರುಪಿ ನೂಂಕಿ, ಬ್ರಹ್ಮಕಪಾಲಮಂ ಸಿಲಲೀಯದೆ, ಪುಣ್ಯಪವಿತ್ರಮನಿಟ್ಟು ಖಟ್ವಾಂಗಮಂ ಬಿಡಿಸಿ, ಮಾದುಫಲಮನಿಂಬುಗೊಳಿಸಿ ಗಜಚರ್ಮಮನೋಸರಿಸಿ ನಿರ್ಮಳೋತ್ತರೀಯಮಂ ಪೊದೆಯಿಸಿ ಪುಲಿದೊವಲಂ ನಿವಾರಿಸಿ ದಿವ್ಯದುಕೂಲಮನುಡಿಸಿ ದೇವಕುಲಮೆಲ್ಲ ಬಾಸ್ತಲಿಯ ತೊಡರಂ ಸಡಿಲ್ಚಿ, ಸಹಜಸೌಂದರ್ಯಮನಿರಿಸಿ ಇಂತು ಶಿವಯೋಗಕ್ಕೆ ಮುಕ್ತಿಯುಂ, ಮುಕ್ತಿಗೆ ವೈರಾಗ್ಯಮುಂ, ವೈರಾಗ್ಯಕ್ಕೆ ಶಿವಜ್ಞಾನಮುಂ, ಶಿವಜ್ಞಾನಕ್ಕೆ ಭಕ್ತಿಯುಂ, ಭಕ್ತಿಗೆ ಪುಣ್ಯಮುಂ, ಪುಣ್ಯಕ್ಕೆ ಸತ್ಕ್ರಿಯೆಯುಂ, ಸತ್ಕ್ರಿಯೆಗೆ ಪಾವನಜನ್ಮಮನಲಂಕರಿಸುವಂತೆ ಪರಬ್ರಹ್ಮ ಚೆಯರ್ಾಲಂಕೃತಿ ಬ್ರಾಹ್ಮಣೋತ್ತಮೋತ್ತಮನೆಸ್ಪ ವಿರೂಪಾಕ್ಷಂಗೆ ಪರಮೈಶ್ವರ್ಯಪೂಜಿತಂಗೆ ನಾದಮೂರ್ತಿಗೆ ಶಿವಜ್ಞಾನಿಗೆ ವೇದಶಿಖಾಮಣಿಗೆ ಸತ್ಯಜ್ಞಾನಾಭರಣಂಗೆ ನಿತ್ಯಕಾಯಂಗೆ ವಿಶ್ವಾರಾಧ್ಯಂಗೆ ಶಾಶ್ವತಪ್ರತಾಪನಿಧಿಯೆನಿಪ ಶಂಕರಂಗೆ ನಂದೀಶಾದಿಗಣನಾಯಕರ್ ಸಿಂಗರಮಂ ಮಾಡಿ ಹೆಜಸಾರ್ದು ನಿಂದು ನೋಡಲಂಜಿ ಕಣ್ಮುಚ್ಚಿ

೧. ಸಮಸ್ತಮುಖ್ಯಾ (ಕೊ.); ಪ್ರಸನ್ನಮುಖ್ಯಾ (ಡ.) ೨-೨. ಬಂದಸುರರ (ಜೆ. ಯು. ಕೊ.) ೩. ಹಾರಮುಂ ( ಕೂ. ) ೪. ನಳವಡಿಸಿ ( ದಾ. ) ೫. ಘವಲೋ ( ಬ. ಯು. ) ೬. ಕೃತನಸ್ಪ (ಕೊ.) ೭. ದೇವ ( ದಾ. ಕೊ. ). ೮. ಲಣ್ಮದೆ ( ದಾ. ಡ. ಕೊ. ).

ಭಯದಿಂ ಶಿವಶಿವ ಜಯಜಯಯೆನುತ್ತುಮಿರೆ ದಧೀಚಿ ದುರ್ವಾಸ ವಸಿಷ್ಠ ವಾಮದೇವ ಭೃಗು ಕಶ್ಯಪಾದಿ ಮುನಿಜನಂಗಳ್ ಶಿವನ ಕಾಂತಿಯಂ ಕಂಡು ಸಿರೀಕ್ಷಿಸಲ್ಕಣ್ಮದೆ ಚೇತೋದೃಷ್ಟಿಯಿಂ ನೋಡಿ,

ಸುಹಾಸ್ರಗ್ಧರೆ

ಮಿಗ್ಗಿಲೆತ್ತಂ ಜ್ಯೋತಿಗಂ ಪಾವಕರುಚಿ ಎಸೆವಾ ಜ್ಯೋತಿಗಂ ಪಾವಕಂಗಂ<br>
ಮೃಗಲಕ್ಷ್ಮಜ್ಯೋತ್ಸ್ನೆಯೆಂತುಂ ಕರಮುಸದಳವಾ ಜ್ಯೋತಿಗಂ ಪಾವಕಂಗಂ<br>
ಮೃಗಲಕ್ಷ್ಮಜ್ಯೋತ್ಸ್ನೆಗಂ ಭಾಸ್ಕರರುಚಿ ಪಿರಿದಾ ಜ್ಯೋತಿಗಂ ಪಾವಕಂಗಂ<br>
ಮೃಗಲಕ್ಷ್ಮಜ್ಯೋತ್ಸ್ನೆಗಂ ಭಾಸ್ಕರರುಚಿಗಮತರ್ಕ್ಯಂ ವಿರೂಪಾಕ್ಷತೇಜಂ ೬೧

ಎಂದು ಪೊಗಳುತ್ತಿರ್ಪ ಸಮಯದೊಳ್ ಶಿವನ ವಿವಾಹಕ್ಕೆ ಸಕಲದೇವಕುಲಂ ಹರ್ಷದಿಂ ಬರುತಿರ್ಪಲ್ಲಿ,

ಚಂಪಕ

ಸುರಪತಿಯಾನೆಯಂ ಹುತವಹಂ ತಗರಂ ಸಮವರ್ತಿ ಕೋಣನಂ<br>
ನಿರೃತಿ ಮನುಷ್ಯನಂ ಜಳಧಿಪಂ ನೆಗಳಂ ಪವಮಾನನೇಣನಂ<br>
ಹರಸಖನಶ್ವಮಂ ಶಶಿಧರಂ ವೃಷನಂ ನಲಿದೇಱಿ ಬಂದರ-<br>
ತ್ಯುರುತರನಂದಿವಾಹನವಿವಾಹಮಹೋತ್ಸವದೇಳ್ಗೆಗಳ್ಕಱಿಂ ೬೨

ಲೋಕೈಕಬಂಧುವೆನಿಪ ಪಿ-<br>
ನಾಕಿಯ ಪರಿಣಯನದುತ್ಸವಕ್ಕತಿಮುದಮಂ<br>
ಕೈಕೊಂಡುಕೊಂಡು ಕೊನೆಯು<br>
ತ್ತೇಕಾದಶರುದ್ರರಳ್ತಿಯಿಂ ನಡೆತಂದರ್ ೬೩

ಮೇದಿನಿಯುಮನಂಬರಮುಮ-<br>
ನಾ ದಿಕ್ಚಕ್ರಮುಮನಂಶುಕುಳದಿಂ ಬೆಳಗು-<br>
ತ್ತಾದಂ ಸಂತಸದಿಂದಂ<br>
ದ್ವಾದಶರವಿಗಳ್ ಮಹೋಜ್ಜ್ವಳರ್ ನಡೆತಂದರ್ ೬೪

೧. ಅಗಸ್ತ್ಯಾದಿ (ಮ.) ೨. ದೇವನಿಕಾಯಂ (ಬ.) ೩. ವೃಷಭೇಂದ್ರನನೇಱಿ (ಬೆ. ಬ. ತ. ಕೊ.) ೪. ಮಹೋತ್ಸವ (ಕಾ.) ೫. ರಳ್ಕಱಿಂ (ಕಾ. ಬೆ. ಬ.)

ದೇವರ ದೇವನ ಗರಳ-
ಗ್ರೀವನ ಭಕ್ತೈಕಬಾಂಧವನ ಸಕಳಜಗ-
ಜ್ಜೀವನ ಮದುವೆಗೆ ನೆರೆದ-
ಪ್ಪಾವಸುಗಳ್ ನಡೆದು ಬಂದರೆತ್ಯುನ್ನತಿಯಿಂ ೬೫

ವರತೇಜದಿಂ ಪವಿತ್ರಾ-
ಚರಣೆಯಿನತಿಕಮನವಿಮಳಸಾಮರ್ಥ್ಯತೆಯಿಂ
ಕರಮೆಸೆವನುನಯದಿಂ ರಾ-
ಜಋಷಿ ಬ್ರಹ್ಮಋಷಿ ದೇವಋಷಿಗಳ್ ಬಂದರ್ ೬೬

ಅವರಾರೆಂದೊಡೆ,

ಮತ್ತೇಭ

ಪರಮದೂರ್ವಾಸನಗಸ್ತ್ಯ ಜಹ್ನು ಕಪಿಲಂ ಕೌಂಡಿನ್ಯ ಮಾಂಡವ್ಯ ಭಾ-
ಸುರಶಾತಾತಪ ವಾಮದೇವ ಋಷಿವಿಶ್ವಾಮಿತ್ರ ಮೈತ್ರೇಯ ಬಂ-
ಧುರಮಾರ್ಕಂಡೇಯ ದೇವಲಾಖ್ಯನನಿಳಾವಂ ಸೂತನಾ ವ್ಯಾಸನಾ
ತ್ವರಿತಂ ಚಿತ್ರಶಿಖಂಡಿ ಗಾಲವವೃಷಂ ಜಾಬಾಲಿ ವಾಲ್ಮೀಕಿಗಳ್ ೬೭

ಚಂಪಕ

ಪರಮದಧೀಚಿ ರೋಮಜ ಪುಲಸ್ತ್ಯ ಪರಾಶರ ಯಾಜ್ಞವಲ್ಕ್ಯಯಂ-
ಗಿರ ಭೃಗು ಪುಂಡರೀಕ ಋಷಿಕಶ್ಯಪ ಕೌಶಿಕ ಗಾರ್ಗ್ಯ ಗೌತಮಂ
ವರಸನಕಂ ಸನಂದನ ಸನತ್ಸು ಭಗೀರಥ ಕುತ್ಸ ವತ್ಸ ಭಾ-
ಸುರಜಮದಗ್ನಿ ಜೈಮಿನಿ ವಸಿಷ್ಠ ಮತಂಗ ಮರೀಚಿಯತ್ರಿಗಳ್ ೬೮

ಮತ್ತಮನಂತರದಲ್ಲಿ,

೧. ರತ್ಯುತ್ಸವದಿಂ ( ಶಾ. ದಾ. ಕ. ) ೨. ಧರಣದಿ ( ಬ. ) ೩. ಶಾಂಡಿಲ್ಯ ( ಮ. ) ೪. ಸನತ್ಸ ( ಶಾ. ) ೫. ಭಾ । ಸ್ಕರ ( ಕೋ. )

ಪ್ರತಿಷ್ಠೆಯುಮಂ ಮಾಡಿ ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರನುಮತದಿಂ ಪ್ರಾಣಾಯಾಮಮಂ ಮಂತ್ರಿಸಿ ಸಮಿತ್ಪರಿಸ್ತರಣಂ ಪಾತ್ರಾಸಾಧನಂ ಆಜ್ಯಸಂಸ್ಕಾರಂ ಸ್ರುಕ್ಸ್ರುವಸಮ್ಮಾರ್ಜನಂ ದೂರ್ವಾಯವಹಸ್ತಬಂಧನಾದಿ ಸತ್ಕ್ರಿಯೆಗಳಿಂ ಹೋಮಮಮಂ ಮಾಡುತ್ತಿರ್ದು,

ಭಾವಿಸಿ ಸ್ತುಂತ್ರಾವಳಿಯಿಂ-
ದೋವುತೆ ಹುತವಹನೊಳೆಸೆವ ಲಾಜ್ಯಾಹುತಿಯಂ
ತೀವಿದನಂತರಮುಗಸುತೆ
ದೇವನ ಬಲದಿಂದೆಡಕ್ಕೆ ಬಂದಳನೂನಂ ೯೭

ಇಂತು ಬರೆ ಪೂರ್ಣಾಹುತಿಯಂ ಕೊಟ್ಟು ಹೋಮಸಮಾಪ್ತಿಯೊಳಾಪ್ತನಪ್ಪ ಕಮಳಜಂ ಸಪ್ತಪದಿಯಂ ಕಟ್ಟಳ್ಕಱಿಂ ಮೆಟ್ಟಿಸಿ ತದನಂತರಂ ದೇವದಂಪತಿಗಳಂ ಸಿಂಹಾಸನದೊಳಲಂಕರಿಸೆ ಸಖನೆನಿಪ ನಿಮಿತ್ತಂ ಕುಬೇರಂಗೆ ನಿರೂಪಮಂ ಕೊಟ್ಟು ನಾರದಾದಿ ಋಷಿಗಳಂ ಕಳಿಪೆ ದಿಟ್ಟಮೂಱಿರಸಂ ನಾರಾಯಣಪ್ರಿಯುಂ ಕಾಮಾರಿಯಾರೋಗಣೆಗೆ ನಡೆತಂದೆಡೆಮಾಡಿದೆಡೆಯೊಳಿಕ್ಕಿರ್ದುಚಿತಾಸನಮನವಷ್ಟಂಭಿಸೆ ನಂದೀಶ್ವರವೀರಭದ್ರಾದಿಯಾದ ಗೆಣಂಗಳ್ ಹರಿವಿರಿಂಚಿಪುರಂದರಾದಿ ಸಮಸ್ತಸುರಸಮೂಹಂ ಪಙ್ಕ್ತಿಯೊಳ್ ಕುಳ್ಳಿರೆ ಪಾರ್ವತಿಯೊಡನಮೃತಾನ್ನಮನಾರೋಗಿಸಿ ಕೆಯ್ಸಟ್ಟಿಗೊಂಡು ತಾಂಬೂಲಮನಾದರಿಸುತ್ತುಮಂತಿಂತು ಕಂತುಮದಮರ್ದನಂ ನತಾಶೇಷಂ ಚತುರ್ಥಿಯಂ ಕಳೆದು ಸಾಕಾರನಿಧಿಯೊಳ್ಕುಳಿಯಾಡಿ ಗಿರಿರಾಜಂಗೆ ಕರುಣಿಸುತ್ತುಂ ಮೇನಾದೇವಿಯರ ಮನ್ನಿಸುತ್ತುಂ ಗಿರಿಜೆಯನಾಲಂಗಿಸುತ್ತುಂ ವೃಷಭಸಮಾರೂಢಂ ದಶಭುಜಪ್ರಖ್ಯಾತಂ ಮಹಿಮಾನಿಧಿ ಮಹಾದೇವನುರಗಾಭರಣಂ ಗಜಾಜಿನಾವರಣಂ ಶರಣಕುಲಕಲ್ಪವೃಕ್ಷಂ ಸಕಲದೇವಗಣಪರಿವೃತಂ ಶೈಳಜಾವರಂ ಶೂಳಧರಂ ಭಾಳೇಂದುಮೌಳಿ ಕೈಲಾಸಾಭಿಮುಖನಾಗಿ,

---

೧. ದುರ್ವಾವಲಯು (ಅ) ೨. ಗಣಂಗಳುಂ (ಕಾ.); ಗಣತತಿ (ಅ). ೩. ದೇವಿಯಂ (ಕಾ.); ದೇವಿಯು (ಅ).

ಚಂಪಕ.

ಬಳುವಳಿಯಾನೆಯಂ ಬಳಿಯ ರತ್ನಮುಮಂ ಬಳಿಯಶ್ವವೀಥಿಯಂ
ಬಳುವಳಿಯರ್ಥಮುಂ ಬಳಿಯ ೧ಸಾಣೆಯುಮಂ ಬಳಿಯಾಪ್ತವರ್ಗಮಂ
ಬಳುವಳಿಯಂಗನಾನಿಕರಮಂ ಪದೆಪಿಂದವಳೋಕಿಸುತ್ತೆ ಕೋ-
ಮಳಪುಳಕಂಗಳೇಳ್ಗೆಯನೊಡಂಬಡುತುಂ ನಡೆತಂದನೀಶ್ವರಂ ೯೮

ಆ ಸಮಯದೊಳ್,

ಹರನೀ ಬಂದನೆ ಗಿರಿಜಾ-
ವರನೀ ಬಂದನೆ ಮಹೇಶನೀ ಬಂದನೆ ಶಂ-
ಕರನೀ ಬಂದನೆನುತ್ತುಂ
ಪರೆದುವು ದೆಸೆದೆಸೆಗೆ ಬಹಳಕಹಳಾನಾದಂ ೯೯

ಅಂತು ಕರೆವ ಕಹಳಾನಾದಮಂ ಕೇಳುತ್ತುಂ ನಡೆತಂದು ಕೈಲಾಸಪುರದ್ವಾರ ಪಿಲಿಯದೊಳ್ ಪುಗುತರ್ಪಾಗಳ್,

ಕಟ್ಟಿದ ಗುಡಿಗಳ ಮುಗಿಲಂ
ಮುಟ್ಟಿದ ತೋರಣದ ನೆರೆದು ನೋಳ್ಪ ಬಲೆಯರೊಂ-
ದೊಟ್ಟಜೆಗಳ ಲಾವಣ್ಯಮು-
ದಿಟ್ಟಣಮೆನಿಸಿತ್ತು ಶಿವನ ಕಣ್ಗಂ ಮನಕಂ ೧೦೦

ಅಂತುಮಲ್ಲದೆಯುಂ,

ಮತ್ತೇಭ

ತರದಿಂ ವೇದಿಕೆಯೇಱಿ ಭದ್ರಚಯಮಂ ಬಂದೇಱಿಯುತ್ಸಾಹದಿಂ
ಕರುವಾಡಂಗಳನೇಱಿ ವೃಕ್ಷಕುಲಮಂ ಸಾರ್ದೇಱಿಯೊಪ್ಪಿರ್ದ ಗೋ-
ಪುರವೃಂದಗಳನೇಱಿ ಶೀತಕರಬಿಂಬವ್ರಾತವೇಳ್ವಂದವೊ-
ಲರವಿಂದಾಕರವೇಳ್ದವೋಲ್ ತುಱುಗಿ ನೋಡಿತ್ತಲ್ಲಿ ಕಾಂತಾಜನಂ ೧೦೧

ಅಂತು ನೋಡುವ ಕಾಂತೆಯರೊಳೊರ್ವಳ್,

೧. ವಸನಂ ( ಅ. ) ೨. ವಲಯುಮಂ ( ಕಾ. ಅ. )

ಚಂಪಕ.

ನಡುವೆ ವಿಳಾಸದಿಂ ವೃಷಭರಾಜನನೇಱಿದವಂ ಶಿವಂ ಸಮಂ-
ತ್ತೊಡನೆ ಮಹೇಶನಂ ಪ್ರಿಯದೊಳಪ್ಪಿದವಳ್ ಗಿರಿಜಾತೆಯಾಹ ಚೆ-
ಲ್ವೊಡರಿಸಿತಾಹ ದಂಪತಿಗಳಾಹ ಜಗತ್ಪ್ರಭುಗಳ್ ಸುಭಾಗ್ಯರೆ-
ನ್ನೊಡೆಯರೆನುತ್ತೆ ಕೆಯ್ಮುಗಿದು ಬಣ್ಣಿಸುತಿರ್ದಳತಿಪ್ರಮೋದದಿಂ ೧೦೨

ಪುತ್ತನೊರ್ವಳುಮಾಮಹೇಶ್ವರರಂ ಕಂಡು ಕೊಂಡು ಕೊನೆಯುತ್ತಿರ್ದ-
ಳದೆಂತೆಂದೊಡೆ,

ಸ್ಥಿರದಂಪತಿಗಳ್ ಮಂಗಳ-
ಕರದಂಪತಿಗಳ್ ವಿಶೇಷದಂಪತಿಗಳ್ ಭಾ-
ಸುರದಂಪತಿಗಳ್ ವಸುಧಾ-
ವರದಂಪತ್ತಿಗಳ್ ಮನೋಜಹರದಂಪತಿಗಳ್ ೧೦೩

ಎಂದು ಪೊಗಳುತ್ತುಮಿರೆಯಿರೆ,

ಇಂತಿಂತೊಪ್ಪುವ ಸಂಭ್ರಮ-
ಮಂ ತನೆ ನೋಡುತ್ತೆ ಪದೆದು ಕೊಂಡಾಡುತ್ತುಂ
ಕಂತುಹರಂ ಸಂತಸದಿಂ
ಮುಂತಣ ಕೈಲಾಸವರಮನೆಗೆ ನಡೆತಂದಂ ೧೦೪

ಅಂತೊಳಪೊಕ್ಕು ಬಂದಾಗಳ್,

ಉತ್ಪಲ.

ಆರತಿಯೆತ್ತೆ ರುದ್ರಗಣಿಕಾನಿಕರಂ ಸರಸೀಜನಾಭನುಂ
ನೀರಜಪುತ್ರನುಂ ಹೊಗಳೆ ದೇವಗಣಾಳಿಯಳ್ಕಱಿಂದೆ ಕೆಯ್ಯ-
ಪಾರಿಸೆ ನಂದಿಯಿಂದಮಿಳಿದುನ್ನತಸಸ್ತುತಸಿಂಹಪೀಠಮಂ
ತಾರಗಿರೀಂದ್ರನಾಥನೊಸೆದೇಱಿದನದ್ರಿಸುತಾಸಮನ್ವಿತಂ ೧೦೫

ಅಂತು ಸಿಂಹವಿಷ್ಟರಮನೇಱಿ,

---

೧. ಸರಸೀರುಹಾಕ್ಷನುಂ ( ಅ. ) ೨. ವಾರಿಜ ( ದಾ. ಕಾ. )

ಗಿರಿಪತಿಯಂ ಮೇನೆಯುಮಾ-
ದರದಿಂ ಬೀಳ್ಕೊಟ್ಟು ಮಕುಟರತ್ನಪ್ರಕರ
ಸ್ಫುರಿತಪ್ರದ್ಯೋತಪ್ರೋ-
ತ್ಕರವಿಳಸಿತವಳಯದೊಳಗೆ ಶಿವನೆಸೆದಿರ್ದಂ ೧೦೬

ಆಗಳ್ ಗಿರಿರಾಜನುಂ ಮೇನೆಯುಂ ಬೀಳ್ಕೊಳುತುಂ ಪಾರ್ವತಿಯಂ ನೋಡಿ.

ಉತ್ಪಲ.

ಮಾತೆ ಶಿವಂ ಪಿತಂ ಶಿವನನಂತಬಲಂ ಶಿವನೂರ್ಜಿತಂ ಶಿವಂ
ಪ್ರೀತಿ ಶಿವಂ ಸ್ಥಿರಾಯು ಶಿವನೊಳ್ಪು ಶಿವಂ ಸುಕೃತಂ ಶಿವಂ ಘನ-
ಖ್ಯಾತಿ ಶಿವಂ ಧವಂ ಶಿವನಪಾರಸುಖಂ ಶಿವನದ್ರಿಜಾತೆ ಸಂ-
ಪ್ರೀತಿ ಶಿವಂ ಶಿವಂ ನಿನಗೆ ಚಿಂತಿಸದಿರ್ ಮಱೆದೆಮ್ಮನೊರ್ಮೆಯುಂ ೧೦೭

ಎಂದುಳ್ಳುದನುಪಚಾರಮಿಲ್ಲದೆ ನುಡಿದು ಸಾದರಂ ಪೋದರಿತ್ತಲ್ ಚಂಡ-ಕೀರ್ತಿಗಳ್ ಮೆಯ್ಯಿಕ್ಕಿ ನಿಂದು ಕೆಯ್ಯಂ ಮುಗಿದು,

ಚಂಪಕ.

ಅತುಳಕಪಾಲಿ ಪಾಲಿಪುದುಮಾಪತಿ ಮಾಪತಿರಾಜ ರಾಜಭೂ-
ಸಿತ ಸಿತಭಸ್ಮ ಭಸ್ಮಮಯಮನ್ಮಥವಿಗ್ರಹವಿಗ್ರಹ ವಿಜಾ-
ನತ ನತಸಿದ್ಧ ಸಿದ್ಧ ಸಕಳಾತ್ಮ ಕಳಾತ್ಮ ವಿಶೇಷಶೇಷಪೂ-
ಜಿತ ಜಿತಕಾಲ ಕಾಲವಿಲಸದ್ಗಳ ಸದ್ಗಳ ಹಂಪೆಯಾಳ್ದನೇ ೧೦೮

ಕರುಣಿಸು ನಾಥ ನಾಥಕುಲಸೇವಿತ ಸೇವಿತಕಾಲ ಕಾಲಸಂ-
ಹರಣ ರಣಾಗ್ರರಂಜಿತಜಿತಾಮರತಾಮರಸಾಕ್ಷಸಾಕ್ಷಸಂ
ಸ್ಮರ ನಿಜದರ್ಪದರ್ಪಕವಿನಾಶ ವಿನಾಶನಿಕಾಯಕಾಯವಿ-
ಸ್ತರಿತಭುಜಂಗ ಜಂಗಮಕೃಪಾವನಪಾವನ ಹಂಪೆಯಾಳ್ದನೇ * ೧೦೯

೧. ನಿಳಯ (ಕಾ. ಬೆ. ಯ.) ೨. ಸಾದರದಿಂ (ಅ.) ೩. ಮನ್ಮಥವಿಗ್ರಹೋ । ನ್ನತ (ಕಾ. ಬೆ.): ಮನ್ಮಥವಿಗ್ರಹಪ್ರಜೋ । ನ್ನತ ( ಬ. ) ೪. ಸಾ । ಕ್ಷರ ( ಅ. ) ೫. ಕರ ( ಅ. ) * ೧೦೯ ನೆಯ ಪದ್ಯವು ಮ. ಕ. ಡ. ಪ್ರತಿಗಳಲ್ಲಿಲ್ಲ.

ಎಂದಿತು ಸಂತಸದಿಂ ಕೆಯ್ವಾರಂ ಮಾಡೆ ಕೇಳ್ದು ಡಾಡಧರಗರ್ವಪರ್ವತಕುಲಿಶಂ ಕುಸುಮಕೋದಂಡಕುಮುದಮಾರ್ತಂಡಂ ಪುರತ್ರಯಮೇಘಮಹಾನಿಲಂ ಶತಪತ್ರಪುತ್ರಶಿರಚ್ಛೇದನಕರಂ ಸರೋಜನಯನನಯನಸರೋಜಪೂಜಿತಪದಂ ಜಲಂಧರಮರಾಳಮೇಘಗರ್ಜಿತಂ ಅಂಧಕಾಸುರಾರಣ್ಯದಾವಾನಳಂ ಲಾಲೆಸುರೇಭಪಂಚಾನನಂ ದುರಿತಪಂಚಾನನಶರಭಮೂರ್ತಿ ದಕ್ಷಮುಖನಿರ್ಧೂಮಧಾಮಂ ಚತುರ್ದಶಭುವನಚಕ್ರಭಾಸ್ಕರಂ ಬ್ರಹ್ಮಾಂಡಭರಿತಕೀರ್ತಿಮಯಂ ಸರ್ವಬ್ರಹ್ಮಾಂಡ[illegible]ಳಭರಿತಮಹಾಮಹೀರುಹಂ ವರನಿಚಯರಚಿತಪ್ರಶಸ್ತಹಸ್ತಂ ಸೋಮಧರಂ ಸೋಮಂ ಸಾಮಗೇಯಪ್ರಿಯಂ ವಿಮಳತ್ರಿಣೇತ್ರಂ ಕಮಲಜಶಿರಃಪಾತ್ರಂ ಸುರರಾಜರಾಜ ಶರಣಸುರಭೂಜಂ ದೇವಗಣಸಮಾಜಂ ರವಿಕೋಟಿತೇಜಂ ಶೃಂಗಾರಸಾರಂ ವೀರರಸಪೂರಂ ರೌದ್ರಪ್ರತಾಪಂ ಭಯಾನಕರೂಪಂ ಪಿನಾಕಚಾಪಂ ಸಜ್ಜನಸಮೀಪಂ ಅದ್ಭುತಶೀಲಂ ಶೈಲಜಾಲೋಲಂ ಘನಘನಸ್ಥೂಲಂ ವಿಶ್ವಲೋಕಪಾಲಂ ನತಜನವಿತತಸಂಪದಂ ಪ್ರೇಮಜನಕಾಮಧುಘಂ ಭಕ್ತಜನಭಾಗ್ಯೋದಯಂ ಮುಕ್ತಿಪ್ರದಾಯಕಂ ಪ್ರಮಥಗಣಪುಣ್ಯಫಲಾಕಾರಂ ಕೃಪಾಮೇರು ದಯಾನಿಧಿ ಪಾರ್ವತೀಪ್ರಾಣನಾಥನೆನಿಪ ಪಂಪಾಪುರಾಧಿಪ ಶ್ರೀವಿರೂಪಾಕ್ಷಂ ಚಂಡಕೀರ್ತಿಗಳೆ[illegible]ಚ್ಚಿ ಪಸಾಯನಮನಿತ್ತು,

ಮತ್ತೇಭ.

ಹರನುದ್ಯದ್ಗಿರಿಜಾಮನೋಹರಸುಖಾಂಭೋರಾಶಿಚಂಚತ್ಸುಧಾ-
ಕಿರಣಂ, ತತ್ಸುಖದಿಂದಮಿರ್ದುದಯಿಸಿರ್ದಾ ಸ್ಕಂದನಿಂ ತಾರಕಾ-
ಸುರನಂ ತೀರ್ಚಿ ಸಮಸ್ತಲೋಕಜನತಾಸಂತುಷ್ಟಿಯಂ ಮಾಡಿ ಶಂ-
ಕರನೊಪ್ಪಿರ್ದನುದಾರಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೧೧೦

---

೧. ಮಹಾಬಲಂ ( ದಾ ). ೨. ಗರ್ಜಿತಮಹಾಮೇರುನಿಲಯಃ (ಅ. ದಾ.). ೩. ಸಾಮಗಾನ ( ಅ ). ೪. ಪ್ರಮಥಜನ ( ಕಾ. ಗೊ. ). ೫–೫. ಫಲಪ್ರತಾನಃ ಕಾರುಣ್ಯಪಾರಾವಾರಃ ( ಅ ). ೬–೬. ನನೂನಸಂಪದಕರಂ ಪಂಪಾಪುರಾಧೀಶ್ವರಂ ( ಬೆ. ಬ. ಗ. ಅ. ).

ಹರಿಸಂ ಮಿಗೆ ಕೈಲಾಸದ
ಪುರವೊಳಗೊಪ್ಪಿರ್ದನಪ್ರವನಪ್ಪಯರೂಪಂ
ವರಶರಣಾಳಿಗೆ ಬೇಡಿದ
ವರಮಂ ಕರುಣಿಸುತೆ ಹಂಪೆಯ ವಿರೂಪಾಕ್ಷಂ ೧೧೧

ಶಾರ್ದೂಲ

ಎಂದಿಂತೊಪ್ಪಿರೆ ಮೆಚ್ಚಿ ಮೆಚ್ಚಿ ಹರಿದೇವಂ ಪೇಳ್ದ ಸತ್ಕಾವ್ಯಮಂ
ಚೆಂದಂಬೆತ್ತಿರಲೋದುವಾರ್ತಸುಬಧಿಂ ಕೇಳ್ವಾದರಿಪ್ಪರ್ಗೆ ಸಾ-
ನಂದಂ ಮಾಡುಗೆ ಪುಣ್ಯಭೋಗಚಯಮಂ ನಿತ್ಯಾಯುಮಂ ಶ್ರೀಯುಮಂ
ನಂದೀಶಾದಿಗಣಪ್ರತಾನದೊಡೆಯಂ ಪಂಪಾಪುರಾಧೀಶ್ವರಂ ೧೧೨

ಮಹಾಸ್ರಗ್ಧರೆ.

ತರದಿಂದಂ ಶಬ್ದಮರ್ಥಂ ರಸವಿಸ್ತರಮಲಂಕಾರದಿಂ ತೀವ್ರತೊಳ್ಪಿಂ
ಧರೆಯೊಳ್ ಕೆಯ್ಕೊಂಡು ಪಂಪಾಪುರದರಸವಿರೂಪಾಕ್ಷನಿತ್ತಾಜ್ಞೆಯಿಂದಂ
ಹರಿದೇವಂ ಭಕ್ತಿಯಿಂದಂ ಗುರುಕರುಣದಿನುತ್ಸಾಹದಿಂ ಮೆಚ್ಚಿ ಪೇಳ್ದಾ
ಗಿರಿಜಾಕಲ್ಯಾಣಮಿಂತೀ ಶಶಿರವಿಧರೆಗಳ್ ನಿಲ್ವಿನಂ ನಿಲ್ಕೆ ಸ್ವತಂ ೧೧೩

ಮತ್ತೇಭ

ಇಳೆಯೊಳ್ ಪೆರ್ಮೆಳೆಯುಂ ಸಮಸ್ತಫಲಮುಂ ಸಂತೋಷಮುಂ ಧರ್ಮಸಂ-
ಕುಳಮುಂ ಸತ್ಯಮುಮೀಶ್ವರಾರ್ಚನೆಯ ಸೊಂಪುಂ ಶ್ರೀಯುಮಾಮುಂ ನಿರಾ-
ಕುಳಮೆಂದುಂ ನೆಲಸಿರ್ಪುದೊಂದು ತೆಜಸಂ ತಾಂ ಮಾಳ್ಕೆ ಸರ್ವೇಶ್ವರೀ-
ವಿಳಸತ್ಸಂಗಸುಖಾಬ್ಧಿ ಶೀತಕಿರಣಂ ಪಂಪಾಪುರಾಧೀಶ್ವರಂ * ೧೧೪

---

೧-೧. ವರಮಂ । ಕರುಣದೆ (ಕ.) ೨. ನಚ್ಚಿಮೆಚ್ಚಿ (ಶಾ. ಅ.) ೩. ಪುರಪತಿಪ (ಶಾ. ಬಿ. ಗ.) ೪. ಕಾವ್ಯಂ (ಶಾ. ಬಿ. ಬ. ಮ. ಅ. ಡ ಗ) ೫-೫. ರವಿಶಶಿರಸೆಗಳ್‌ನಿಲ್ವಿನಂ (ಶಾ. ಬಿ. ಬ ಮ. ಗ.); ಶಶಿರವಿಧರೆ ನಿಲ್ವನ್ನೆಗಂ (ಅ.) ೬. ಧರ್ಮಮುಂ । ಕಳೆಯುಂ (ಶಾ.) * ೧೧೩ ನೆಯ ಪದ್ಯದ ಮುಂದೆ ದಾ. ಪ್ರತಿಯಲ್ಲಿ:— "ನುತಿಯಿಂ ಸಕಲಗಣಂಗಳ । ಶ್ರುತಿಗಮನದ ಕೀರ್ತಿಯಿಂ ಸಮಸ್ತ ಮುಮುಕ್ಷ್ವರಾ ॥ ಮತಿಯಾರಾಧನೆಯಿಂ ಪಾ । ರ್ವತಿಯೊಡನೀಶ್ವರನುರೆ ಮೆರೆವ ಪ್ರಸ್ತಾವದೊಳುಂ ॥" ಎಂಬ ಪದ್ಯವಿದೆ.

ಮತ್ತೇಭ.

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ-
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ-
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೧೫

ಗದ್ಯ.

ಇದು ಸಮಸ್ತಸುರಾಸುರನಿಕರಮಕುಟಖಚಿತದಿನಕರಕರಾಧಿಕ್ಯಮಾಣಿಕ್ಯ-ಪ್ರಭಾಪುಂಜರಂಜಿತಚರಣನೆನಿಪ ಪಂಪಾವಿರೂಪಾಕ್ಷಶ್ರೀಪಾದಕಮಲಮಕ-ರಂದಮಧುಕರಾಯಮಾನಸತ್ಕವೀಶ್ವರಹಂಪೆಯಹರಿಹರದೇವವಿರಚಿತಮಪ್ಪ

**ಶ್ರೀಗಿರಿಜಾಕಲ್ಯಾಣಮಹಾಪ್ರಬಂಧದೊಳ್**

ಪಾರ್ವತೀಪರಮೇಶ್ವರವಿವಾಹವರ್ಣನಂ ದಶಮಾಶ್ವಾಸಂ

End. 3. 3. '68.

**ಗಿರಿಜಾಕಲ್ಯಾಣಂ ಸಮಾಪ್ತಂ**



# ಗಿರಿಜಾಕಲ್ಯಾಣದ ಪದ್ಯಗಳ ಅಕಾರಾದಿ.

